# ಭೈರವಿ

ದಿವಂಗತ

ಶರಚ್ಚಂದ್ರ ಚಟ್ಟೋಪಾಧ್ಯಾಯ

ಅನುವಾದಕ :-

ಮಲ್ಲಾರಿ

ಮಾರಾಟಗಾರರು :-

ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

ಮುದ್ರಕರು:-
**ಈಸ್ಟರ್ನ್ ಪ್ರೆಸ್**
**ಜಯಚಾಮರಾಜೇಂದ್ರ ರಸ್ತೆ**
ಬೆಂಗಳೂರು ನಗರ

೧೯೪೫

**ಬೆಲೆ ೩—೪—೦**

ಪ್ರಕಾಶಕರು:-
**ಶ್ರೀ ಮ. ಅನಂತಮೂರ್ತಿ**
ವಿಶ್ವೇಶ್ವರಪುರಂ
ಮತ್ತು
**ಶ್ರೀ ಪಾಂಡೇಶ್ವರ ಸುಬ್ಬರಾವ್**
ಪಾರ್ಕ್ ವ್ಯೂ,
ಬೆಂಗಳೂರು ನಗರ

# ತಪ್ಪು ಒಪ್ಪು

---:---

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೭ | ೧೪ | ಓದಿರುವ | ಓದಿರುವಿ. |
| ೯ | ೨೧ | ಮೊದಲ | ಮೊದಲಿ |
| ೧೬ | ೨೪ | ದಬ್ಬಾಳಿಗಳಿಂದ | ದಬ್ಬಾಳಿಕೆಗಳಿಂದ |
| ೧೮ | ೩ | ಚರೂಡು | ಚರೂಟು |
| ೨೬ | ೧ | ಭಯಂಯಂಕ | ಭಯಂಕರ |
| ೨೬ | ೧೧ | ಹೆಚ್ಚರಿಸಲಾರ | ಎಚ್ಚರಿಸಲಾರ |
| ೩೦ | ೨೦ | ನಾನಿಲ್ಲಿಗೆ | ನಾನು |
| ೩೧ | ೧೧ | ಇನ್ನೂ | ಇನ್ನು |
| ೫೮ | ೨೫ | ಮಿಲೇಚ್ಛ | ಮ್ಲೇಂಛ |
| ೫೯ | ೪ | ಹಾಕಿ ಆಟ | ಪಾಗ್ಯಾನ |
| ೬೧ | ೩ | ಪರಚಯಿಸುವವರಲ್ಲಿ | ಪರಿಚಯಿಸುವವರಲ್ಲಿ |
| ೮೩ | ೨೩ | ಉಳಿಸುವಕ್ಕೆ | ಉಳಿಸುವುದಕ್ಕೆ |
| ೯೮ | ೫ | ಅತಿರೇಯ | ಅತಿರೇಕ |
| ೧೦೩ | ೫ | ಹಾಕೆ | ಹಾಕಿ |
| ೧೦೬ | ೩ | ಹೂಕಾರದ | ಹೂಂಕಾರದ |
| ೧೦೬ | ೨೧ | ಹಾಕಿಯಾಟ | ಜಗಳ |
| ೧೧೯ | ೨೦ | ದಂತೆ | ದಂತ |
| ೧೨೫ | ೨೮ | ರೋಮಾಂಚಿತೆಯಾಗಳು | ರೋಮಾಂಚಿತಿಯಾಗಳು |
| ೧೨೮ | ೨೪ | ಒಮ್ಮಿರ್ಗೆಲ್ಲೊಮ್ಮೆ | ಒಮ್ಮೆಲ್ಲೊಮ್ಮೆ |
| ೧೩೧ | ೯ | ತುದಿತುಪಿಗೆ | ತುದಿಮುಟಿಗ |
| ೧೩೧ | ೧೭ | ಮಣಲು | ಮಳಲು |
| ೧೩೮ | ೨೬ | ಯುಹೂದಿ ನನ್ನ | ಯುಹೂದಿ |
| ೧೪೭ | ೧೨ | ಅಂಜುಂತಂಜುಂತ | ಅಂಜುತ್ತಂಜುತ್ತ |

* ಜಮಿಾದಾರರು ಎಂಬ ಇದ್ದ ಕಡೆಯಲ್ಲೆಲ್ಲ ಜಮಾನುದಾರರು ಎಂದು ಓದಿಕೊಳ್ಳಬೇಕು.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೪೮ | ೫ | ಹೋರಾಬೇಡಕಾಗಿದೆ | ಹೋರಾಡಬೇಕಾಗಿದೆ |
| ೧೪೮ | ೧೦ | ತುರುಬಿ | ತರುಬಿ |
| ೧೫೬ | ೭ | ಅರ್ಥವಾಯಿ | ಅರ್ಥವಾಯಿತು. |
| ೧೫೭ | ೬ | ನೋಡನೆಯಿ | ನೋಡದೆಯಿ |
| ೧೬೬ | ೩ | ಜಂತಿಗಳು | ಜಂತೆಗಳು |
| ೧೭೪ | ೪ | ಜನಾರ್ಧನನ್ನು | ಜನಾರ್ಧನನನ್ನು |
| ೧೭೪ | ೨೪ | ಯಲ್ಲ | ಯಲ್ಲಿ |
| ೧೭೭ | ೧೧ | ಕೊನಗ | ಕೊನೆಗೆ |
| ೧೮೦ | ೧೮ | ಕುತ್ತನ್ನು | ತುತ್ತನ್ನು |
| ೧೮೧ | ೨೧ | ಸ್ಯೆಯುಪದ | ಸಂಯುಮದ |
| ೧೮೯ | ೫ | ತಿಕ್ಷ್ಣದೃಷ್ಟಿಯಿಂದ | ತೀಕ್ಷ್ಣದೃಷ್ಟಿಯಿಂದ |
| ೧೮೯ | ೮ | ಹೇಳವುದಿಲ್ಲ | ಹೇಳುವುದಿಲ್ಲ |
| ೧೯೦ | ೨೬ | ಉಗಿ | ಉಗೆ |
| ೧೯೨ | ೯ | ಪಾವ | ಮಾವ |
| ೧೯೪ | ೨೪ | ಹೋಗುವಳು | ಹೋಗುವವಳು |
| ೧೯೭ | ೫ | ಆನಂಪನ್ನೂ | ಆನಂದವನ್ನೂ |
| ೧೯೯ | ೧೪ | ಮಾತನಾಡಿಯುಳೆಂದು | ಮಾತನಾಡಿಯಾಳೆಂದು |
| ೨೦೮(ಕೆಳಗಿನಿಂದ) | ೧೩ | ಬಿರಿ | ಬಿಗಿ |
| ೨೩೫ | ೧೩ | ಕಂಗೆಪ್ಟು | ಕಂಗೆಟ್ಟು |
| ೨೫೬ | ೨೫ | ಕಪ್ಪರಿಸಿಕೊಂಡು | ಕುಪ್ಪಸಿಳಿಕೊಂಡು |
| ೨೫೯ | ೧೮ | ಸುಗುಂಧ | ಸುಗಂಧ |
| ೨೬೯ | ೧ | ಪ್ರಸಾಹವಿತ್ತು | ಪ್ರಸಾದವಿತ್ತು |
| ೨೭೦ | ೧೨ | ಅಕಿಶಯೋಕ್ತಿ | ಅತಿಶಯೋಕ್ತಿ |
| ೨೮೪ | ೨೧ | ಉಪಯೋಗಿಸಿದರೆಂದರೆ | ಉಪಯೋಗಿಸಿರೆಂದರೆ |
| ೩೦೦ | ೧೦ | ಏಳಬೇಡಿ | ಏಳದಿರಲಿ |



# ಭೈರವಿ

## ೧

ಚಂಡೀಗಡದ ಚಂಡಿ ಪ್ರಾಚೀನ ದೇವತೆ. ವೀರಬಾಹು ರಾಜನ ಯಾವನೋ ಪೂರ್ವಜನು ಕಾಳಿಗವನ್ನು ಗೆದ್ದಾಗ ಬಾರುಕೀ ನದಿಯ ದಡದಲ್ಲಿ ಈ ಗುಡಿಯನ್ನು ಕಟ್ಟಿಸಿದ, ಮುಂದೆ ಬರಬರುತ್ತ ದೇವಾಲಯದ ಆಶ್ರಯದಲ್ಲಿ ಚಂಡೀಗಡದ ನಿರ್ಮಾಣವಾಯಿತು ಎಂದವಿ ಆಖ್ಯಾಯಿಕೆ.

ಮೊದಲು ಇಡೀ ಚಂಡೀಗಡ ಗ್ರಾಮವು ಚಂಡಿಯ ಸೊತ್ತಾಗಿಯೇ ಇದ್ದಿರಬಹುದು. ಈಗ ಮಾತ್ರ ಗುಡಿಯ ನೆರೆಹೊರೆಯ ಕೆಲ ಬಿಷ್ಟೆ ಭೂಮಿಯ ಹೊರತು ಮಿಕ್ಕ ಭೂಮಿಯನ್ನೆಲ್ಲ ಅವರಿವರು ಅಪಹರಿಸಿಕೊಂಡಿದ್ದಾರೆ. ಸದ್ಯ ಈ ಊರು ಬೀಜಗಾವದ ಜಮೀದಾರಿಗೆ ಒಳಪಟ್ಟಿದೆ. ಯಾವ ರಾಜಕಾರಣದಿಂದ ಯಾವ ಗೊಂದಲದಿಂದ ದೇವಿಯ ಆಸ್ತಿ ಅನಾಥವಾಗಿ ಅಸಹಾಯವಾಗಿ ಜಮೀದಾರನ ಗಂಟಲೊಳಗೆ ಇಳಿಯಿತೆಂಬುದನ್ನು ಸಾಮಾನ್ಯ ವಾಚಕರಿಗೆ ವಿವರಿಸಿ ಹೇಳುವ ಅಗತ್ಯವಿಲ್ಲ. ಚಂಡೀಗಡದ ಬಹುಭಾಗವು ದೇವಿಯ ಕೈ ಬಿಟ್ಟುಹೋಗಿದೆ ಎಂಬುದನ್ನಿಷ್ಟು ತಿಳಿದರೆ ಸಾಕು. ಇದರಿಂದ ದೇವರಿಗೇನೂ ಅಷ್ಟೊಂದು ನಷ್ಟವಾಗಿರಲಿಕ್ಕಿಲ್ಲ. ಆದರೆ ದೇವರ ಸೇವಿಕೆಯ ಚಡಪಡಿಕೆ ಮಾತ್ರ ಇಂದಿಗೂ ತಪ್ಪಿಲ್ಲ. ಅದರ ದೆಸೆಯಿಂದ ಈಗಲೂ ಜಗಳಗಳಾಗುತ್ತಿವೆ; ಒಮ್ಮೊಮ್ಮೆ ವಿಕೋಪಕ್ಕೂ ಹೋಗುತ್ತಿವೆ.

ದಬ್ಬಾಳಿಕೆಯ ವಿಷಯದಲ್ಲಿ ಬೀಜಗಾವದ ಜಮೀದಾರರು ಮುಂಚಿನಿಂದಲೂ ಕುಪ್ರಸಿದ್ಧರು. ಸುಮಾರು ಒಂದು ನೂರು ವರ್ಷ ಪೂರ್ವದಲ್ಲಿ ಜಮೀದಾರರು ಮಕ್ಕಳಿಲ್ಲದೆ ಸಾಯಲು, ಅವರ ಅಳಿಯ ಜೀವಾನಂದ ಚೌಧರಿ ಈ ಜಮೀದಾರಿಯ ಸಮ್ರಾಟನಾದ. ಅಂದಿನಿಂದ ಸಣ್ಣ ದೊಡ್ಡ ಪ್ರಜೆಗಳಿಗೆಲ್ಲಾ ನಾನಾ ತೆರದ ಉಪದ್ರವಗಳು ಆರಂಭವಾದವು. ಮೂವ

ಕಾಲೀಮೋಹನ ಬಾಬು ಅಳಿಯನ ಉಚ್ಛೃಂಖಲ ವರ್ತನಕ್ಕೆ ಸಿಟ್ಟಾಗಿ ಅವನನ್ನು ತ್ಯಜಿಸಿ ಬಿಡುವ ವಿಚಾರದಲ್ಲಿದ್ದನಂತೆ; ಆದರೆ ಅಕಸ್ಮಾತ್ ಮೃತ್ಯು ಆವರಿಸಿದುದರಿಂದ ಅವನಿಚ್ಛೆ ಹಾಗೆಯೇ ಉಳಿಯಿತಂತೆ.

ಈ ಜೀವಾನಂದ ಚೌಧರಿ ತನ್ನ ರಾಜ್ಯದ ಪರಿಶೀಲನೆಗಾಗಿ ಹೊರಟು ಚಂಡೀಗಡಕ್ಕೆ ಬಂದಿಳಿದ. ಊರಲ್ಲಿ ಅವನದೊಂದು ಸಣ್ಣ ಚಾವಡಿಯುಂಟು. ನಾಲ್ಕೂ ಕಡೆ ಗುಡ್ಡಗಳಿದ್ದ ಈ ಊರು ಗಾಳಿ ನೀರುಗಳಿಗೆ ಎಂದಿನಿಂದಲೂ ಹೆಸರಾದುದು. ವಿಶೇಷವಾಗಿ ಬಾರುಈ ನದಿಯ ಮಳಲು ಪ್ರದೇಶದ ನೀರು ಒಳ್ಳೆಯ ರುಚಿಕರವೆಂದು ಜೀವಾನಂದನ ಅಜ್ಜ ರಾಧಾಮೋಹನ ಬಾಬು ಊರ ಗಡಿಯಲ್ಲಿ ಹೊಳೆಯ ದಂಡೆಯ ಮೇಲೆ ಚಿಕ್ಕ ಭವನವೊಂದನ್ನು ಕಟ್ಟಿಸಿದ್ದ; ಅದರ ಹೆಸರು 'ಶಾಂತಿ ಕುಂಜ.' ಅವನು ಆಗಾಗ ಬಂದು ಅಲ್ಲಿ ಇರುತ್ತಿದ್ದ.

ರಾಧಾಮೋಹನನ ಮಗ ಕಾಲೀಮೋಹನನು ಈ ಊರಿಗೆ ಒಮ್ಮೆಯೂ ಬರಲಿಲ್ಲ. ಎಂದರೆ ಆ ಸ್ವರೂಪವು ಕೆಟ್ಟಿದೆ, ವೈಭವವು ಅಳಿದಿದೆ, ಸುವ್ಯವಸ್ಥೆ ನಷ್ಟವಾಗಿದೆ. ಸುತ್ತುಮುತ್ತಲೂ ಇದ್ದ ಹೂ ಹಣ್ಣುಗಳ ತೋಟವು ಅನಾಸ್ಥೆಯಿಂದ ಹಾಳಾಗಿ ಅಲ್ಲಿ ಕಾಡು ಬೆಳೆದಿದೆ; ಅಲ್ಲಿ ತೋಟಿಗನಿಲ್ಲ, ಕಾವಲುಗಾರನಿಲ್ಲ, ನೆರೆಹೊರೆಯಲ್ಲಿ ಯಾರ ಮನೆಯೂ ಇಲ್ಲ. ನದಿಯ ರುಕ್ಷವಾದ ಪಡದಲ್ಲಿ, ಅಡವಿಯ ನಡುವೆ, ಆ ದೊಡ್ಡ ಬಂಗಲೆ ಗತವೈಭವದ ಸ್ಮೃತಿ ಮಾತ್ರವಾಗಿ ನಿಂತಿದೆ; ಎಂದಿನಿಂದ ಈ ಮನೆಯೊಳಗೆ ಯಾರೂ ಪ್ರವೇಶಿಸಿಲ್ಲವೋ, ಈ ಊರಿನ ಕಚೇರಿಯ ಮುಖ್ಯ ಅಧಿಕಾರಿಗಳು ಮುಖ್ಯ ಕಚೇರಿಗೆ ಎಂದಿನಿಂದ ಸುಳ್ಳು ವರದಿ ಕಳುಹುತ್ತ ಈ ಮನೆಯನ್ನು ಅಲಕ್ಷಿಸುತ್ತ ಬಂದಿರುವರೋ ಯಾರೂ ಹೇಳಲರಿಯರು.

ಇಂತಹ ಪರಿಸ್ಥಿತಿಯಲ್ಲಿ ಅಕಸ್ಮಾತ್ ಒಂದು ದಿನ ಮೂರನೆಯ ಪ್ರಹರದಲ್ಲಿ ಹೊಸ ಜಮಿನಾದಾರ ಜೀವಾನಂದನು ಇಬ್ಬರು ಆಳುಗಳೊಂದಿಗೆ ಊರಿಗೆ ಬಂದ. ಚಾವಡಿಯ ಮುಂದೆ ಅವನ ಪಲ್ಲಕ್ಕಿ ನಿಂತಿತು. ಅವನು ಕೆಳಗೆ ಇಳಿಯಲಿಲ್ಲ ಕೂಡ. ಕಚೇರಿಯ ಕರಣಿಕ ಏಕಕೌಡಿ ನಂದಿಯನ್ನು ಕರೆದು, ತಾನು ಕೆಲ ದಿನ 'ಶಾಂತಿ ಕುಂಜ' ದಲ್ಲಿ ಇರುವುದಾಗಿ ತಿಳಿಸಿ, ಮರುಕ್ಷಣವೇ ನೇರವಾಗಿ ಅಲ್ಲಿಗೇ ಹೊರಟ.

ಪಾಪ, ಏಕಕೌಡಿಯ ಮೋರೆ ಭಯದಿಂದ ಕಪ್ಪಿಟ್ಟಿತು. ಶಾಂತಿ ಕುಂಜಕ್ಕೆ ಚೆಲೋ ಕಾಲುದಾರಿಯಾದರೂ ಇದೆಯೋ ಇಲ್ಲವೋ ಎಂಬುದೂ ಅವನಿಗೆ ಸಂದೇಹ. ಮನೆಯ ಬಾಗಿಲುಗಳು ಕೂಡ ಕಳವಾಗಿ ಹೋಗಿರುವ ಸಂಭವವಿತ್ತು. ಅದರ ಕೋಣೆಗಳಲ್ಲಿ ಹುಲಿ ಕರಡಿಗಳು ಸೇರಿಕೊಂಡಿರ ಲಿಕ್ಕೂ ಸಾಕು. ಅಲ್ಲಿ ಏನುಂಟು, ಏನಿಲ್ಲ ಎಂಬುದು ಏಕಕೌಡಿಗೆ ಒಂದಿಷ್ಟೂ ಗೊತ್ತಿರಲಿಲ್ಲ.

ಈ ಸಂಜೆಯ ಹೊತ್ತಿನಲ್ಲಿ ಆಳುಗಳನ್ನು ಎಲ್ಲಿಂದ ತರಬೇಕು? ಕಸ ದೀವಿಗೆಯ ವ್ಯವಸ್ಥೆ ಏನು ಮಾಡಬೇಕು? ಊಟ ಉಪಚಾರದ ಏರ್ಪಾಡು ಹೇಗೆ ಆಗಬೇಕು? ಆಯತ್ತ ಹೊತ್ತಿನಲ್ಲಿ ಇವಕ್ಕೆಲ್ಲಾ ಯಾರ ಮೋರೆ ನೋಡಬೇಕು? ಏನೊಂದೂ ತೋಚದೆ, ಪಾಪ ಏಕಕೌಡಿಯ ತಲೆಯೇ ಕೆಟ್ಟಂತಾಯಿತು. ಇನ್ನೇನು ತನ್ನ ಕೆಲಸ ಹೋಗುವುದೇ ಸೈ–ಹೋಗ ಲೊಲ್ಲದು! ಆದರೆ ಈ ಮಹಾ ಭಯಂಕರ ಹೊಸ ಒಡೆಯನ ನಡತೆಯ ಬಗೆಗೆ ಅವನು ಜನರ ಬಾಯಿಂದ ಹಲವಾರು ಕತೆಗಳನ್ನು ಕೇಳಿದ್ದ. ಆದುದರಿಂದ ತನ್ನ ಮೇಲೆ ಯಾವ ಪ್ರಸಂಗ ಬರುವುದೋ ಎಂಬುದು ಅವನ ಕಲ್ಪನೆಗೆ ನಿಲುಕದಾಯಿತು.

ತಿಳಿಸದೆ ಮಾಡದೆ ಒಮ್ಮೆಲೆ ಸವಾರಿ ಬಂದುದು ತನ್ನನ್ನು ಸಂಕಟಕ್ಕೆ ಈಡು ಮಾಡುವುದಕ್ಕೇ ಎಂದು ಏಕಕೌಡಿಗೆನಿಸಿತು. ಆ ಜಮೀದಾರಿಯ ಪ್ರಜೆಯೇ ಅವನು. ಈಗ ಹೆಂಡರು ಮಕ್ಕಳನ್ನು ಕಟ್ಟಿಕೊಂಡು ಎಲ್ಲಿಗೆ ತಾನೆ ಹೋಗುವುದು? ಹೇಗೆ ಉಳಿದುಕೊಳ್ಳುವುದು? ಅವನ ಕಣ್ಣಿಗೆ ಯಾವ ಹಾದಿಯೂ ಕಾಣಲಿಲ್ಲ.

ಇದಕ್ಕೂ ಮೊದಲು ಹೊಸ ಯಜಮಾನನನ್ನು ಅವನೆಂದೂ ನೋಡಿರ ಲಿಲ್ಲ; ಅದರ ಅಗತ್ಯವೇ ಉಂಟಾಗಿರಲಿಲ್ಲ. ಈಗ ಗಟ್ಟಿ ಜೀವ ಮಾಡಿ ಅವನ ಮುಖದ ಕಡೆ ನೋಡುವುದಕ್ಕೂ ಅವನಿಗೆ ಧೈರ್ಯವಾಗಲಿಲ್ಲ. ಕಿರಿಯುಗಲವಾದ ಓಣಿಯಲ್ಲಿ ಬೋವಿಗಳು ಹೊರಳುತ್ತಿದ್ದಾಗ ಅವನ ಕಣ್ಣಿಗೆ ಬಿದ್ದ ಆ ವ್ಯಕ್ತಿಯ ಮುಖಚರ್ಯೆ ಅತ್ಯಂತ ಭಯಂಕರವಿದ್ದಂತೆ ಅವನಿಗೆ ಭಾಸವಾಯಿತು.

ಏಕಕೌಡಿ ಅನೇಕ ಕುತಂತ್ರಗಳನ್ನು ಮಾಡಿದ್ದ, ಅದೆಷ್ಟೋ ಎತ್ತಿ

ಹಾಕಿದ್ದ. ಜಮೀದಾರನು ಸಭೆಗೂಡಿಸಿದರೆ, ವಿಚಾರಣೆ ನಡೆಯಿಸಿದರೆ ಯಾವ ತಪ್ಪನ್ನು ಯಾರ ಮೇಲೆ ಹೇಗೆ ಹೊರಿಸಿ ತಾನು ಪಾರಾಗಬೇಕೆಂದು ಅವನು ವಿಚಾರದಲ್ಲಿ ಮಗ್ನನಾಗಿದ್ದ. ಆಗ ಕಚೇರಿಯ ಹಿರಿಯ ಪೇದೆ ಓಡುತ್ತ ಬಂದ. ಅವನು ವಸೂಲಿಗಾಗಿ ಊರೊಳಗೆ ಹೋಗಿದ್ದ, ಅಲ್ಲಿಯೇ ಈ ಸುದ್ದಿಯನ್ನು ಕೇಳಿದ್ದ. ತೇಕುತ್ತ ತೇಕುತ್ತ ಅವನು ಕೇಳಿದ: "ನಂದಿ ಮಹಾಶಯರೆ, ನಿಜವಾಗಿಯೂ ಧನಿಯರು ಬಂದರೇನು?"

ಏಕಕೌಡಿ ಅವನ ಕಡೆಗೊಮ್ಮೆ ಸುಮ್ಮನೆ ನೋಡಿ 'ಹೂಂ' ಎಂದ

ಪೇದೆ ವಿಶ್ವಂಭರನು ಕಕ್ಕಾವಿಕ್ಕಿಯಾದ. ಏಕಕೌಡಿಯ ಮುಖವನ್ನು ಕೊಂಚ ಹೊತ್ತು ನೋಡಿ ಅವನೆಂದ: "ಬರೀ ಹೂಂ ಏನಂತೀರಿ? ಸ್ವತಃ ಧನಿಯರ ಸವಾರಿ ಬಂದಿದೆಯೇನು?"

ಆ ಹೊತ್ತಿನಲ್ಲಿ ಏಕಕೌಡಿ ಒಳಗೊಳಗೆ ಬಲು ಬೇಸರಗೊಂಡಿದ್ದ. ವ್ಯಂಗ್ಯಭಾವದಿಂದ ಅವನು ಹೇಳಿದ: "ಬಂದಿದ್ದಾರೆ; ಅದಕ್ಕೆ ನಾನೇನು ಮಾಡಲಿ? ಮೊದಲು ಸುದ್ದಿ ತಿಳಿಸಲಿಲ್ಲ, ವಿಚಾರಿಸಲಿಲ್ಲ, ಬಂದರು ತೀರಿತು ಧನಿಯರು! ಧನಿಯರು ಬಂದರೆಂದು ನಮ್ಮ ತಲೆಯನ್ನೇನೂ ಕೊಯ್ದು ಕೊಡಲಿಕ್ಕಾಗುವುದಿಲ್ಲ!"

ಕರಣಿಕನು ಒಮ್ಮೆಲೆ ರೇಗಿದುದನ್ನು ಕಂಡು ವಿಶ್ವಂಭರನು ಕ್ಷಣ ಕಾಲ ಸುಮ್ಮನೆ ನಿಂತ. ಅವನು ಪೇದೆಯಾಗಿದ್ದರೂ ಅವರಿಬ್ಬರ ಸಂಬಂಧವು ಒಳ್ಳೆಯ ಸ್ನೇಹದ್ದಾಗಿತ್ತು. ಅವನ ಬುದ್ಧಿ ಎಷ್ಟು ತೀವ್ರವಾಗಿತ್ತೋ ಅವನ ಮೆದುಳು ಅಷ್ಟು ತಣ್ಣಗಿತ್ತು. ಏಕಕೌಡಿಯನ್ನು ಒಳಕ್ಕೆ ಕರೆದೊಯ್ದು ಸ್ವಲ್ಪ ಹೊತ್ತಿನಲ್ಲಿಯೇ ಅವನು ಸಮಾಧಾನಗೊಳಿಸಿದ. ಮದ್ಯದ ಸೀಸೆ, ಮಾಂಸ ಮತ್ತು ಅವುಗಳ ಸಂಗಾತಿಗಳಾದ ವಸ್ತುಗಳನ್ನು ಧನಿಯರಿಗೆ ಒದಗಿಸುವಂತೆ ಅವನು ಸಲಹೆಯಿತ್ತ. "ಮನುಷ್ಯನ ಭಾಗ್ಯವನ್ನು ದೇವರಿಗೂ ಹೇಳಲಿಕ್ಕೆ ಬರುವುದಿಲ್ಲ. ಈ ಎಲ್ಲ ಸರಬರಾಯಿ ಸರಿಯಾಗಿ ಆದರೆ, ಯಾರಿಗೆ ಗೊತ್ತು ದಿವಾಣಜೀ, ನಿಮ್ಮ ದೈವವೇ ತೆರೆಯಬಹುದು—ಒಂದು ವೇಳೆ ಧನಿಯರು ಮುಖ್ಯ ಕಚೇರಿಯ ಕೆಲಸವನ್ನೂ ಕೊಡ ಬಹುದು, ನಿಮಗೆ." ಎಂದ.

ಸ್ವಲ್ಪ ಹೊತ್ತಿನಲ್ಲಿ ಸಂಗಡ ಜನರನ್ನು ಕರೆದುಕೊಂಡು, ಕಂದೀಲು

ಗಳನ್ನೂ ಅಗತ್ಯವಿದ್ದ ಹಣ್ಣು ಹಂಪಲುಗಳನ್ನೂ ಸಂಪಾದಿಸಿ, ಏಕಕೌಡಿ ವಿಶ್ವಂಭರನೊಂದಿಗೆ ಹೋದ. ಅವನು ಶಾಂತಿ ಕುಂಜದ ಮುರಿದ ಬಾಗಿಲನ್ನು ತಲುಪಿದಾಗ ಕತ್ತಲೆ ಬೀಳತೊಡಗಿತ್ತು. ಎಡಬಲದ ಗಿಡಗಂಟೆಗಳನ್ನು ಬಗ್ಗಿಸಿ ಮುರಿದು ತಕ್ಕಮಟ್ಟಿಗೆ ದಾರಿ ಮಾಡಿರುವಂತೆ ಅವನಿಗೆ ಕಂಡಿತು. ಆದರೆ ಆ ಕತ್ತಲೆಯೊಳಗೆ ಅಡವಿ ದಾರಿಯಲ್ಲಿ ಮುಂದುವರಿಯಲು ಯಾರಿಗೂ ಧೈರ್ಯವಾಗಲೊಲ್ಲದು-ಆ ಹಾದಿಯನ್ನು ನಡೆಯುತ್ತಿದ್ದಾಗ ಅವರ ಮೈ ಜುಮ್ಮೆಂದು ನವಿರೆದ್ದಿತ್ತು.

ಆ ಅಡವಿ ಸುಮಾರು ಹತ್ತು ಹನ್ನೊಂದು ಬಿಘೆ ಕಾಲು ಹಾದಿ ತೀರ ಕಡಿಮೆಯಿರಲಿಲ್ಲ. ಅಷ್ಟು ನಡೆದು ಬಂಗಲೆಯನ್ನು ತಲುಪುವುದೂ ತೀರ ಸುಲಭವಾಗಿರಲಿಲ್ಲ.

ಅಲ್ಲಿ ಎಲ್ಲಿಯೂ ದೀವಿಗೆಯಿರಲಿಲ್ಲ. ಅಂಗಳದ ಒಂದು ಪಕ್ಕದಲ್ಲಿ ಬೋವಿಗಳು ಪಲ್ಲಕ್ಕಿಯನ್ನಿಟ್ಟು ಚಿಲಿಮೆ ಸೇದುತ್ತ ಕುಳಿತಿದ್ದರು. ಹತ್ತಿರವೇ ಒಂದು ಕಟ್ಟಿಗೆಯ ಕೊರಡನ್ನು ಹೊತ್ತಿಸಿಡಲಾಗಿತ್ತು. ಸುತ್ತಲೂ ಧೂಸರ ಪ್ರಕಾರವು ಬಿದ್ದಿತ್ತು.

ಸದ್ದು ಕೇಳುತ್ತಲೇ ಒಬ್ಬ ಆಳು ಹೊರಗೆ ಬಂದು ಏಕಕೌಡಿಯನ್ನು ಒಳಗೆ ಕರೆದುಕೊಂಡು ಹೋದ. ಒಳಗೆಲ್ಲೆಲ್ಲಿಯೂ ಮದ್ಯದ ಹೊಲಸು ನಾತ ಇಡುಗಿತ್ತು. ಒಂದು ಮೂಲೆಯಲ್ಲಿ ಮೇಣಬತ್ತಿಯ ಮಿಣಿ ಮಿಣಿ ದೀವಿಗೆ. ಇನ್ನೊಂದು ಬದಿಗೆ ಮುರಿದ ಮಂಚದ ಮೇಲೆ ಹಾಸಿಗೆ ಹಾಸಿಕೊಂಡು ಬೀಜಗಾವದ ಜಮೀದಾರ ಜೀವಾನಂದ ಚೌಧರಿ ಕುಳಿತಿದ್ದ.

ಆ ಮನುಷ್ಯನು ಬಹಳ ರೋಗಿಷ್ಠನಾಗಿದ್ದ. ಬಣ್ಣ ಕಡುಗೆಂಪು. ಅವನ ವಯಸ್ಸು ಇಷ್ಟೆಂದು ಅನುಮಾನಿಸಲಾಗುತ್ತಿರಲಿಲ್ಲ. ಎಲ್ಲ ಬಗೆಯ ಉಪದ್ವ್ಯಾಪ ಅತ್ಯಾಚಾರಗಳಿಂದ ಅವನ ಮುಖ ಒಣಗಿ ಕಟ್ಟಿಗೆಯಾಗಿತ್ತು.

ಮದ್ಯದಿಂದ ತುಂಬಿದ ಗ್ಲಾಸೊಂದು ಅವನೆದುರಿಗಿತ್ತು. ಹಿಂದುಗಡೆ ಇಟ್ಟಿದ್ದ ವಿಚಿತ್ರ ಆಕಾರದ ಬಾಟ್ಲಿ ಬಹುಮಟ್ಟಿಗೆ ಬರಿದಾಗಿದ್ದಿತು. ದಿಂಬಿನ ಪಕ್ಕದಲ್ಲಿ ನೇಪಾಳೀ ನಾಯಿಯ ಬಾಲ ಕಾಲುಗಳು ಹೊರಗೆ ಕಾಣು ತ್ತಿದ್ದವು. ಅದರ ಹತ್ತಿರವೇ ತೆರೆದಿಟ್ಟಿದ್ದ ಪೆಟ್ಟಿಗೆಯಲ್ಲಿ ಒಂದು ಜೋತೆ ಪಿಸ್ತೂಲು

ಏಕಕೌಡಿ ಮುಂದೆ ಹೋಗಿ ಕೈ ಜೋಡಿಸಿ ಧನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ.

"ನಿಮ್ಮ ಹೆಸರು ಏಕಕೌಡಿ ನಂದಿಯೇನು? ನೀವು ಇಲ್ಲಿಯ ಕರಣಿಕರೇನು?" ಎಂದು ಧನಿ ಕೇಳಿದ.

ಭೀತಿಯಿಂದ ಏಕಕೌಡಿಯ ಎದೆಯೊಳಗೆ ಧಡಧಡ ಎನ್ನುತ್ತಿತ್ತು. ಮನಸು ಗಟ್ಟಿಮಾಡಿ ಹೌದೆಂಬ ಅರ್ಥದಲ್ಲಿ ತಲೆಹಾಕಿ ನಡುಗುತ್ತ ಅವನೆಂದ: "ಹೌದು ಧನಿಯರೆ."

ಶಾಂತಿ ಕುಂಜದ ಅವ್ಯವಸ್ಥೆಯ ಬಗ್ಗೆ ಯಜಮಾನನು ವಿಚಾರಿಸುವನೆಂದು ಅವನು ತಿಳಿದಿದ್ದ. ಆದರೆ ಆ ಮಾತನ್ನೆತ್ತದೆ, "ನಿಮ್ಮ ಚಾವಡಿಯ ಕಂದಾಯ ಎಷ್ಟು?" ಎಂದು ಜೀವಾನಂದನು ಕೇಳಿದ.

"ಸರಾಸರಿ ಐದು ಸಾವಿರವಾದೀತು, ಧನಿಯರೆ."

"ಐದು ಸಾವಿರವೆ? ಒಳ್ಳೇದು. ನಾನು ಏಳೆಂಟು ದಿವಸ ಇರುತ್ತೇನೆ ಇಲ್ಲಿ. ಅಷ್ಟರೊಳಗೆ ಹತ್ತು ಸಾವಿರ ರೂಪಾಯಿ ಕೂಡಿಸಿಕೊಡಬೇಕು."

"ಅಪ್ಪಣೆ ಧನಿಯರೆ."

"ನಾಳೆ ಮುಂಜಾನೆ ನಿಮ್ಮ ಚಾವಡಿಗೆ ಬರುತ್ತೇನೆ. ಹತ್ತು ಹನ್ನೊಂದರ ಸುಮಾರಿಗೆ. ಅಷ್ಟರೊಳಗೆ ಬರುವುದು ಸಾಧ್ಯವಿಲ್ಲ. ಏಳುವುದಕ್ಕೇ ಅಷ್ಟೊತ್ತಾಗುತ್ತದೆ. ರೈತರಿಗೆ ಸುದ್ದಿ ತಿಳಿಸಿರಿ."

"ಆಗಲಿ ಧನಿಯರೆ" ಅತ್ಯಾನಂದದಿಂದ ತಲೆದೂಗುತ್ತ ಏಕಕೌಡಿ ಎಂದ. ಎತ್ತಬೇಕಾದುದಕ್ಕಿಂತ ಹೆಚ್ಚಿಗೆ ಕೆತ್ತಬೇಕೆಂಬ ಅಪ್ಪಣೆಯಾದುದಕ್ಕೆ ಅವನಿಗೆಷ್ಟೂ ಕಷ್ಟವೆನಿಸಲಿಲ್ಲ. ಅವನು ಅತ್ಯಂತ ಪ್ರಸನ್ನನಾಗಿ ಹೇಳಿದ: "ರಾತ್ರಿಯೇ ಎಲ್ಲ ಕಡೆ ಸುದ್ದಿ ತಿಳಿಸುತ್ತೇನೆ. ಹೇಳಲಿಲ್ಲ ಕೇಳಲಿಲ್ಲ ಎಂದು ಯಾರೂ ವಾದಿಸಿರಬಾರದು."

ಜೀವಾನಂದನು ಗೋಣುಹಾಕಿ ಸಮ್ಮತಿಸಿದ. ಒಂದೇಟಿಗೆ ಮದ್ಯದ ಗ್ಲಾಸನ್ನು ತೆರವು ಮಾಡಿ ಕೆಳಗಿಡುತ್ತ ನುಡಿದ: "ಇಲ್ಲಿ ನೋಡಿರಿ ಏಕಕೌಡಿ, ಇಲ್ಲಿ ವಿಲಾಯತಿ ಮದ್ಯದ ಅಂಗಡಿ ಇಲ್ಲವೆಂದು ಕಾಣುತ್ತದೆ? ಸರಿ, ಇಲ್ಲದಿದ್ದರೆ ಇಲ್ಲ. ಹತ್ತಿರವಿದ್ದಷ್ಟೇ ಈ ಕೆಲದಿನ ಸಾಕಾದೀತು. ಆದರೆ ನನಗೆ ದಿನಾಲು ಮಾಂಸ ಬೇಕು."

ಹಾಗೆ ಏಕಕೌಡಿಯು ಏರ್ಪಾಡೇ ಇತ್ತು. "ಇದರೊಳಗೇನು ವಿಶೇಷ ಧನಿಯರೆ? ದಿನಂಪ್ರತಿ ನಿಮಗೆ ದೇವಿಯ ಮಹಾಪ್ರಸಾದವೇ ಸಿಕ್ಕುವಂತೆ ಮಾಡುತ್ತೇನೆ." ಎಂದ.

"ಉತ್ತಮ, ಉತ್ತಮ!"

ಬಾಟ್ಲಿಯೊಳಗಿನ ಮದ್ಯವನ್ನು ಗ್ಲಾಸಿಗೆ ಸುರಿದು ಗುಟುಕರಿಸಿ ಬಾಯಿ ಒರಸಿಕೊಳ್ಳುತ್ತ ಜೀವಾನಂದನು ಮತ್ತೆಂದ: "ಇನ್ನೊಂದು ಹೇಳುವುದಿದೆ ಏಕಕೌಡಿ."

ಏಕಕೌಡಿಯು ಧೈರ್ಯವು ಕುಗ್ಗುತ್ತಲಿತ್ತು. "ಹೇಳಬೇಕು ಜೀಯಾ" ಎಂದು ಅವನೆಂದ.

ಬಾಯೊಳಗೆ ಒಂದೆರಡು ಲವಂಗಗಳನ್ನು ಚೆಲ್ಲಿಕೊಂಡು ಜೀವಾನಂದನು ಹೇಳಿದ: "ನೋಡಿರಿ ಏಕಕೌಡಿ, ನಾನು ಮದುವೆ ಮಾಡಿಕೊಂಡಿಲ್ಲ. ಎಂದೂ ಮಾಡಿಕೊಳ್ಳುವುದಿಲ್ಲ ಎಂದೆನಿಸುತ್ತದೆ—"

ಏಕಕೌಡಿ ಸುಮ್ಮನಿದ್ದ. ಕುಡುಕ ಧನಿ ಒಣನಗೆ ನಕ್ಕು ಹೇಳತೊಡಗಿದ: "ಎಂದರೆ ನಾನೊಬ್ಬ ಭೀಷ್ಮಾಚಾರ್ಯ—ಮಹಾಭಾರತ ಓದಿರುವರಲ್ಲವೆ? ಹಾಗೆ ನಾನು ಭೀಷ್ಮದೇವನೂ ಆಗಿಲ್ಲ.—ಏನು ತಿಳಿಯಿತೆ? ನಾನೆನ್ನುವುದು ತಿಳಿಯಿತಲ್ಲವೆ ಏಕಕೌಡಿ? ಅದರ ವ್ಯವಸ್ಥೆಯೂ ಆಗಲಿ!"

ಏಕಕೌಡಿ ನಾಚಿಕೆಯಿಂದ ಮುಖ ಕೆಳಗೆ ಹಾಕಿದ. ಹೂಂ ಎಂದೂ ಗೋಣನಿಂದಲೇ ಸೂಚಿಸಿದ, ಬಾಯಿ ಬಿಟ್ಟು ಉತ್ತರ ಕೊಡಲಿಲ್ಲ. ಜಮೀದಾರನ ಕರಣಿಕನಿಗೆ ಕೂಡ ನಾಚಿಕೆಯಾಗುವಂತಹ ಮಾತನ್ನು ಸಹಜವಾಗಿಯೇ ಹೇಳಿ, ಜೀವಾನಂದನೆಂದ: "ಇತರರಂತೆ ಈ ಮಹತ್ವದ ವಿಷಯ ಆಳುಹೋಳುಗಳಿಗೆ ಹೇಳುವುದು ನನಗೆ ಸೇರುವುದಿಲ್ಲ. ಒಂದಿಲ್ಲೊಂದು ದಿನ ಅದರಿಂದ ಘಾತವಾಗುವುದು. ಒಳ್ಳೇದು, ನೀವಿನ್ನು ಹೋಗಿರಿ. ಬೋವಿಗಳ ಊಟದ ವ್ಯವಸ್ಥೆ ಮಾಡಿರಿ. ನನಗೆನಿಸುತ್ತದೆ—ಸೆರೆಯಿಂದಲೇ ಅವರ ಕೆಲಸ ಸಾಗೀತು; ಆ ಕಡೆಗೂ ಸ್ವಲ್ಪ ಲಕ್ಷ್ಯವಿರಲಿ. ಒಳ್ಳೇದು, ಹೋಗಿ ಬರ್ರಿ."

ಗೋಣಿನಿಂದಲೇ ಒಪ್ಪಿಗೆಯನ್ನು ಸೂಚಿಸಿ, ಪುನಃ ನೆಲ ಮುಟ್ಟಿ ನಮಸ್ಕಾರ ಮಾಡಿ ಏಕಕೌಡಿ ಹೊರಡುತ್ತಲಿದ್ದ. ಧನಿ ಅವನನ್ನು ಕೂಗಿ ಕರೆದು,

"ಈ ಊರೊಳಗೆ ಯಾರಾದರೂ ಪುಂಡರು ಕುತಂತ್ರಿಗಳಾದ ರೈತರು ಇದ್ದಾರೇನು?" ಎಂದು ಪ್ರಶ್ನಿಸಿದ.

ಏಕಕೌಡಿ ತಿರುಗಿ ನಿಂತುಕೊಂಡ. ಬಹಳ ದಿನದ ಹಳೆ ಗಾಯವಿತ್ತು. ಅದು ಇದೇ ಪ್ರಕರಣಕ್ಕೆ ಹೊಂದಿದುದು. ಧನಿಯು ಪ್ರಶ್ನೆ ಅದಕ್ಕೇ ತಾಗಿತು. ಆ ಆಘಾತದ ವೇದನೆಯನ್ನು ಕ್ಷಣದಲ್ಲಿ ಸಂಯಮಿಸಿಕೊಂಡು ಅವನು ನಿರುತ್ಸಾಹದಿಂದ ನುಡಿದ: "ಇಲ್ಲ. ಅಂಥ ಹೇಳಿಕೊಳ್ಳುವಂಥವರು ಯಾರೂ ಇಲ್ಲ. ತಾರಾದಾಸ ಚಕ್ರವರ್ತಿ ಒಬ್ಬನಿದ್ದಾನೆ; ಆದರವನು ಧನಿಯರ ಪ್ರಜೆಯಲ್ಲ."

"ತಾರಾದಾಸ ಯಾರು?"

"ಗಡಚಂಡಿಯ ಪೂಜಾರಿ."

ಜಮೀನ್ದಾರಿಯ ಸಂಬಂಧದಲ್ಲಿ ಈ ಪೂಜಾರಿಯೊಡನೆ ಏಕಕೌಡಿಯ ಜಗಳ ತಂಟೆ ಎಷ್ಟೋ ಆಗಿದ್ದವು. ಆದರೆ ಅವುಗಳ ಪರಿವೆಯೇನೂ ಅವನಿಗಿಷ್ಟು ಇರಲಿಲ್ಲ. ಎರಡು ವರ್ಷಗಳ ಹಿಂದೆ ಒಂದು ಹಲಸಿನ ಮರದ ಪೆಸೆಯಿಂದ ಆದ ಬಡಿದಾಟ ಜಗಳವು ಇನ್ನೂ ಇತ್ತು. ಏಕೆಂದರೆ ಏಕಕೌಡಿಗೆ ತನ್ನ ಮನೆಗಾಗಿ ಹಲಸಿನ ಹಲಗೆಗಳು ಬೇಕಾಗಿದ್ದುವು. ಆ ಜಗಳದಲ್ಲಿ ಕೊನೆಗೆ ಅವನು ಸೋತು ಬಾಯಿ ಮುಚ್ಚಿಕೊಂಡು ಕುಳಿತುಕೊಳ್ಳಬೇಕಾಗಿತ್ತು.

ಏಕಕೌಡಿ ಹೇಳಿದ "ಏನು ಮಾಡಬೇಕು ಧನಿಯರೇ, ಮುಖ್ಯ ಕಚೇರಿಗೆ ಬರೆದುಕೊಂಡರೆ ನ್ಯಾಯವೇ ಸಿಕ್ಕುವುದಿಲ್ಲ; ದೊಡ್ಡ ದಿವಾನರು ಲಕ್ಷ್ಯವನ್ನೇ ಕೊಡುವುದಿಲ್ಲ. ಇಲ್ಲದಿದ್ದರೆ ಈ ಚಕ್ರವರ್ತಿಯ ಧೂಳ ಹಾರಿಸುವುದು ಎಷ್ಟೊತ್ತಿನ ಕೆಲಸ? ಆದರೆ ಪ್ರಸಂಗ ಬಂದದ್ದರಿಂದ ಹೇಳುತ್ತೇನೆ ಧನಿಯರೇ, ಹೀಗಾಗತೊಡಗಿದರೆ ಪ್ರಜೆಗಳು ಕೆಟ್ಟುಹೋಗುವರು, ಊರನ್ನು ಹತೋಟಿಯಲ್ಲಿಟ್ಟುಕೊಳ್ಳುವುದೇ ಕಠಿನವಾಗುವುದು."

ಧನಿಗೆ ಮತ್ತು ಏರುತ್ತಲಿತ್ತು. ಅವನು ತೊದಲುತ್ತ ಮಾತನಾಡಿದ: "ತಾರಾದಾಸ ಎಂದು ಹೇಳುತ್ತೀರಲ್ಲ ಏಕಕೌಡಿ, ಆ ಮುಗ ಎಲ್ಲಿಯವ?"

"ಚಕ್ರವರ್ತಿಯ ಮಗಳು ಇಲ್ಲಿಯ ಭೈರವಿ. ಹಾಗೆ ನೋಡಿದರೆ ಚಕ್ರವರ್ತಿ ಅಂಥ ಕೆಟ್ಟ ಮನುಷ್ಯನಲ್ಲ. ಆದರೆ ಆ ಹೆಂಗಸು ಮಾತ್ರ

ಮಹಾ ಘಾತಕಿ. ಊರೊಳಗಿನ ಎಲ್ಲ ಕಳ್ಳರು ದರೋಡೆಗಾರರು ಅವಳ ದಾಸರಾಗಿದ್ದಾರೆ."

ಈ ಮೊದಲು ಜಮೀದಾರನ ಕಿವಿಗೆ ಎಲ್ಲ ಸಂಗತಿ ಮುಟ್ಟಿರಲಿಕ್ಕಿಲ್ಲ; ಹಾಗೆಯೇ ತೊದಲುತ್ತ ಅವನು ಕೇಳಿದ: "ಹೀಗೋ? ಅವಳ ವಯಸ್ಸೆಷ್ಟು? ನೋಡಲಿಕ್ಕೆ ಹೇಗಿದ್ದಾಳೆ?"

"ಇಪ್ಪತ್ತುಮೂರು ಇಪ್ಪತ್ತುನಾಲ್ಕು ವಯಸ್ಸಿರಬಹುದು. ನೋಡಲಿಕ್ಕೆ ಹೇಗೆ ಎಂದೆನ್ನುತ್ತೀರಲ್ಲ ಧನಿಯರೇ–ಏನು ಹೇಳಲಿ? ಆಳು ಒಳ್ಳೇ ಎತ್ತರ, ದಪ್ಪ; ಸೈನಿಕಳೇ ಎನ್ನಿರಿ! ಮೋರೆಯ ಮೇಲೆ ಹೆಣ್ಣಿನ ಕಳೆಯಿಲ್ಲ, ಅಂಥ ಮೈಕಟ್ಟೂ ಇಲ್ಲ; ಹೋಗುತ್ತಿದ್ದರೆ, ನಡುವಿಗೆ ಕತ್ತಿ ಕಟ್ಟಿಕೊಂಡು ಸೈನಿಕ ಯುದ್ಧಕ್ಕೆ ಹೊರಟಿರುವ ಹಾಗೇ! ಎಂತಲೇ ಊರ ಜನ ಸಾಕ್ಷಾತ್ ಚಂಡಿ ಇವಳೇ ಎಂದು ಭಾವಿಸುತ್ತಾರೆ."

ಜೀವಾನಂದನು ಒಮ್ಮೆಲೆ ಎದ್ದು ಸೀಟಾಗಿ ಕುಳಿತುಕೊಂಡು ಉತ್ಸುಕತೆಯಿಂದ ಕೇಳಿದ: "ಏನೆಂದಿರಿ ಏಕಕೌಡಿ? ಅದೇನು ಮಜವೋ ಬಿಚ್ಚಿ ಹೇಳಿರಿ. ಕಾಣಲಿಕ್ಕೆ ಹೇಗಿದ್ದರೂ ಗೃಹಸ್ಥ ಬ್ರಾಹ್ಮಣರ ಹುಡುಗಿಯೆ ತಾನೆ? ಅವಳು ಘಾತಕಿ ಹೇಗೆ?"

"ಇದರೊಳಗೇನು ಆಶ್ಚರ್ಯ ಧನಿಯರೆ?" ಎಂದು ನುಡಿದು ಏಕಕೌಡಿ ಭೈರವಿಯ ಇತಿಹಾಸದ ಆಶಯವನ್ನು ತಿಳಿಯಪಡಿಸಿದ:

"ಭೈರವಿ ಎಂಬುದು ಯಾರೊಬ್ಬರ ಹೆಸರಲ್ಲ; ಗಡಚಂಡಿಯ ಮುಖ್ಯ ಸೇವಿಕೆಯ ಪದವಿ. ಸದ್ಯದ ಭೈರವಿಯಾಗಿರುವ ಇವಳ ಮೂಲ ಹೆಸರು ಷೋಡಶಿ. ಇವಳ ಹಿಂದಿದ್ದ ಭೈರವಿಯ ಹೆಸರು ಮಾತಂಗಿನಿ. ಮಾತೆಯ ಆದೇಶವೇ ಹೀಗೆ, ಪುರುಷರು ಈ ಪದವಿಗೆ ಬರುವಂತಿಲ್ಲ. ಮೊದಲಿನಿಂದಲೂ ಹೆಂಗಸರೇ ಈ ಅಧಿಕಾರ ನಡೆಸುತ್ತ ಬಂದಿರುವರು.

"ಈಗ್ಗೆ ಹದಿನೈದು ಹದಿನಾರು ವರ್ಷ ಆಗಿರಬಹುದು–ಅಕಸ್ಮಾತ್ ಮಾತಂಗಿನೀ ಭೈರವಿಯ ಗಂಡ ತೀರಿಕೊಂಡ ಸುದ್ದಿ ಬಂದಿತು. ಕೇಳಿ ವಿಚಾರಿಸಿ ನೋಡಲಾಗಿ ಸುದ್ದಿ ಸತ್ಯವೆಂದಾಯಿತು. ಆಗ ಮಾತಂಗಿನಿ ಈ ಪದವಿಯನ್ನು ಬಿಟ್ಟು ಕಾಶಿಗೆ ಹೋಗಬೇಕಾಯಿತು.—"

ಇಷ್ಟೊತ್ತೂ ಜೀವಾನಂದನು ಮೌನವಾಗಿ ಕೇಳುತ್ತಲ್ಲಿದ್ದ. ಈಗ

ಆಶ್ಚರ್ಯಚಕಿತನಾಗಿ ಕೇಳಿದ: "ವಿಧವೆಯಾದೊಡನೆ ಭೈರವಿತನ ಹೋಗುವುದೇನೊ?"

"ಹೌದು ಧನಿಯರೆ."

"ಎಂತಲೇ ಅವಳು ಗಂಡನನ್ನು ಅಜ್ಞಾತವಾಸಕ್ಕೆ ಕಳಿಸಿರುತ್ತಾಳೇನೋ, ಅಲ್ಲವೆ?"

"ಅದರ ಹೊರತು ಉಪಾಯವಿಲ್ಲ ಜೀಯಾ. ದೇವಿಯ ಅಪ್ಪಣೆಯೇ ಹಾಗೆ. ಮದುವೆಯಾದ ಬಳಿಕ ಮೂರನೆಯ ದಿನ ತರುವಾಯ ಭೈರವಿ ಗಂಡನನ್ನು ಮುಟ್ಟಲೇ ಬಾರದು. ಆದ್ದರಿಂದಲೇ ಹೀಗೆ ಮಾಡುತ್ತಾರೆ. ದೂರ ದೇಶದ ಯಾವುದಾದರೂ ಬಡ ಹುಡುಗನನ್ನು ಹಿಡಿತರುವುದು, ಅವನೊಡನೆ ಅವಳ ಮದುವೆ ಮಾಡುವುದು, ಮರುದಿನವೇ ಅವನನ್ನು ಒಂದಿಷ್ಟು ಹಣ ಕೊಟ್ಟು ಅಟ್ಟಬಿಡುವುದು. ಆಮೇಲೆ ಅವನ ನೆರಳು ಕೂಡ ಇಲ್ಲಿ ಬೀಳುವುದಿಲ್ಲ. ನಿಯಮ ಇರುವುದು ಹೀಗೆ, ಅನಾದಿಕಾಲದಿಂದಲೂ ನಡೆದು ಬಂದಿದೆ."

ಜೀವಾನಂದನು ನಕ್ಕು, "ಏನೆಂದಿರಿ ಏಕಕೌಡಿ? ಕಥೆತನಕ ದೇಶಾಂತರವೇ?' ಭೈರವಿಯಾದರೂ ಹೆಂಗುಸೇ. ರಾತ್ರಿ ಏಕಾಂತದಲ್ಲಿ ಒಂದು ಬಟ್ಟಲು ಬಿಸಿ ಮಸಾಲೆಯ ಹಾಲು ಕೊಡುವದು, ದೇವಿಯ ಮಹಾ ಪ್ರಸಾದ ಬೇಯಿಸಿ ಹಾಕುವುದು-ಇಂಥದೇನನ್ನೂ ಅವಳಿಗೆ ಮಾಡಲಿಕ್ಕೆ ಬರುವುದಿಲ್ಲವೆ?" ಎಂದ.

"ಇಲ್ಲ ಜೀಯಾ." ಏಕಕೌಡಿ ತಲೆ ಹಾಕುತ್ತ ಹೇಳಿದ: ದೇವಿಯ ಭೈರವಿ ಗಂಡನನ್ನು ಮುಟ್ಟಲಿಕ್ಕೂ ಕೂಡದು. ಹೀಗೆಂಪ ಮಾತ್ರಕ್ಕೆ ಊರೊಳಗೆ ಬೇರೆ ಗಂಡುಸರೇ ಇಲ್ಲವೆಂದಲ್ಲ. ಮಾತೂ ಭೈರವಿಯನ್ನೂ ನೋಡಿದ್ದೇನೆ, ಈ ಷೋಡಶೀ ಭೈರವಿಯನ್ನೂ ನೋಡುತ್ತಿದ್ದೇನೆ. ಜನ ಈ ಭೈರವಿಯ ಕಾಲಮೇಲೆ ಬಿದ್ದು ಹೊರಳುವುದು ಸುಮ್ಮನೆಯೆ? ಎಂತಲೇ ನಾನು ಹೇಳುವುದು—ಹಾಹಾ ಎನ್ನುವುದರೊಳಗೆ ಇವಳು ಧನಿಯರೊಡನೆ ಕೂಡ ಜಗಳವನ್ನೆಬ್ಬಿಸದೆ ಇರಳು."

ಜೀವಾನಂದನು ನಕ್ಕು ನುಡಿದ: "ಇವಳೊಬ್ಬ ಸ್ತ್ರೀ ಸಾಧುವೇ ಎನ್ನಿರಿ! ಏನೂ ಅಡ್ಡಿಯಿಲ್ಲ. ಆದರೆ ಮಾತೂನ ನಂತರ ಈಕೆ ಬಂದಳೆಲ್ಲಿಂದ?"

" ಈ ಚಕ್ರವರ್ತಿ ಎಂದರೆ ಮಾತಂಗಿನಿಯ ಮಾವ. ಡಾಕಾದಲ್ಲಿಯೋ ಎಲ್ಲಿಯೋ ಯಾವುದೋ ವ್ಯಾಪಾರಿಯ ಹತ್ತಿರ ಲೆಕ್ಕ ಬರೆದುಕೊಂಡಿದ್ದ. ಇಲ್ಲಿಂದ ಕಾಗದ ಹೋಗಲು ಇವನು ಇಲ್ಲಿಗೆ ಬಂದ. ಬರುವಾಗ ಹತ್ತು ವರ್ಷದ ಹುಡುಗಿಯನ್ನು ಕರೆತಂದ. ಎಲ್ಲಿಯದೋ ವರವನ್ನೂ ಗೊತ್ತು ಮಾಡಿಕೊಂಡು ಬಂದಿದ್ದ. ಬೆಳಗಾಗುವುದರೊಳಗೆ ಮದುವೆಯೂ ಆಯಿತು, ಮದುಮಗನನ್ನು ಕಳಿಸುವುದೂ ಆಯಿತು. ಅಂದಿನಿಂದ ದೇವಿಯ ಗದ್ದುಗೆಯ ಮೇಲೆ ಕುಳ್ಳಿರಿಸಿ ಇವಳಿಗೆ ರಾಜಭೋಗ ಆರಂಭಿಸಲಾಗಿದೆ. ಹೇಳುವರಾರು, ಕೇಳುವರಾರು? ಊರೊಳಗೆ ಮಂದಿಯಿಲ್ಲ, ರಾಜನ ಅಧಿಕಾರವಿಲ್ಲ—" ಎಂದು ಏಕಕೌಡಿ ಜಮಾದಾರನ ಕಡೆ ನೋಟವನ್ನು ಬೀರಿದ. ತನ್ನ ಭಾಷಣದಲ್ಲಿಯ ಮರ್ಮವನ್ನು ಧನಿ ಗ್ರಹಿಸಲಿಲ್ಲವೆಂಬಂತೆ ತೋರಿತು.

ಧನಿ ಮಹಾಶಯನು ಕಣ್ಣು ಮುಚ್ಚಿ ತಂದ್ರಾಮಗ್ನನಾಗಿದ್ದ. ಎಷ್ಟೋ ಹೊತ್ತು ಅವನು ಮಾತನಾಡಲಿಲ್ಲ. ತಾನು ಮಾತನಾಡಿದರೆ ಧನಿಯ ತಂದ್ರಾಭಂಗವಾಗುವುದೆಂದು ಏಕಕೌಡಿಯೂ ಬಹಳ ಹೊತ್ತು ಕಲ್ಲು ಗೊಂಬೆಯಂತೆ ನಿಂತಿದ್ದ. ಮನಸಿನೊಳಗೇ ಆ ಕುಡುಕನ ಅಜ್ಜ ಆರು ತಲೆ ಮತ್ತ ಮೂರು ತಲೆ ಉದ್ಧಾರ ಮಾಡುತ್ತಲಿದ್ದ. ಅಲ್ಲಿಂದ ಸುಮ್ಮನೆ ಕಾಲ್ತೆಗೆಯಬೇಕೆಂದು ಅವನಲ್ಲಿ ವಿಚಾರ ಬರು ಬರುತ್ತಲೇ, ಜೀವಾನಂದನು ಮನುಷ್ಯರೊಳಗೆ ಬಂದು ಮಾತನಾಡಿದ: " ಹದಿನೈದು ವರ್ಷಗಳ ಹಿಂದೆ ಯೇನು? ಒಳ್ಳೇದೂ. ಈ ತಾರಾದಾಸ ಸಾಧಾರಣ ಗಿಡ್ಡ ಆಳು, ಸಾದುಗೆಂಪು ಇದ್ದಾನೇನು?"

" ಇಲ್ಲ ಧನಿಯರೇ. ಚಕ್ರವರ್ತಿ ಸಾಧಾರಣ ಕೆಂಪೇನೋ ಇದ್ದಾನೆ, ಆದರೆ ಚಿಲೋ ಎತ್ತರ ಆಳು."

" ಎತ್ತರವೇ? ಇವನು ಡಾಕಾದ ವ್ಯಾಪಾರಿಯಲ್ಲಿ ಲೆಕ್ಕ ಬರೆಯುತ್ತಿದ್ದನೆಂಬುದು ನಿಮಗೆ ಹೇಗೆ ತಿಳಿಯಿತು? ಕಲಕತ್ತೆಯಲ್ಲಿ ಅಡಿಗೆಯವನಾಗಿ ಇದ್ದಿಲ್ಲವೆಂದು ಏತರ ಮೇಲಿಂದ?"

ಏಕಕೌಡಿ ಗೋಣು ಹಾಕುತ್ತ ಹೇಳಿದ: " ಇಲ್ಲ ಜೀಯಾ, ಅವನು ನಿಜವಾಗಿಯೂ ಲೆಕ್ಕ ಬರೆದುಕೊಂಡಿದ್ದ. ಅವನ ಆರು ತಿಂಗಳ ವೇತನ

ನಿಂತಿತ್ತು. ದಾವೆ ಮಾಡುತ್ತೇವೆ ನೋಡೆಂದು ಹೆದರಿಸಿ, ಅವನ ಒಡೆಯ ನಿಂದ ನಾನೇ ಅದನ್ನು ವಸೂಲು ಮಾಡಿಕೊಟ್ಟೆ."

"ಹಾಗೆಂದರೆ ಸರಿಹೋಯ್ತು. ಒಳ್ಳೇದು. ನಾಲ್ಕೈದು ವರ್ಷಗಳ ಹಿಂದೆ ನಮ್ಮೊಬ್ಬ ರೈತ ನಮ್ಮ ಮೇಲೆ ದಾವೆ ಮಾಡಿದ್ದ. ಅದರಲ್ಲಿ ನಮ್ಮ ಮಾವನಿಗೆ ಎದುರಾಗಿ ಸಾಕ್ಷ್ಯ ಹೇಳಿದ ಮಹಾಶಯ ಈ ತಾರಾದಾಸನೇ ಏನು ?"

ಒಳ್ಳೆಯ ಭರದಿಂದ ತಲೆಯಲ್ಲಾಡಿಸುತ್ತ ಏಕಕೌಡಿ ಹೇಳಿದ: "ಧನಿಯರ ದೃಷ್ಟಿ ಬಲು ಚುರುಕು—ಹೂಂ, ಈ ತಾರಾದಾಸನೇ."

ಜೀವಾನಂದನು ಮೆಲ್ಲಮೆಲ್ಲನೆ ತಲೆದೂಗುತ್ತ, "ಹುಂ, ಬಹಳ ಹಣಕ್ಕೆ ಗಾಳ ಬಗೆದಿದ್ದ ಮಗ. ಇವನ ಭೂಮಿ ಎಷ್ಟಿದೆ?" ಎಂದ.

ಮನಸಿನೊಳಗೆ ಲೆಕ್ಕ ಮಾಡಿಕೊಂಡು ಏಕಕೌಡಿ ಹೇಳಿದ: "ಐವತ್ತು ಅರವತ್ತು ಬಿಘೆಗಳಿಗಿಂತ ಕಡಿಮೆಯೇನಿಲ್ಲ."

ಕೊಂಚ ಹೊತ್ತು ಮೌನವಾಗಿದ್ದು ಜೀವಾನಂದನೆಂದ: "ನೀವು ನಾಳೆ ಹೋಗಿ ಅವನಿಗೆ ಹೇಳಿರಿ-ಒಂದು ಬಿಘೆಗೆ ಹತ್ತು ರೂಪಾಯಿಗಳಂತೆ ಕಾಣಿಕೆ ಸಲ್ಲಬೇಕು ನಮಗೆ. ನಾನು ಎಂಟು ದಿವಸ ಇಲ್ಲಿ ಇರುತ್ತೇನೆ."

ಏಕಕೌಡಿ ಕಕ್ಕಾವಿಕ್ಕಿಯಾದ. ಅತಿ ಸಂಕೋಚದಿಂದ ಉತ್ತರವಿತ್ತ: "ಅದು ಸರಿ. ಆದರೆ ಅದು ದತ್ತಿಭೂಮಿ."

"ಅಲ್ಲ. ಒಂದು ಹಿಡಿ ಮಣ್ಣೂ ದತ್ತಿಯದಿಲ್ಲ. ಈ ಊರೊಳಗೆ ಕಾಣಿಕೆ ಸಿಕ್ಕದಿದ್ದರೆ ಎಲ್ಲ ಭೂಮಿಗಳನ್ನೂ ವಶಪಡಿಸಿಕೊಳ್ಳಲಾಗುವುದು."

ಏಕಕೌಡಿ ನಿರುತ್ತರನಾಗಿ ನಿಂತ. ಅವನು ಅಂಜಿದುದು ಚಕ್ರವರ್ತಿಗಲ್ಲ, ಷೋಡಶಿ ಭೈರವಿಗೆ. ಅವನು ಭಯದಿಂದ ದಿಙ್ಮೂಢನಾಗಿದ್ದ. ಜಮಿನಾದಾರರೇನು, ಇಂದಿದ್ದು ನಾಳೆ ಹೊರಟು ಹೋಗುವರು, ತಾನು ಈ ಜನರ ನಡುವೆ ಜೀವಾವಧಿ ಕಾಲ ಕಳೆಯ ಬೇಕಾಗುವುದು. ಅವನು ಮಾತನಾಡಲು ಪ್ರಯತ್ನಿಸಿ ಬಾಯೊಳಗೆ ಗುಣಿಗುಟ್ಟಿದ; "ಆದರೆ ಧನಿಯರೇ. . . ."

ಅವನನ್ನು ಮಾತು ಮುಗಿಸುವುದಕ್ಕೆ ಬಿಡದೆ ಜೀವಾನಂದನು ನಡುವೆಯೇ ಮಾತನಾಡಿದ: "ಅವೆಲ್ಲ ಇರಲೊಲ್ಲದೇಕೆ ಏಕಕೌಡಿ? ನಮ್ಮ ನನಗೆ

ಹಣ ಬೇಕಾಗಿದೆ. ಐದಾರು ನೂರು ರೂಪಾಯಿ ಕಳೆದುಕೊಳ್ಳಲು ನನ್ನ ಮನಸ್ಸಿಲ್ಲ. ಅವನು ಅಷ್ಟು ತೆರಲೇ ಬೇಕು,–ನಾಳೆ ಅವನಿಗೆ ತಿಳಿಸಿರಿ, ಮತ್ತು ಚಾವಡಿಗೆ ಕರೆಸಿರಿ. ಕಾಗದ ಪತ್ರಗಳೇನಾದರೂ ಇದ್ದರೆ ತೆಗೆದುಕೊಂಡು ಬರಲಿಕ್ಕೆ ಹೇಳಿರಿ.–ರಾತ್ರಿ ಬಹಳವಾಯಿತು. ಇನ್ನು ನೀವು ಹೋಗಿರಿ ಬೇಕಾದರೆ. ನಮ್ಮ ಮಂದಿಯ ಊಟ ಉಪಚಾರದ ವ್ಯವಸ್ಥೆ ನೀಟಾಗಿ ಆಗಲಿ. ಮುಖ್ಯ ಕಚೇರಿಯಲ್ಲಿ ನಿಮ್ಮ ಸ್ಮರಣೆ ಇಡಲಾಗುವುದು."

"ಆಗಲಿ ಧನಿಯರೇ."

## ೨

ಜಮಾದಾರ ಜೀವಾನಂದ ಚೌಧರಿ ಚಂಡೀಗಡದಲ್ಲಿ ಕಾಲಿಟ್ಟು ಬರೀ ಐದು ದಿನ ಆಗಿದೆ. ಇಷ್ಟರೊಳಗೇ ಅನಾಚಾರ ಅತ್ಯಾಚಾರಗಳಿಂದ ಊರು ಹುರಿದುಹೋಗ ತೊಡಗಿದೆ. ಕಾಣಿಕೆಯನ್ನು ಎತ್ತಲಾಗುತ್ತಿತ್ತು ನಿಜ, ಆದರೆ ಅದನ್ನು ಹೇಗೆ ಎತ್ತಲಾಗುತ್ತಿತ್ತೆಂಬುದನ್ನು ಅಂತಹ ಜಮಾದಾರಿಯ ಕೆಲಸದ ಅನುಭವವಿಲ್ಲದವರಿಗೆ ತಿಳಿಸಿ ಹೇಳುವುದು ಕಠಿನ.

ಅಪ್ಪಣೆಯಂತೆ ತಾರಾದಾಸ ಚಕ್ರವರ್ತಿ ಮೊದಲನೆಯ ದಿವಸ ಧನಿಯರ ಸನ್ನಿಧಿಗೆ ಹೋಗಿದ್ದ. ಆದರೆ ಅವನು ಕಾಣಿಕೆಯನ್ನು ಸಲ್ಲಿಸಲು ಒಪ್ಪಲಿಲ್ಲ. ಅವನನ್ನು ರಣಗುಟ್ಟುವ ಬಿಸಿಲಲ್ಲಿ ಆರು ಗಂಟೆ ಕಾಲ ನಿಲ್ಲಿಸಲಾಯಿತು.–ಆದರೂ ಜಗ್ಗಲಿಲ್ಲ, ಕೂಡಿದ ಜನರೊಳಗೆ ಕಿವಿಗಳನ್ನು ಹಿಡಿದುಕೊಂಡು ಕೂತೇಳುವುದು, ಕುದುರೆಯಂತೆ ಓಡುವುದು, ಕಪ್ಪೆಯಂತೆ ಕುಪ್ಪುವುದು ಮೊದಲಾದ ಶಿಕ್ಷೆಗಳನ್ನು ಅನುಭವಿಸಬೇಕಾಗಿ ಬಂದುದರಿಂದ ಅವನ ಕೆಚ್ಚು ಕುಗ್ಗಿತು. ಮನಸ್ಸಿನೊಳಗೆ ಜಮಾದಾರನ ವಂಶ ನಿರ್ವಂಶವಾಗಲೆಂದು ಚಂಡಿಯನ್ನು ಪ್ರಾರ್ಥಿಸುತ್ತ, ಬಹಿರಂಗವಾಗಿ ಹಣವನ್ನು ಶೇಖರಿಸುವುದಕ್ಕಾಗಿ ಐದು ದಿನಗಳ ಅವಧಿಯನ್ನು ಬೇಡಿ ಪಡೆದುಕೊಂಡು ಬಿಡುಗಡೆ ಹೊಂದಿದ್ದ. ಇಂದೇ ಆ ಐದನೆಯ ದಿವಸ — ಮುಂಜಾನೆಯಿಂದ ಚಕ್ರವರ್ತಿಯ ಪತ್ತೆಯೇ ಇಲ್ಲ.

ಈ ಅವಧಿಯಲ್ಲಿ ಜಮಾದಾರನಿಗೆ ದಿನಾಲು ಮಹಾಪ್ರಸಾದದ ಏರ್ಪಾಡು ಮಾಡಬೇಕಾಗುತ್ತಿತ್ತು. ಕೆರೆಯೊಳಗಿನ ಮೀನು, ತೋಟದೊಳಗಿನ ಹಣ್ಣು ಹಂಪಲು, ಪಲ್ಲೆಕಾಯಿ ಎಲ್ಲವನ್ನೂ ಜಮಾದಾರನ

ಜನಗಳು ಅಸಿಮಿಸಿಯಿಲ್ಲದೆ ತೆಗೆದುಕೊಂಡು ಹೋಗುತ್ತಿದ್ದರು. ಷೋಡಶಿ ತಡೆಯುವುದಕ್ಕಾಗಿ ಮುಂಬರಿಯುತ್ತಿದ್ದಳು. ಆದರೆ ತಾರಾದಾಸನು ಅವಳನ್ನು ಒಂದು ಮಾತೂ ಆಡಗೊಡುತ್ತಿರಲಿಲ್ಲ. ಅವಳ ಕೈ ಹಿಡಿದು, ದೈನಾಸಬಟ್ಟು ಬೇಡಿಕೊಂಡು, ಅತ್ತು ಕರೆದು ಅಂತೂ ಇಂತೂ ಅವಳನ್ನು ಒಳಗೆ ಕರೆದೊಯ್ಯುತ್ತಿದ್ದ.

ತಂದೆಗಾದ ಅವಮಾನ ಮೊದಲುಗೊಂಡು, ಜಮಾದಾರನ ಜನರ ಈ ಹಾವಳಿ ಕಾಟಗಳಿಂದ ಷೋಡಶಿ ತಳಮಳಗೊಂಡಿದ್ದಳು. ಈ ಪೊತ್ತಿನ ತನಕ ಅವಳು ಸೈರಿಸಿಕೊಂಡಿದ್ದಳು. ಇಂದು ಹತ್ತಿಟ್ಟಿದ್ದ ಸಿಟ್ಟೆಲ್ಲವೂ ಕ್ಷಣದಲ್ಲಿ ಅಗ್ನಿಯಂತೆ ಭುಗಿಲೆಂದಿತು. ಏನೂ ಹೇಳದೆ ತಂದೆ ಹೊರಟು ಹೋದುದರಿಂದ, ಬರುವ ಪ್ರಸಂಗಗಳನ್ನೆಲ್ಲ ಒಬ್ಬಳೇ ಎದುರಿಸಬೇಕೆಂದು ಅವಳು ನಿರ್ಧರಿಸಿದ್ದಳು.

ಬೆಳಗಿನ ಹೊತ್ತು ಹೋಯಿತು, ಮಧ್ಯಾಹ್ನವೂ ತಿರುಗಿತು, ಮೂರನೆಯ ಪ್ರಹರವೂ ಮುಗಿಯಿತು. ರಾತ್ರಿ ಕತ್ತಲಾದ ಬಳಿಕ ತಂದೆ ಗೌಪ್ಯವಾಗಿ ಬರುವನೆಂಬ ಆಸೆಯಿಂದ ಷೋಡಶಿ ಅಡುಗೆ ಮನೆಯಲ್ಲಿ ಕುಳಿತಿದ್ದಳು. ಗುಡಿಯೊಳಗಿನ ಸೇವಿಕೆ ಬಂದು ಅತ್ಯಾಚಾರದ ಸಂಗತಿಯನ್ನು ನಿವೇದಿಸಿದಳು.

'ಕುಡುಕ ಜಮಾದಾರನಿಗೆ ಇಂದು ಏನೋ ಲಹರಿ ಬಂದಿತ್ತು— ನಿಷಿದ್ಧ ಮಾಂಸವಂತೂ ಅಲ್ಲವೇ ಅಲ್ಲ, ಇನ್ನು ಮುಂದೆ ನಿತ್ಯದ ಮಾಂಸವೂ ಅವನಿಗೆ ಸವಿ ಹತ್ತದಂತಾಗಿದೆ. ಆಡಿನ ಮಾಂಸವು ಅಷ್ಟು ರುಚಿಯಲ್ಲವೆಂದು, ಜಮಾದಾರನ ಜನರು ಹೊಲಗೇರಿಯಿಂದ ಕುರಿಯೊಂದನ್ನು ತಂದು, ಅದರ ಮಹಾಪ್ರಸಾದವೇ ಆಗಬೇಕೆಂದು ಅಪ್ಪಣೆಯಿತ್ತರು. ಪುರೋಹಿತರು ಮೊದಲೇನೋ ವಿರೋಧಿಸಿದರು. ಆದರೆ ಕೊನೆಗೆ 'ಧನಿಯರಾಜ್ಞೆಯನವರು ಆಂತು ನಿಜವಿರದೆ' ಕುರಿಯನ್ನು ಬಲಿಗೊಟ್ಟರು; ಅದರಿಂದ ದೇವಿಯ ನಿತ್ಯದ ಮಹಾಪ್ರಸಾದವನ್ನು ಯಥಾರೀತಿಯಾಗಿ ಮಾಡಲಾಯಿತು.'

ಒಲೆಯ ಮೇಲಿನ ತಪ್ಪಲೆಯನ್ನು ಧನ್ನನೆ ನೆಲಕ್ಕೆ ಅಪ್ಪಳಿಸಿಟ್ಟು, ಸಿಟ್ಟಿನಿಂದ ಎಚ್ಚರುದಪ್ಪಿ ಷೋಡಶಿ ಗುಡಿಯ ಕಡೆ ಧಾವಿಸಿದಳು. ಮನೆಯ

ಹೊಸತಿಲ ಹೊರಗೆ ಕಾಲಿಡುತ್ತಲೆ ನಾಲ್ಕೈದು ಜನ ಹಿಂದೂಸ್ಥಾನಿ ಪೇದೆಗಳು ಅವಳನ್ನು ಅಡ್ಡಗಟ್ಟಿದರು. ವಿಶ್ವಂಭರನು ದೂರದಿಂದ ಅವರಿಗೆ ಮನೆಯನ್ನು ತೋರಿಸಿ ಕಣ್ಮರೆಯಾಗಿದ್ದ.

ಬಂದವರು ಜಮೀದಾರನ ಬೋವಿಗಳು. ಅವರ ಬಾಯಿ ಗಬ್ಬುನಾತ ಹೊಡೆಯುತ್ತಿತ್ತು. ಕಣ್ಣುಗಳು ಕೆಂಪಾಗಿದ್ದವು. ಒಟ್ಟಾರೆ ಅವರು ಅತ್ಯಂತ ಉಚ್ಛೃಂಖಲರಾಗಿದ್ದರು.

ಅವರಲ್ಲಿ ಬಂಗಾಲಿಯನ್ನು ಬಲ್ಲ ಬೋವಿ ಮಾತನಾಡಿದ: "ಭಂಡ ಠಾಕುರ ಇದ್ದಾನೇನು ಮನೆಯೊಳಗೆ? ಹಣ ಕೊಡದೆ ಎಲ್ಲಿ ಓಡಿ ಹೋಗಿದ್ದಾನೆ?"

ಷೋಡಶಿ ಅಕ್ಕಪಕ್ಕ ನೋಡಿದಳು. ಯಾರೂ ಇರಲಿಲ್ಲ. ಕುಡಿದು ಉನ್ಮತ್ತರಾದ ಅವರಿಂದ ಅಲ್ಲಿಂದಲ್ಲಿಯೇ ತನಗೆ ಅಪಮಾನವಾಗಬಾರದೆಂದು ಅವಳು ಕುದಿಯುವ ಕೋಪವನ್ನು ಪ್ರಯಾಸದಿಂದ ಸಂಯಮಿಸಿಕೊಂಡಳು. "ಅಪ್ಪ ಮನೆಯಲ್ಲಿಲ್ಲ" ಎಂದು ಶಾಂತವಾಗಿ ಅವಳು ಹೇಳಿದಳು.

"ಎಲ್ಲಿ ಹೋದ?"

"ಗೊತ್ತಿಲ್ಲ." ಎನ್ನುತ್ತ ಷೋಡಶಿ ಅವರ ಬದಿಯಲ್ಲಿ ಹಾಯ್ದು ಮುಂದುವರಿಯಲು ಪ್ರಯತ್ನಿಸಿದಳು. ಆ ಮನುಷ್ಯನು ಭೀಭತ್ಸ ಶಬ್ದಗಳಿಂದ ಬಯ್ಯುತ್ತ ಮುಂಬರಿದು ನುಡಿದ: "ಅವನಿಲ್ಲದಿದ್ದರೆ ನೀನು ನಡೆ. ಇಲ್ಲದಿದ್ದರೆ ಕೊರಳಿಗೆ ಪಂಚೆ ಬಿಗಿದು ಎಳೆದುಕೊಂಡು ಹೋದೇವು ನಿನ್ನ.

ಈ ಅಪಮಾನದಿಂದ ಷೋಡಶಿ ಭಾವಪರವಶೆಯಾದಳು. ಒಮ್ಮೆಲೆ ಅವರ ಮೈಮೇಲೆ ಏರಿಹೋಗಿ ಒದರಾಡಿದಳು: ಜೋಕೆ! ಸರಿಯಿರಿ ಹಿಂದಕ್ಕೆ! ಇಕಾ ನಾನೇ ಬರುತ್ತೇನೆ ನಡೆಯಿರಿ. ನಿಮ್ಮ ಆ ಕುಡುಕ ನನ್ನನ್ನೇನು ಮಾಡುತ್ತಾನೋ ಒಮ್ಮೆ ನೋಡಿಬಿಡುತ್ತೇನೆ." ಎಂದು ಪರಿಣಾಮದ ಬಗ್ಗೆ ಕಿಂಚಿತ್ತೂ ಯೋಚಿಸದೆ ಅವಳು ಭರಭರನೆ ಮುಂದೆ ಹೊರಟಳು.

ಹಾದಿಯಲ್ಲಿ ಒಂದಿಬ್ಬರು ಗುರುತಿನವರು ಕಂಡರು. ಷೋಡಶಿ ಅವರನ್ನು ಕಣ್ಣೆತ್ತಿ ನೋಡಲಿಲ್ಲ ಕೂಡ. ಜಮೀದಾರನ ಜನ ಅವಳ

ಹಿಂದಿದ್ದರು; ಅದರಿಂದಲೇ ಪ್ರಸಂಗವೇನೆಂಬುದು ತಿಳಿಯುವಂತಿತ್ತು. ಹಳ್ಳಿಯ ಜನಗಳಿಗೆ ಹೆಚ್ಚು ಬಿಡಿಸಿ ಹೇಳುವ ಅಗತ್ಯವಿರಲಿಲ್ಲ. ಅಂತೆಯೆ ಅವರ ಸಹಾಯುವನ್ನು ಅಪೇಕ್ಷಿಸಿ, ತಾನೇ ತನ್ನ ಅಪಮಾನ ಮಾಡಿಕೊಳ್ಳುವ ಪ್ರವೃತ್ತಿಯೂ ಅವಳಿಗಾಗಲಿಲ್ಲ.

ಚಾವಡಿ ಬಹಳ ದೂರವಿರಲಿಲ್ಲ. ಅಲ್ಲಿ ಏಕಕೌಡಿ ಇದ್ದ. ಷೋಡಶಿಯನ್ನು ಕರೆತಂದುದನ್ನು ನೋಡುತ್ತಲೆ ಅವನು ಒಮ್ಮೆಲೆ ಗಾಬರಿಯಾದ. "ಇಲ್ಲಿ ಬೇಡ. ಈ ವಿಷಯ ನನಗೆ ಯಾವುದೂ ಗೊತ್ತಿಲ್ಲ. ಧನಿಯರ ಕಡೆಗೆ ಕರೆದುಕೊಂಡು ಹೋಗಿರಿ" ಎಂದು ಶಾಂತಿ ಕುಂಜದ ಕಡೆ ಬೆರಳು ತೋರಿಸಿ ಏಕಕೌಡಿ ಒಳಗೆ ಹೋಗಿ ಬಾಗಲಿಕ್ಕಿಕೊಂಡ.

ತನಗೊದಗುವ ಗಂಭೀರ ಸಂಕಟದ ಕಲ್ಪನೆ ಷೋಡಶಿಗೆ ಈಗ ಬಂದಿತು. ಅವಳ ಮನಸಿನಲ್ಲಿ ಕಟುವಾದ ಸಂದೇಹವು ಉಂಟಾಯಿತು.

"ಈಗೆಲ್ಲಿಗೆ ಹೋಗಬೇಕು?" ಗೊತ್ತಿದ್ದೂ ಅವಳು ಆಳುಗಳನು ಕೇಳಿದಳು.

ಏಕಕೌಡಿ ಯಾವ ಕಡೆ ಬೆರಳು ಮಾಡಿದ್ದನೋ ಆ ದಿಕ್ಕನ್ನೇ ತೋರಿಸಿ ಆ ಮನುಷ್ಯನೆಂದ: "ನಡೆ!"

ಹೋಗುವುದು ಅನಿವಾರ್ಯವೇ ಆಗಿತ್ತು. ಆದರೂ ಅವಳೆಂದಳು: "ನನ್ನ ಹತ್ತಿರ ಹಣವಿಲ್ಲ ಸರದಾರ. ಧನಿಯರ ಕಡೆಗೆ ನನ್ನನ್ನು ಒಯ್ದು ಪ್ರಯೋಜನವೇನು?"

ಸರದಾರನು ಅವಳ ಮಾತನ್ನು ಲೆಕ್ಕಿಸಲಿಲ್ಲ. ಅವನು ಉತ್ತರ ವೀಯುವುದಕ್ಕೆ ಬದಲಾಗಿ ಮುಖವಿಕಾರದೊಡನೆ ನುಡಿದ: "ನಡೆಯೇ ಬೋಕಾಣಿ, ನಡೆ!"

ಷೋಡಶಿ ಆಮೇಲೆ ಏನೊಂದೂ ಮಾತನಾಡಲಿಲ್ಲ. ಆ ಜನರು ಪರಪ್ರಾಂತದಿಂದ ಬಂದವರು; ರೀತಿ ನೀತಿಯ ಕಲ್ಪನೆ ಕೊಂಚವೂ ಇರಲಿಲ್ಲ ಅವರಿಗೆ; ವಸೂಲಿಗಾಗಿ ಸಾಲಗಾರರೊಡನೆ ಒತ್ತಾಯ-ದಬ್ಬಾಳಿಗಳಿಂದ ನಡೆದುಕೊಂಡೇ ಅವರಿಗೆ ಅಭ್ಯಾಸ. ಅದೇ ರೀತಿಯನ್ನು ಈಗ ಅನುಸರಿಸಿದ್ದರು. ಅವರೆದುರಿಗೆ ದೈವಾಸಬಟ್ಟು ಬೇಡಿಕೊಳ್ಳುವುದು ವ್ಯರ್ಥಪ್ರಯಾಸ. ಅಲ್ಲದೆ ಅತ್ತು ರಂಬಾಟ ಮಾಡಿದರೂ ಸಹಾಯಕ್ಕೆ ಯಾರೂ ಬರುವಂತಿರ

ಲಿಲ್ಲ. ಹಾಗೆ ಮಾಡಿದರೆ ನಡುಬೀದಿಯಲ್ಲಿಯೇ ಆ ಜನ ಅವಳನ್ನು ಹಿಡಿದೆಳೆದಾಡುವ ಸಂಭವವಿತ್ತು. ಇಂತಹ ತುಂಬಿದ ಬೀದಿಯಲ್ಲಿ ಮಾನ ಕಳೆದುಕೊಳ್ಳುವುದಕ್ಕಿಂತ ಬಾಯಿ ಮುಚ್ಚಿಕೊಂಡು ಹೋಗುವುದೇ ಲೇಸು ಎಂದು ಅವಳು ಬಗೆದಳು. ಹಾಗೆಯೆ ಸುಮ್ಮನೆ ನಡೆದಳು.

ದನಗಾಹಿ ಹುಡುಗರು ದನಗಳನ್ನು ಹೊಡೆದುಕೊಂಡು ತಿರುಗಿ ಬರುತ್ತಿದ್ದರು; ಒಕ್ಕಲಿಗರು ಹೊಲದ ಕೆಲಸ ಮುಗಿಸಿಕೊಂಡು ಮನೆಗೆ ಹೊರಟಿದ್ದರು; ಅವರೆಲ್ಲರೂ ಇವರ ಕಡೆ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು. ಷೋಡಶಿ ಮಾತ್ರ ಯಾರ ಕಡೆಗೂ ನೋಡಲಿಲ್ಲ, ಯಾರೊಡನೆಯೂ ಮಾತನಾಡಲಿಲ್ಲ. ಅವಳು ಮನಸಿನೊಳಗೇ ಎಂದುಕೊಳ್ಳುತ್ತಿದ್ದಳು. 'ತಾಯಿ ಭೂದೇವಿ, ಇಬ್ಭಾಗವಾಗು!'

ಸೂರ್ಯನು ಮುಳುಗಿದ. ಅತ್ತಿತ್ತ ಕತ್ತಲೆ ಬೀಳತೊಡಗಿತ್ತು. ಯಂತ್ರಚಾಲಿತ ಪುತ್ಥಳಿಯಂತೆ ಆವಳು ಶಾಂತಿಕುಂಜದ ಆವಾರವನು ಪ್ರವೇಶಿಸಿದಳು.

ಆ ದಿನ ಗಾಬರಿಗೊಂಡ ಏಕಕೌಡಿ ಹೋಗಿದ್ದ ಕೋಣೆಗೇ ಅವಳನ್ನು ಕರೆದೊಯ್ಯಲಾಯಿತು. ಅಲ್ಲಿ ಆಗಿನಂತೆಯೇ ಈಗಲೂ ರಂದಿ ಹರವಿತ್ತು. ಮದ್ಯದ ದರ್ಪ ವಸರಿಸಿತ್ತು. ಬಿಳಿಯು ಕರಿಯು, ಉದ್ದನೆಯು ಗಿಡ್ಡನೆಯು ನಾನಾ ಪ್ರಕಾರದ ಬರಿಯ ಸೀಸೆಗಳು ನಾಲ್ಕೂ ಕಡೆಗೆ ಬಿದ್ದಿದ್ದವು. ತಿಕ್ಕಿ ಒರಸಿ ಜಳಜಳ ಮಾಡಿದ ಬಂದೂಕೊಂದು ಗೋಡೆಗಿಟ್ಟಿತ್ತು. ಕೈಗೆ ಹತ್ತಿರವಾಗಿ ಮುರಕ ಸ್ಟೂಲಿನ ಮೇಲೆ ಎರಡು ಪಿಸ್ತೂಲುಗಳಿದ್ದವು. ಹತ್ತಿರವೇ ವರಾಂಡದಲ್ಲಿ ಯಾವುದೋ ಕಾಡುಪ್ರಾಣಿಯ ಚರ್ಮವನ್ನು ಒಣಹಾಕಿತ್ತು; ಅದರ ಕೆಟ್ಟನಾತವು ಮೂಗಿಗೆ ನುಗ್ಗುತ್ತಿತ್ತು. ಅದೇ ಹೊಡೆದು ತಂದಿದ್ದ ನರಿಯೊಂದು ಅಲ್ಲಿಯೇ ಒಂದು ಕಡೆ ಬಿದ್ದಿದ್ದಿತು. ಅದರ ನೆತ್ತರಿಂದ ನೆಲ ತೊಯ್ದು ಕೆಂಪಾಗಿತ್ತು.

ಹಾಸಿಗೆಯ ಮೇಲೆ ಅಡ್ಡಾಗಿ ಜಮಾದಾರನು ಯಾವುದೋ ಪುಸ್ತಕವನ್ನು ಓದುತ್ತಿದ್ದ. ತಲೆಯ ಕಡೆ ಅತ್ಯಂತ ದಪ್ಪವಾದ ಪುಸ್ತಕದ ಮೇಲೆ ಮೇಣಬತ್ತಿಯನ್ನು ಹಚ್ಚಿ ಊರಿಡಲಾಗಿತ್ತು.

ಮಗ್ಗುಲು ಹಾಸಿಗೆ ಇಲ್ಲದುದಕ್ಕೆ ಹಾಸಿಗೆಯ ಮೇಲೆ ಬೆಲೆಯುಳ್ಳ

ಶಾಲನ್ನು ಹಾಸಲಾಗಿತ್ತು; ಅದರ ಬಹುಭಾಗವು ನೆಲದಮೇಲೆ ಹೊರಳಾಡುತ್ತಿತ್ತು. ಬಹಳ ಬೆಲೆಯ ಬಂಗಾರದ ಕೈಗಡಿಯಾಳದ ಮೇಲೆ ಅರೆಸುಟ್ಟ ಚಿರೂಡು ಸಣ್ಣಾಗಿ ಹೊಗೆ ಬಿಡುತ್ತಲಿದ್ದಿತು. ಮಂಚದ ಕೆಳಗೆ ಬೆಳ್ಳಿಯ ತಟ್ಟೆಯಲ್ಲಿ, ಮುಂಜಾನೆಯೂಟದ ಕಾಲಕ್ಕೆ ತೆಗೆದೊಗೆದ ಎಲುವುಗಳು ಇನ್ನೂ ಅಲ್ಲಿಯೇ ಇದ್ದವು. ಬಳಿಯಲ್ಲಿ ಜರದಂಚಿನ ಉಪ್ಪರಣೆಯೊಂದು ಬಿದ್ದಿತ್ತು. ಕರವಸ್ತ್ರವಿಲ್ಲದುದಕ್ಕೆ ಅದರಿಂದ ಕೈಯೊರಸಿಕೊಳ್ಳಲಾಗುತ್ತಿತ್ತು.

ಪುಸ್ತಕವು ಅಡ್ಡವಿದ್ದುದರಿಂದ ಆ ವ್ಯಕ್ತಿಯ ಮುಖವು ಷೋಡಶಿಗೆ ಸರಿಯಾಗಿ ಕಾಣಲಿಲ್ಲ. ಆದರೂ ಅವನು ಯಾವ ತೆರದ ಮನುಷ್ಯನೆಂಬುದು ಕನ್ನಡಿಯಲ್ಲಿ ಕಂಡ ಹಾಗೆ ನಿಚ್ಚಳವಾಗಿ ಕಾಣಿಸಿತು. ಧರ್ಮವಿಲ್ಲ, ಪುಣ್ಯವಿಲ್ಲ, ಲಜ್ಜೆಯಿಲ್ಲ, ಸಂಕೋಚವಿಲ್ಲ—ಇದೊಂದು ನಿರ್ದಯ ಪಾಷಾಣವಾಗಿರಬೇಕೆಂದು ಅವಳಿಗೆನಿಸಿತು. ಗಳಿಗೆಯ ಅಗತ್ಯಕ್ಕಾಗಿ ಬೇಕಾದವರ ಮಾನವನ್ನು ಬೇಕಾದ ಹಾಗೆ ತೆಗೆದುಕೊಳ್ಳಬಲ್ಲ!

ಈ ಭೂತನಗರಿಯೊಳಗೆ ಇಂತಹ ಭಯಂಕರ ಮನುಷ್ಯನ ಕೈಯೊಳಗೆ ಸಿಕ್ಕುಬಿದ್ದಿರುವೆನೆಂಬ ಕಲ್ಪನೆ ಬರುತ್ತಲೇ ಭಯದಿಂದ ಅವಳ ಸರ್ವಾಂಗವೂ ಸ್ತಬ್ಧವಾಯಿತು.

ಸುಳಿವು ತಿಳಿದು ಆತನು ಕೇಳಿದ: "ಯಾರು?"

ಸರದಾರನು ಹೊರಗಿನಿಂದಲೇ ಎಲ್ಲವನ್ನೂ ಹೇಳಿ ಚೊಕ್ಕ ಬಯ್ಗುಳೊಂದಿಗೆ ಚಕ್ರವರ್ತಿಯ ಹೆಸರನ್ನೆತ್ತಿ "ಅವನ ಮಗಳನ್ನು ಹಿಡಿದು ತಂದೆವು ಒಡೆಯಾ" ಎಂದ.

"ಯಾರನ್ನು? ಭೈರವಿಯನ್ನೇ?" ಎಂದೆನ್ನುತ್ತ ಜೀವಾನಂದನು ಗಡಿಬಿಡಿಸಿ ಎದ್ದು ಕುಳಿತ. ಅವನು ಹಾಗೆ ಅಪ್ಪಣೆ ಕೊಟ್ಟಿರಲಿಲ್ಲ. ಆದರೂ ಅವನೆಂದ: "ಒಳ್ಳೇದು, ಹೋಗು."

ಸರದಾರನು ಹೊರಟುಹೋದ ಬಳಿಕ ಜೀವಾನಂದನು ಷೋಡಶಿಗೆಂದ: "ಇಂದು ಹಣವನ್ನು ಕೊಡಬೇಕೆಂದು ಗೊತ್ತಾಗಿತ್ತು. ತಂದೆಯೇನು?"

ಷೋಡಶಿಯ ಗಂಟಲು ಒಣಗಿತ್ತು; ಶಬ್ದವು ಹೊರಡಲಿಲ್ಲ. ಕ್ಷಣ ಹೊತ್ತು ಕಾದು ಮತ್ತೆ ಅವನೇ ಕೇಳಿದ: "ತಂದಿಲ್ಲವೇ? ಏಕೆ ತರಲಿಲ್ಲ?"

ಈಸಲ ಷೋಡಶಿ ಗಟ್ಟಿಜೀನ ನೂಡಿ ಉತ್ತರವಿತ್ತಳು. ಬಲು ಮೆತ್ತಗೆ ಅವಳು ಹೇಳಿದಳು : "ಇಲ್ಲ ನಮ್ಮ ಹತ್ತಿರ."

"ಇಲ್ಲದಿದ್ದರೆ ಇಡೀ ರಾತ್ರಿ ನಿನ್ನನ್ನು ಪೇದೆಗಳ ಕೋಣೆಯೊಳಗೆ ಸೇರಿ ಹಾಕಲಾಗುವುದು! ಆಗ ತಿಳಿಯುವುದು ಅದೇನೆಂಬುದು!"

ಎರಡು ಕೈಗಳಿಂದಲೂ ಚೌಕಟ್ಟನ್ನು ಗಟ್ಟಿಯಾಗಿ ಹಿಡಿದುಕೊಂಡು, ಷೋಡಶಿ ಕಣ್ಣು ಮುಚ್ಚಿ ಸ್ತಬ್ಧವಾಗಿ ನಿಂತಿದ್ದಳು. ಅಲ್ಲಿ ಯಾವ ಪ್ರಸಂಗ ಒದಗುವುದೂ ಅಸಂಭವವೆಂದು ಅವಳಿಗೆ ತೋರಲಿಲ್ಲ.

ಬೆಳಕುವೇರಿದ ಅವಳ ಮುಖವು ಜೀವಾನಂದನ ಗಮನವನ್ನು ಸೆಳೆಯಿತು. ಇನ್ನವಳು ಮೂರ್ಛೆಗೊಂಡು ಬೀಳುವಳೆಂದು ಅವನಿಗೆನಿಸಿತು. ಕ್ಷಣಹೊತ್ತು ಅವನೂ ಮಂಕು ಬಡಿದವನಂತೆ ಕುಳಿತುಕೊಂಡ.

ಬಳಿಕ ಅವನು ದೀಪವನ್ನು ಕೈಯೊಳಗೆ ತೆಗೆದುಕೊಂಡು, ನಿರ್ಜೀವಳಾಗಿ ನಿಂತಿದ್ದ ಅವಳೆದುರಿಗೆ ಹೋಗಿ ನಿಂತುಕೊಂಡ. ಪೂಜಾರಿ ಆರತಿಯ ಪೂರ್ವದಲ್ಲಿ ನೀರಾಜನವನ್ನು ಹಚ್ಚಿ ಮೂರ್ತಿಯ ಮುಖವನ್ನು ದಿಟ್ಟಿಸುವಂತೆ, ಸ್ತಬ್ಧಗಂಭೀರಳಾದ ಸಂನ್ಯಾಸಿನಿಯ ಮುಖವನ್ನೇ ಆ ಪಾಪಿ ನೋಡುತ್ತಲಿದ್ದ. ಮೈಮೇಲಿನ ಕಾವಿಬಟ್ಟೆ, ಬೆನ್ನಮೇಲೆ ಬಿದ್ದಿದ್ದ ಒಣಕಲು ಕೂದಲು, ಬೆಳ್ಳಗಾದ ತುಟಿಗಳು, ಸುದೃಢವಾದ ಮೈಕಟ್ಟುಗಳನ್ನು ಅವಳನ್ನು ಕಣ್ಣಿಂದ ನುಂಗಿಬಿಡುವನೋ ಎಂಬಂತೆ ನೋಡಿದ.

## ೩

ಯೌವನದ ಅಪರಪ್ರಾಂತವನ್ನು ತಲುಪಿದ ಹೊರತು ಕೆಲಕೆಲವು ಹೆಣ್ಣುಮಕ್ಕಳ ಸೌಂದರ್ಯವು ಪುರುಷರ ದೃಷ್ಟಿಯನ್ನು ಸೆಳೆಯುವುದಿಲ್ಲ. ಆ ಅದೃಷ್ಟಪೂರ್ವ ಅದ್ಭುತ ಸ್ತ್ರೀಜಾತಿಯ ಸೌಂದರ್ಯವು – ಎಣ್ಣೆಗಾಣದ ಕರಡು ಕೂದಲಿನ ಮೂಲಕ, ಉಪವಾಸಗಳಿಂದ ಕಠಿನವಾದ ದೇಹಯಷ್ಟಿಯ ಮೂಲಕ, ಅನಾದೃತ ಯೌವನದ ರುಕ್ಷತೆಯ ಮೂಲಕ, ಪರಿವರ್ತನೆಗೊಂಡ ಮನೋವೃತ್ತಿಯ ಶುಷ್ಕತೆಯ ಮೂಲಕ – ಷೋಡಶಿಯ ಅಂಗಪ್ರತ್ಯಂಗಗಳಲ್ಲಿಯೂ ಜೀವಾನಂದನಿಗೆ ಒಡೆದು ಕಾಣುತ್ತಲಿದ್ದಿತು.

ಕಳೆದ ಇಪ್ಪತ್ತು ವರ್ಷಗಳಲ್ಲಿ ಅವನು ರಮಣಿಯರ ದೇಹಗಳೊಡನೆ ಅತಿಶಯ ಬೀಭತ್ಸಲೀಲೆಗಳನ್ನಾಡಿದ್ದ. ಅದೆಷ್ಟು ಲಜ್ಜಾಶೀಲ ಮಧುರ ಶೋಭನೀಯ ಜೀವಗಳನ್ನು ಅವನು ನಾಶಮಾಡಿದ್ದನೋ! ಅದರ ಚಿಹ್ನದ ಲವಲೇಶವೂ ಅವನ ಪಾಷಂಡ ಹೃದಯದಲ್ಲಿ ನಿಂತಿರಲಿಲ್ಲ. ಆ ಲಾಲಸೆಯ ಕಿಚ್ಚಿನ ಜಳವು ಅವನಿಗೆ ಒಮ್ಮೆಲೆ ತಾಗಿತು. ಆದರೆ ಈಗಿನ ಅಪರಿಚಿತವಾದ ದೃಶ್ಯವನ್ನು ಕಂಡು ಅವನ ಮನೋನ್ಮತ್ತ ವಿಕೃತದೃಷ್ಟಿ ಕ್ಷಣಕಾಲ ಸ್ತಬ್ಧವಾಯಿತು, ಗಂಭೀರವಾಯಿತು. ತಲೆಯ ಮೇಲೆ ಸೆರಗು ಹೊರುವುದು ಭೈರವಿಗೆ ವರ್ಜ್ಯ. ಆದುದರಿಂದ ಅವಳು ಮೋರೆ ತಗ್ಗಿಸಿಕೊಂಡು ಹತಬುದ್ಧಳಂತೆ ನಿಂತಿದ್ದಳು. ಜೀವಾನಂದನು ಏನೂ ಮಾತನಾಡದೆ ದೀಪವನ್ನು ಬದಿಗಿಟ್ಟು ಗ್ಲಾಸಿಗೆ ಮದ್ಯವನ್ನು ಸುರಿಸುರಿದು ಕುಡಿಯತೊಡಗಿದ. ಹೀಗೆ ಸುಮಾರು ಹದಿನೈದು ನಿಮಿಷಗಳು ನೀರವವಾಗಿ ಕಳೆದವು. ಬಳಿಕ ಜೀವಾನಂದನು ನೀಟಾಗಿ ಕುಳಿತುಕೊಂಡ. ಇಷ್ಟುಹೊತ್ತೂ ಅವನು ತನ್ನ ಮೂರ್ಛಿತಪ್ರಾಯವಾದ ಪಶುವೃತ್ತಿಯನ್ನು ಬಾರುಕೋಲಿನಿಂದ ಹೊಡೆ ಹೊಡೆದು ಎಚ್ಚರುಗೊಳಿಸಿದನೇನೋ. ಕೊನೆಗೆ "ನಿನ್ನ ಹೆಸರು ಷೋಡಶಿಯೇನು?" ಎಂದು ಪ್ರಶ್ನಿಸಿದ.

ಅದಕ್ಕೆ ಉತ್ತರವು ದೊರೆಯಲಿಲ್ಲ.

"ನಿನ್ನ ವಯಸ್ಸೆಷ್ಟು" ಪುನಃ ಜೀವಾನಂದನು ಕೇಳಿದ.

ಅದಕ್ಕೂ ಉತ್ತರವಿಲ್ಲ. ಜೀವಾದಂದನ ಸ್ವರವು ಕಠೋರವಾಯಿತು. "ಸುಮ್ಮನೆ ನಿಂತರೆ ಪ್ರಯೋಜನವಿಲ್ಲ, ಮಾತನಾಡು" ಎಂದು ಅವನು ಗದ್ದರಿಸಿದ.

ಷೋಡಶಿ ಅತಿ ಕಷ್ಟದಿಂದ ಹೇಗೆ ಹೇಗೋ ಉತ್ತರವಿತ್ತಳು: "ನನಗೆ ಇಪ್ಪತ್ತೆಂಟು ವರುಷ."

"ಸರಿ ನಾನು ಕೇಳಿದ್ದು ನಿಜವಿದ್ದರೆ, ಈಗ ಹತ್ತೊಂಬತ್ತು ಇಪ್ಪತ್ತು ವರ್ಷಗಳಿಂದ ನೀನು ಭೈರವಿಯಾಗಿದ್ದೀ. ಈ ಅವಧಿಯೊಳಗೆ ಚೆಲೋ ಗಂಟು ಮಾಡಿದ್ದೀಯಾದೀತು. ಹಣ ಏಕೆ ಕೊಡುವುದಿಲ್ಲ?"

ಷೋಡಶಿ ಶಾಂತವಾಗಿ "ನಾನು ಮೊದಲೇ ಹೇಳಿದೆನಲ್ಲ—ನನ್ನ ಹತ್ತಿರ ಮೂರು ಕಾಸೂ ಇಲ್ಲ." ಎಂದು ಹೇಳಿದಳು.

ಅವಳ ಕಳವಳದ ಮಾತಿನಲ್ಲಿಯು ಸತ್ಯದ ಕಠೋರತೆ ಜಮೀದಾರನ ಕಿವಿಯೊಳಗೆ ಅಪ್ಪಳಿಸಿತು. ಈ ವಿಷಯದಲ್ಲಿ ಅವನು ಹೆಚ್ಚು ವಾದಿಸಲಿಲ್ಲ. "ಒಳ್ಳೇದು, ಹಾಗಾದರೆ ಮಿಕ್ಕ ನಾಲ್ಕು ಜನ ಮಾಡುವ ಹಾಗೆ ಮಾಡು. ಹೊಲ ಮನೆ ಒತ್ತೆ ಹಾಕಿ, ಮಾರಿ, ಏನು ಬೇಕಾದ್ದು ಮಾಡಿ ಹಣ ತಂದು ಕೊಡು" ಎಂದ. "ಅವರಿಗೆ ಹಾಗೆ ಮಾಡಲಿಕ್ಕೆ ಬರುತ್ತದೆ, ಮಾಡುತ್ತಾರೆ—ಅವರ ಸ್ವತ್ತು. ಆದರೆ ದೇವಿಯ ಆಸ್ತಿಯನ್ನು ಮಾರಲಿಕ್ಕೆ, ಒತ್ತೆ ಹಾಕಲಿಕ್ಕೆ, ಏನು ಮಾಡಲಿಕ್ಕೂ ನನಗೆ ಅಧಿಕಾರವಿಲ್ಲ.

ಕ್ಷಣ ಹೊತ್ತು ಸುಮ್ಮನಿದ್ದು ಒಮ್ಮಿಗೆಲೆ ನಕ್ಕು ಜೀವಾನಂದನೆಂದ; "ಹಣ ತೆಗೆದುಕೊಳ್ಳುವ ಅಧಿಕಾರ ನನಗಾದರೂ ಎಲ್ಲಿದೆ? ಒಂದು ಕವಡೆಯನ್ನೂ ಬೇಡುವ ಹಾಗಿಲ್ಲ. ಆದರೂ ವಸೂಲು ಮಾಡುತ್ತೇನೆ. ಏಕೆ? ನನಗೆ ಹಣ ಬೇಕಾಗಿದೆ ಎಂದು. 'ಬೇಕು' ಎಂಬುದೇ ಜಗತ್ತಿನಲ್ಲಿ ಸತ್ಯವಾದ ಅಧಿಕಾರ; ಆದ್ದರಿಂದ ನೀನು ಕೊಡಲೇಬೇಕು! ತಿಳಿಯಿತೇ?"

ಷೋಡಶಿ ಸುಮ್ಮನೆ ಕೇಳಿಕೊಳ್ಳುತ್ತಿದ್ದಳು. ಜೀವಾನಂದನು ಹೇಳುತ್ತಿದ್ದ: "ನೀನು ಸುಶಿಕ್ಷಿತಳೆಂದು ನನಗೆನಿಸುತ್ತಿದೆ. ನಿನಗೆಲ್ಲ ತಿಳಿಯುತ್ತದೆ. ಸುಮ್ಮನೆ ಜಮೀದಾರರ ಋಣವನ್ನು ಕೊಟ್ಟುಬಿಡು. ವ್ಯರ್ಥ ಗೊಂದಲ ಮಾಡಬೇಡ."

"ನೀವಿದಕ್ಕೆ ಜಮೀದರರ ಋಣ ಎನ್ನುವಿರೊ?" ಷೋಡಶಿ ಸಾಹಸದಿಂದ ಮೊಗವೆತ್ತಿ ಕೇಳಿದಳು.

"ಇಲ್ಲ. ಆದರೆ ನೀವಿದನ್ನು ಕೊಡಲೇಬೇಕೆಂದು ನಾನೆನ್ನುವುದು. ಇತರ ಜಮೀದಾರರು ಹೀಗೆ ಬೇಡುವುದಿಲ್ಲವೆಂದು ನಿನಗೆನಿಸೀತು. ಆದರೆ ಅವರು ನನ್ನ ಹಾಗೆ ಸರಳ ಮನಸಿನವರಿರುವುದಿಲ್ಲ. ಅವರು ಸ್ಪಷ್ಟವಾಗಿ ಹೇಳುವುದಿಲ್ಲ. ಮೆಲ್ಲಮೆಲ್ಲನೆ ಊರಿಗೂರನ್ನೇ ಗಂಟಲೊಳಗೆ ಇಳಿಸಿಕೊಳ್ಳುತ್ತಾರೆ. ಅವರ ರೀತಿ ಬೇರೆ, ನನ್ನದು ಬೇರೆ. ಹೋಗಲಿ. ಈ ರಾತ್ರಿ ನೀನೊಬ್ಬಳೇ ಮನೆಗೆ ಹೋಗುವೆಯಾ? ಬರುವಾಗ ನಿನ್ನೊಡನೆ ಇದ್ದವರನ್ನು ಈಗ ಜೊತೆಗೆ ಕಳುಹಿಸಲು ನನ್ನ ಮನಸು ಒಪ್ಪುವುದಿಲ್ಲ."

ಇಷ್ಟೊತ್ತು ಮಾತು ಕತೆ ನಡೆದ ಬಳಿಕ ಷೋಡಶಿಯ ಭಯ ಬಿಡುತ್ತ ಬಂದಿತ್ತು. ನಮ್ರತೆಯಿಂದ ಅವಳೆಂದಳು: "ಅಪ್ಪಣೆಯಾದರೆ ಹೋಗುತ್ತೇನೆ."

ಆಶ್ಚರ್ಯವನ್ನು ಪ್ರಕಟಿಸುತ್ತ ಜೀವಾನಂದನು "ಒಬ್ಬಳೇ? ಈ ಕತ್ತಲೆಯೊಳಗೆ? ಅದು ಬಹಳ ಕಷ್ಟವಾದೀತು!" ಎಂದು ನುಡಿದು ನಗಲಾರಂಭಿಸಿದ. ಆ ಮಾತಿನ, ಆ ನಗೆಯ ಅರ್ಥವು ಅತ್ಯಂತ ಸ್ಪಷ್ಟವಾಗಿತ್ತು. ಷೋಡಶಿಯ ಮನಸಿನಿಂದ ತೊಲಗುತ್ತ ಬಂದಿದ್ದ ಸಂದೇಹವು ಪುನಃ ನಾಲ್ಮಡಿಯಾಯಿತು. ನಕಾರಾರ್ಥದಲ್ಲಿ ತಲೆಹಾಕಿ, ಇಲ್ಲ. ನಾನೀಗ ಹೋಗಲಿಕ್ಕೇ ಬೇಕು" ಎಂದು ಮೆಲ್ಲಗೆ ಅವಳೆಂದಳು.

ಅವಳು ಹೆಜ್ಜೆ ಮುಂದಿಡುವುದನ್ನು ಕಂಡು ಜೀವಾನಂದನು ಅಡ್ಡ ಬಂದು ಅದೇ ನಗೆಯಲ್ಲಿ ನುಡಿದ: "ಒಳ್ಳೇದು ಒಳ್ಳೇದು, ಹಣವಿಲ್ಲದಿದ್ದರೆ ಕೊಡಬೇಡ ಷೋಡಶಿ. ಅದರ ಹೊರತು ಬೇರೆ ಉಪಾಯವೂ ಇದೆ—"

ಅವನ ಬಾಯಲ್ಲಿ ತನ್ನ ಹೆಸರನ್ನು ಕೇಳಿ ಅವಳು ಬೆಚ್ಚಿದಳು. ಅವನ ಮಾತನ್ನು ಅವಳು ಪೂರ್ಣವಾಗಗೊಡಲಿಲ್ಲ. "ನಿಮ್ಮ ಹಣ, ನಿಮ್ಮ ಉಪಾಯ ನಿಮಗೇ ಇರಲಿ. ನನ್ನನ್ನಿನ್ನು ಹೋಗಗೊಡಿರಿ" ಎಂದು ಅವಳು ನಿಜವಾಗಿಯೂ ಹೆಜ್ಜೆ ಮುಂದಿಟ್ಟಳು. ಆದರೆ ಯಾವ ಜನರನ್ನು ಜೊತೆಗೆ ಕಳಿಸುವುದು ಯೋಗ್ಯವಲ್ಲವೆಂದು ಅವನೆಂದಿದ್ದನೋ ಅವರು ಅಲ್ಲಿಯೇ ಕುಳಿತಿದ್ದರು. ಅವಳು ಬೆದರಿ ತಟ್ಟನೆ ನಿಂತುಬಿಟ್ಟಳು.

ಜಮಾದಾರನು ಅವಳಿಗೆ ಯಾವ ಅಡ್ಡಿಯನ್ನೂ ಮಾಡಲಿಲ್ಲ. ಆದರೂ ಷೋಡಶಿಯ ಕಣ್ಣೆದುರಿಗೆ ಕತ್ತಲು ಕವಿಯಿತು.

ತುಸ ಸಮಯ ಸುಮ್ಮನಿದ್ದು ಅವನು ಕೇಳಿದ: "ನೀನು ಮದ್ಯ ಕುಡಿಯುತ್ತೀಯಾ?"

"ಇಲ್ಲ."

"ನಿನಗಿಬ್ಬರು ಮೂವರು ಜೀವದ ಗೆಳೆಯರಿದ್ದಾರಂತೆ; ನಿಜವೇ?"

"ಇಲ್ಲ. ಪೂರಾ ಸುಳ್ಳು."

"ನಿನ್ನ ಹಿಂದಿನ ಭೈರವಿಯರೆಲ್ಲ ಮದ್ಯ ಕುಡಿಯುತ್ತಿದ್ದದ್ದು ನಿಜವೆ?" ಸ್ವಲ್ಪ ಹೊತ್ತು ಸುಮ್ಮನಿದ್ದು ಜೀವಾನಂದನು ಮತ್ತೆ ಕೇಳಿದ.

"ನಿಜ."

"ಮಾತಂಗಿ ಭೈರವಿಯ ನಡತೆ ಚೆನ್ನಾಗಿರಲಿಲ್ಲ; ಅದಕ್ಕೆ ಪ್ರಮಾಣಗಳಿವೆ. ನಿಜವೋ ಸುಳ್ಳೋ?"

ಷೋಡಶಿ ಲಜ್ಜಿತೆಯಾಗಿ ಮೆಲ್ಲನೆಂದಳು: "ನಾನೂ ಕೇಳಿದ್ದೇನೆ, ನಿಜವಂತೆ."

"ಕೇಳಿದ್ದೀಯಾ? ಸರಿ. ಹಾಗಿದ್ದರೆ ಪೂರ್ವಪರಂಪರೆಯನ್ನು ಬಿಟ್ಟು ನೀನಾದರೂ 'ಏಕೆ ಸಜ್ಜನಳಾಗುತ್ತೀ?' "

ಸಜ್ಜನರಾಗುವ ಅಧಿಕಾರವು ಎಲ್ಲರಿಗೂ ಉಂಟೆಂದು ಉತ್ತರ ಕೊಡಬೇಕೆಂದು ಷೋಡಶಿಗೆನಿಸಿತು. ಆದರೆ ಅತ್ಯಂತ ಕಠೋರ ಸ್ವರವು ಕಿವಿಗೆ ಬೀಳಲು ಅವಳ ಅನಿಸಿಕೆ ಅಲ್ಲಿಯೇ ಉಳಿಯಿತು. ಜೀವಾನಂದನು ನೀಟಾಗಿ ಕುಳಿತು ನುಡಿದ: "ಹೆಂಗುಸರೊಡನೆ ವಾದಿಸುವುದಿಲ್ಲ ನಾನು. ಅವರ ಮತಾಮತ ಲೆಕ್ಕಿಸುವುದಿಲ್ಲ. ನೀನು ಸಜ್ಜನಳೋ ದುರ್ಜನಳೊ ಎಂಬುದನ್ನು ಕೂದಲೆಳೆ ಸೀಳಿ ಚರ್ಚಿಸುವುದಕ್ಕೆ ನನಗೆ ಸಮಯವಿಲ್ಲ. ನನ್ನ ಅಭಿಪ್ರಾಯವಿಷ್ಟೇ – ಎಲ್ಲ ಭೈರವಿಯರಂತೆ ನೀನೂ ನಡೆದುಕೊಂಡರೆ ತೀರಿತು. ನೀನು ಈವೊತ್ತು ಇಲ್ಲಿಯೇ ಇರಬೇಕು."

ಈ ಅಪ್ಪಣೆಯಿಂದ ಬಾರುಕೋಲಿನ ಹೊಡೆತ ಬಿದ್ದಂತಾಯಿತು ಷೋಡಶಿಗೆ. ಜೀವಾನಂದನು ಹೇಳುತ್ತಲಿದ್ದ: "ಇಷ್ಟೊತ್ತು ನಿನ್ನೊಂದಿಗೆ ವಾದಹಾಕುತ್ತ ನಾನೇಕೆ ಕಾಲ ಕಳೆದೆನೋ, ನನಗೇ ಆಶ್ಚರ್ಯವಾಗಿದೆ. ಮತ್ತೊಬ್ಬರು ಹೀಗೆ ನನ್ನ ಅವಮಾನ ಮಾಡಿದ್ದರೆ, ಅವರನ್ನು ಪೇದೆಗಳ ಕೋಣೆಯಲ್ಲಿ ಹಾಕುತ್ತಿದ್ದೆ. ಎಷ್ಟೋ ಮಂದಿಗೆ ಈ ಶಿಕ್ಷೆ ವಿಧಿಸಿದ್ದೇನೆ ನಾನು."

ಇದು ಬರೀ ಪೊಳ್ಳು ಬೆದರಿಕೆಯಲ್ಲವೆಂಬುದು ಅವನ ದರ್ಪದಿಂದಲೇ ತಿಳಿಯುತ್ತಿತ್ತು. ಷೋಡಶಿಗೆ ಒಮ್ಮೆಗಿಲೆ ಅಳು ಬಂದಿತು. ಅವಳು ಕೈಜೋಡಿಸಿ ಸೆರಗೊಡ್ಡಿ ಗೋಳಾಡಿದಳು: "ಇದ್ದದ್ದು ಬಿದ್ದದ್ದು ಎಲ್ಲವನ್ನೂ ತೆಗೆದುಕೊಂಡು ಬಿಡಿರಿ; ನನ್ನನ್ನು ಬಿಟ್ಟುಕೊಡಿರಿ."

ಕೊಂಚ ಹೊತ್ತು ಸುಮ್ಮನಿದ್ದು ಜೀವಾನಂದನೆಂದ: "ಅದೇಕೆ? ಇಂಥ ಅಳುವೇನೂ ನನಗೆ ಹೊಸದಲ್ಲ; ಇಂಥ ದೈನ್ಯವೂ ಹೊಸದಲ್ಲ. ಆದರೆ ಆ ಜನರಿಗೆಲ್ಲ ಗಂಡ ಇದ್ದ, ಮಕ್ಕಳು ಇದ್ದರು, ಅವರು ಅತ್ತದ್ದು – ದೈನಾಸಬಟ್ಟದ್ದು ಆಶ್ಚರ್ಯವಲ್ಲ— "

ಅವರಿಗೆ ಗಂಡನಿದ್ದ, ಮಕ್ಕಳಿದ್ದರು ಎಂಬುದನ್ನು ಕೇಳಿದೊಡನೆ ಷೋಡಶಿಯ ಮೈಮೇಲೆ ಮುಳ್ಳು ಬಂದವು.

ಜೀವಾನಂದನು ಹೇಳುತ್ತಲಿದ್ದ : "—ಆದರೆ ನಿನಗೆ ಆ ತೊಡಕಿಲ್ಲ. ಹದಿನೈದು ಹದಿನಾರು ವರ್ಷಗಳಲ್ಲಿ ನೀನು ನಿನ್ನ ಗಂಡನನ್ನು ಕಣ್ಣಿಂದ ಕೂಡ ನೋಡಿಲ್ಲ. ಅದರಿಂದ ನಿಮಗೆ ದೋಷವೂ ಇಲ್ಲ."

ಷೋಡಶಿ ಕೈಜೋಡಿಸಿಕೊಂಡು ನಿಂತಿದ್ದಳು. ಗದ್ಗದ ಸ್ವರದಿಂದ ಅವಳೆಂದಳು : "ನನ್ನ ಗಂಡನ ನೆನಪು ನನಗೆ ಸರಿಯಾಗಿಲ್ಲ, ನಿಜ. ಆದರೆ ಇದ್ದಾರಲ್ಲವೆ? ನಾನೀವರೆಗೆ ನಿಮ್ಮಲ್ಲಿ ಯಾವ ಅಪರಾಧವನ್ನೂ ಮಾಡಿಲ್ಲ. ದಯವಿಟ್ಟು ನನ್ನನ್ನು ಬಿಟ್ಟುಬಿಡಿರಿ."

"ಮಹಾವೀರ!" ಜೀವಾನಂದನು ಕೂಗಿದ. ಗಾಬರಿಯಿಂದ ನಡುಗುತ್ತ ಷೋಡಶಿ ನುಡಿದಳು : "ಬೇಕಾದರೆ ನನ್ನ ಜೀವ ತೆಗೆದುಕೊಳ್ಳಿರಿ. ಆದರೆ—"

"ಆಗಲಿ. ಅದೇನು ಶೌರ್ಯವೋ ಅಲ್ಲಿಯೇ ಅವನ ಕೋಣೆಯಲ್ಲಿ ತೋರಿಸು. ಮಹಾವೀರ!—"

ಷೋಡಶಿ ಒಮ್ಮೆಲೆ ನೆಲದಮೇಲೆ ಬಿದ್ದು ಅಳಲಾರಂಭಿಸಿದಳು : "ನನ್ನ ಜೀವ ಇರುವ ತನಕ ಯಾರು ನನ್ನನ್ನು ಒಯ್ಯುವರೋ ನೋಡುತ್ತೇನೆ. ಏನೇನು ವಿಡಂಬನೆಯಾಗುವುದುಂಟೋ ಇಲ್ಲಿಯೇ ಎದುರಿಗೇ ಆಗಲಿ. ಎಷ್ಟೆಂದರೂ ನೀವು ಬ್ರಾಹ್ಮಣರು, ಸಭ್ಯ ಗೃಹಸ್ಥರು—"

ಅವಳು ಎಷ್ಟು ದೈನ್ಯದಿಂದ ಅಂಗಲಾಚಿದರೂ ಜೀವಾನಂದನು ನಗುತ್ತಲೇ ಇದ್ದ. ಕಠೋರವಿದ್ದಷ್ಟೂ ನಿಷ್ಠುರವಾಗಿತ್ತು ಆ ನಗೆ. "ನಿನ್ನ ಮಾತು ಕೇಳಲಿಕ್ಕೆ ಒಳ್ಳೆಯವೇ ಆಗಿವೆ. ಆದರೆ ಅತ್ತು ಕರೆದು ಮಾಡಿದರೆ ನನಗೇನೂ ಕನಿಕರ ಹುಟ್ಟುವುದಿಲ್ಲ. ಇಂಥ ಸೋಗು ಬಹಳ ಬಲ್ಲೆ ನಾನು. ಹೆಂಗುಸರ ವಿಷಯದಲ್ಲಿ ನನಗೆ ಅಷ್ಟು ಆಸಕ್ತಿಯಿಲ್ಲ. ನನ್ನ ಮನಸಿಗೆ ಬಾರದವಳನ್ನು ಆಳುಗಳಿಗೆ ಕೊಟ್ಟು ಬಿಡುತ್ತೇನೆ. ನಿನ್ನನ್ನೂ ಕೊಟ್ಟುಬಿಡುತ್ತಿದ್ದೆ. ಆದರೆ ಏಕೋ ಎಂದೂ ಇಲ್ಲದೆ ಇಂದು ಮೋಹವುಂಟಾಗುತ್ತಿದೆ. ಮದ್ಯದ ಮತ್ತು ಇಳಿಯದೆ ಅದೇಕೆಂಬುದು ತಿಳಿಯುವುದಿಲ್ಲ." ಬಾಗಿಲಲ್ಲಿ ನಿಂತು ಮಹಾವೀರನು "ಜೀಯಾ" ಎಂದ. ಎದುರುಗಡೆಯ ಬಾಗಿಲನ್ನು ತೋರಿಸಿ ಜೀವಾನಂದನು ಹೇಳಿದ : "ಈವೊತ್ತು ಒಂದು ರಾತ್ರಿ ಇವಳನ್ನು ಈ ಕೋಣೆಯೊಳಗೆ ಹಾಕು. ನಾಳೆ ಏನೆಂಬುದನ್ನು ನೋಡುವ."

ಷೋಡಶಿಯ ಕಣ್ಣುಗಳಲ್ಲಿ ದಳದಳ ನೀರು ಇಳಿಯುತ್ತಿತ್ತು. ಅವಳೆಂದಳು : " ಈ ರೀತಿ ನನ್ನ ಸರ್ವನಾಶ ಮಾಡಬೇಡಿರಿ ಧನಿಯರೇ. ಕೊಂಚ ವಿಚಾರ ಮಾಡಿರಿ. ನಾಳೆ ನನ್ನಿಂದ ಜಗತ್ತಿನಲ್ಲಿ ಮೋರೆ ತೋರಿಸಲಿಕ್ಕಾಗುವುದಿಲ್ಲ."

" ಒಂದೆರಡು ದಿವಸ ಅಷ್ಟೆ. ಆಮೇಲೆ ಎಲ್ಲ ಸರಿಹೋಗುವುದು. ಈವೊತ್ತು ನನ್ನ ಲಿವರ್‌ಬೇನೆ ಬಹಳ ಹೆಚ್ಚಿದೆ. ಸುಮ್ಮನೆ ತೊಂದರೆಪಡಿಸಬೇಡ, ಹೋಗು."

ಮಹಾವೀರನು ಗದ್ದರಿಸಿದ : " ಏಳು ಏಳು, ರಂಡೇ ಏಳು ! "

ಅವನ ಬಾಯಿಂದ ಆ ಶಬ್ದವು ಹೊರಡುತ್ತಲೇ ಜೀವಾನಂದನು ಗರ್ಜಿಸಿದ : "ಎಚ್ಚರ, ಹಂದಿಮಗನೆ. ಮನುಷ್ಯರಂತೆ ಮಾತಾಡು. ಇನ್ನು ಮೇಲೆ ನನ್ನ ಅಪ್ಪಣೆಯಿಲ್ಲದೆ ಯಾವ ಹೆಂಗುಸನ್ನಾದರೂ ಹಿಡಿದುಕೊಂಡು ಬಂದರೆ ನಿನಗೆ ಗುಂಡುಹಾಕುತ್ತೇನೆ." ಮಾತನಾಡುತ್ತಾಡುತ್ತ ಅವನು ದಿಂಬನ್ನು ಹೊಟ್ಟೆಯ ಬುಡಕ್ಕಿಟ್ಟುಕೊಂಡು ಬೋರಲಾಗಿ ಮಲಗಿದ. ಮಾತನಾಡುತ್ತಿದ್ದಾಗ ಅವನಿಗೆ ವೇದನೆಯಾಗುತ್ತಿತ್ತು. ಹಾಗೆಯೇ ವಿಹ್ವಲ ಸ್ವರದಲ್ಲಿ ಮಾತನಾಡಿದ : "ಈವೊತ್ತಿನ ಮಟ್ಟಿಗೆ ಇವಳನ್ನು ಕೋಣೆಯೊಳಗೆ ಸೆರೆ ಹಾಕು. —ನಾಳೆ ನಿನ್ನ ಸತೀತ್ವದ ಪರೀಕ್ಷೆಯಾಗುವುದು. ಹೋಗು ಹೋಗು. —ತಕ್ಕೊಂಡು ನಡೆ ಇವಳನ್ನು ನನ್ನೆದುರಿನಿಂದ."

" ನಡೆಯಿರಿ ! " ವಿನಯದಿಂದ ಮಹಾವೀರನೆಂದ.

ಷೋಡಶಿ ಮರುಮಾತಾಡದೆ ಎದ್ದುನಿಂತಳು. ಅಪ್ಪಣೆಯ ಮೇರೆಗೆ ಎದುರಿನ ಕತ್ತಲೆ ಕೋಣೆಯೊಳಗೆ ಅವಳು ಹೋಗುತ್ತಲಿದ್ದಳು. ಅಷ್ಟರಲ್ಲಿ ಅವಳನ್ನು ಹೆಸರುಗೊಂಡು ಕೂಗಿ ಜೀವಾನಂದನೆಂದ : "ಸ್ವಲ್ಪ ತಡೆ. ನಿನಗೆ ಓದಲಿಕ್ಕೆ ಬರುತ್ತದಲ್ಲವೆ ? "

" ಬರುತ್ತದೆ " ಷೋಡಶಿ ಮೆಲ್ಲನುಸುರಿದಳು.

" ಹಾಗಾದರೆ ಒಂದು ಕೆಲಸ ಮಾಡು. ಈ ಪೆಟ್ಟಿಗೆಯಿದೆಯಲ್ಲ, ಅದರೊಳಗೊಂದು ಸಣ್ಣ ಕಾಗದದ ಪೆಟ್ಟಿಗೆಯಿದೆ. ಅದರಲ್ಲಿ ಸಣ್ಣದೊಡ್ಡ ಸೀಸೆಗಳಿವೆ. ಒಂದರಮೇಲೆ ಬಂಗಾಳಿಯಲ್ಲಿ 'ಮಾರ್ಫಿಯಾ' ಎಂದು ಬರೆದಿದೆ ನೋಡು. ಅದರೊಳಗಿನ ಸ್ವಲ್ಪ ಔಷಧ ಕೊಟ್ಟು ಹೋಗು. ಆದರೆ

ಒಳ್ಳೇ ಜತನದಿಂದ ಆಂ. ಭಯಯಂಕ ವಿಷ ಅದು. ಮಹಾವೀರ, ಅವಳಿಗೆ ದೀಪ ಹಿಡಿ."

ದೀಪದ ಬೆಳಕಿನಲ್ಲಿ ನಡುಗುವ ಕೈಯಿಂದ ಪೆಟ್ಟಿಗೆಯನ್ನು ತೆರೆದು, ಸೀಸೆಯನ್ನು ಹೊರಕ್ಕೆ ತೆಗೆದು, ಅಂಜುತ್ತಂಜುತ್ತ ಷೋಡಶಿ ಕೇಳಿದಳು: "ಇದರೊಳಗಿನದು ಎಷ್ಟು ಕೊಡಲಿ?"

ಹೊಟ್ಟೆಯೊಳಗಿನ ಭಯಂಕರ ವೇದನೆಯನ್ನು ಸೈರಿಸಿಕೊಂಡು ಜೀವಾನಂದನು ಹೇಳಿದ: "ಹೇಳಿದೆನಲ್ಲ, ಸ್ವ-ಲ್ಪ ಕೊಡು. ನನಗೆ ಹೇಳಲಿಕ್ಕಾಗುವುದಿಲ್ಲ. ನನ್ನ ಕೈ ನನ್ನ ಅಂಕೆಯಲ್ಲಿಲ್ಲ. ಕಣ್ಣೂ ವಶದಲ್ಲಿಲ್ಲ. ಅಳತೆಯ ಸಣ್ಣ ಕಾಜಿನ ಗ್ಲಾಸು ಇದೆ; ಅದರಲ್ಲಿ ಅರ್ಧಕ್ಕಿಂತಲೂ ಕಡಮೆ ಕೊಡು. ಕೊಂಚವೇ ಹೆಚ್ಚು ಕೊಟ್ಟರೆ ತೀರಿತು—ನಿನ್ನ ಚಂಡಿದೇವಿಯ ಅಪ್ಪ ಬಂದರೂ ನನ್ನನ್ನು ಹೆಚ್ಚರಿಸಲಾರ!"

ಷೋಡಶಿ ಅಳತೆಯ ಸೀಸೆಯನ್ನು ಹುಡುಕಿ ತೆಗೆದಳು. ಔಷಧವನ್ನು ಅದಕ್ಕೆ ಹಾಕುವಾಗ ಅವಳ ಕೈ ನಡುಗಿದವು. ಅವನು ಹೇಳಿದಂತೆ ಮಹಾ ಪ್ರಯಾಸದಿಂದ ಜತನದಿಂದ ಔಷಧವನ್ನು ಹಾಕಿ ಅವನ ಹತ್ತಿರ ತೆಗೆದುಕೊಂಡು ಹೋದಳು. ಜೀವಾನಂದನು ಕೊಂಚವೂ ಯೋಚನೆಯಿಲ್ಲದೆ ಆ ವಿಷವನ್ನು ಇಸಿದುಕೊಂಡು ಒಮ್ಮೆಲೆ ಗುಟುಕರಿಸಿಬಿಟ್ಟ. ಪರೀಕ್ಷಿಸಿ ನೋಡಲಿಲ್ಲ, ಪ್ರಶ್ನಿಸಲಿಲ್ಲ, ಸುಮ್ಮನೆ ಕಣ್ಣೆರೆದು ಕೂಡ ನೋಡಲಿಲ್ಲ.

೪

ಷೋಡಶಿಯನ್ನು ಕತ್ತಲೆ ಕೋಣೆಯೊಳಗೆ ಹಾಕಿ ಬಾಗಿಲಿಕ್ಕಿ ಚಿಲಕ ಹಾಕಿಕೊಂಡು ಮಹಾವೀರನು ಹೊರಟುಹೋದ. ಬಾಗಿಲಿಗೆ ಒಳಚಿಲಕ ವಿರಲಿಲ್ಲ. ಅವಳು ಮುಚ್ಚಿದ ಬಾಗಿಲಿಗೆ ಆತು ಎಚ್ಚರದಿಂದ ಕುಳಿತುಕೊಂಡಳು. ಅವಳ ದೇಹ ಮನಗಳೆರಡೂ ದಣಿವಿನ ಕೊನೆಯ ಎಲ್ಲೆಗೆ ಮುಟ್ಟಿದ್ದವು. ರಾತ್ರಿಯ ಹೊತ್ತು ಯಾವ ವಿಪತ್ತಿನ ಸಂಭವವಿಲ್ಲದಿದ್ದರೂ ನಿದ್ದೆಮಾಡುವುದು ಅವಳಿಗೆ ಭೀತಿಪ್ರದವಾಗಿತ್ತು. ಕೊಂಚವೂ ಅಲಕ್ಷಿಸುವುದು ಇಷ್ಟವಾಗಿರಲಿಲ್ಲ.

ಇಡೀ ರಾತ್ರಿ ಹೇಗೂ ಹೋದೀತು. ಆದರೆ ನಾಳೆ ತನ್ನ ಸತೀತ್ವದ ಪರೀಕ್ಷೆಯಾಗುವುದೆಂದು ಅವಳು ಕಿವಿಯಾರೆ ಕೇಳಿದ್ದಳು. ಆ ಸಂಕಟದಿಂದ ಪಾರಾಗುವುದಕ್ಕೆ ಯಾವ ಉಪಾಯವೂ ಅವಳಿಗೆ ಕಾಣುತ್ತಿರಲಿಲ್ಲ.

ತಂದೆಯನ್ನು ಅವಲಂಬಿಸಿರುವುದು ಶಕ್ಯವಿರಲಿಲ್ಲ. ಅವನ ನೆನಪಾಗುತ್ತಲೆ ಷೋಡಶಿಗೆ ಮರಣಪ್ರಾಯ ದುಃಖವಾಯಿತು. ಅವನನ್ನು ಅವಳು ಚೆನ್ನಾಗಿ ಬಲ್ಲಳು. ಅವನು ಪುಕ್ಕನಲ್ಲದೆ ಅಷ್ಟೇ ನೀಚ. ಮಧ್ಯರಾತ್ರಿಯಲ್ಲಿ ಮನೆಗೆ ತಿರುಗಿ ಬಂದ ಬಳಿಕ ಈ ಸುದ್ದಿ ತಿಳಿದರೂ ಅವನು ಏನನ್ನೂ ಮಾಡಲಾರ. ಊರೊಳಗೆ ಬೊಬ್ಬಾಟವಾಗಬಾರದೆಂದು ಆದಷ್ಟು ಮುಚ್ಚಿಕೊಳ್ಳುವುದಕ್ಕೇ ಪ್ರಯತ್ನಿಸುವವ. ಒಂದಿಲ್ಲೊಂದು ದಿನ ಜಮೀದಾರನು ಷೋಡಶಿಯನ್ನು ಬಿಟ್ಟೇ ಬಿಡುತ್ತಾನೆ, ಸುಮ್ಮನೆ ವಿರೋಧವನ್ನು ಬೆಳೆಸಿದರೆ ದತ್ತಿ ಭೂಮಿಗಳು ಕೈ ಬಿಟ್ಟು ಹೋಗಿ ಲಾಭಕ್ಕಿಂತ ಹಾನಿಯೇ ಹೆಚ್ಚಾಗುವುದು ಎಂದು ಯೋಚಿಸಿ ಅವನು ಸ್ವಸ್ಥವಾಗಿ ಕುಳಿತುಕೊಳ್ಳುವವ. ಧನಿಗೆ ಸಲ್ಲಿಸುವ ಕಾಣಿಕೆಯ ವಿಚಾರದಲ್ಲಿ ತಾರಾದಾಸನ ತೀಕ್ಷ್ಣದೃಷ್ಟಿ ಎಲ್ಲಿಯವರೆಗೆ ಹರಿಯಬಹುದೆಂಬುದು ಷೋಡಶಿಗೆ ಸ್ಪಷ್ಟವಾಗಿ ಕಾಣುತ್ತಲಿತ್ತು.

ಅಲ್ಲದೆ ಇಂತಹ ಅಡಮುಟ್ಟ ಜಮೀದಾರನ ವಿರುದ್ಧವಾಗಿ ಅವನು ಮಾಡುವುದಾದರೂ ಏನು? ಆರೇಳು ಹರದಾರಿಗಳೊಳಗೆ ಠಾಣ್ಯವೂ ಇಲ್ಲ, ಚಾವಡಿಯೂ ಇಲ್ಲ. ಪೋಲೀಸರ ಕಡೆ ದೂರು ಒಯ್ಯಬೇಕೆಂದರೆ, ತಾರಾದಾಸನಿಗೆ ಜನಬಲ ಧನಬಲ ಯಾವುದೂ ಇರಲಿಲ್ಲ. ಅತ್ಯಾಚಾರವು ಎಂತಹ ದೊಡ್ಡದೇ ಇರಲಿ, ಈ ಪ್ರಬಲ ಶಕ್ತಿಯ ಎದರು ತಲೆಬಗ್ಗಿಸಿಕೊಂಡಿರದೆ ಗತ್ಯಂತರವಿಲ್ಲವೆಂಬುದು ಷೋಡಶಿಗೆ ನಿಚ್ಚಳವಾಗಿ ಗೋಚರಿಸುತ್ತಿತ್ತು.

ಈ ಎಲ್ಲ ಸಂಕಟಗಳಲ್ಲಿ ಇನ್ನೊಂದು ಯೋಚನೆ ಅವಳ ಮನಸ್ಸಿನಲ್ಲಿ ಮತ್ತೆ ಮತ್ತೆ ಬರುತ್ತಲಿದ್ದಿತು–ತಾನು ಚಿಕ್ಕಂದಿನಿಂದಲೂ ಮನಃಪೂರ್ವಕವಾಗಿ ಪೂಜಿಸುತ್ತ ಬಂದಿದ್ದ ಚಂಡೀಮಾತೆಯದು!–ಆದರೆ ಪಕ್ಕದ ಕೋಣೆಯಲ್ಲಿ ಮಲಗಿದ್ದ ಮನುಷ್ಯನ ಗೊರಕೆ ಷೋಡಶಿಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅವನಿಗೆ ಧರ್ಮ ಅಧರ್ಮ, ಒಳ್ಳೆಯದು ಕೆಟ್ಟದು, ತನ್ನದು ಪರರದು ಎಂಬುದಾವುದೂ ಲೆಕ್ಕದಲ್ಲಿಲ್ಲ. ಸ್ತ್ರೀ ಜಾತಿಯ ಕಣ್ಣೀರು ಅವನ ಹೃದಯವನ್ನು ಕರಗಿಸಲಾರದು. ರಮಣಿಯರ ರೂಪ ಯೌವನಗಳಲ್ಲಿಯೂ ಅವನಿಗೆ

ಮೋಹವಿಲ್ಲ, ಆಕರ್ಷಣವಿಲ್ಲ. ಗಂಡ ಮಕ್ಕಳು ಇದ್ದ ನಾರಿಯರ ಸತೀತ್ವವನ್ನು ನಿರರ್ಥಕವಾಗಿ ಹಾಳುಮಾಡಲು ಅವನು ಹಿಂಜರಿದವನಲ್ಲ. ಅವರ ನೇತ್ರರಲ್ಲಿ ಅಡಿಯಿಟ್ಟು ನಡೆಯುವುದಕ್ಕೂ ಅವನು ಹಿಂದು ಮುಂದು ನೋಡಿದವನಲ್ಲ. ತನ್ನ ಪ್ರಾಣವನ್ನು ಕೂಡ ಎರಡನೆಯವರ ಕೈಯಲ್ಲಿ ಕೊಟ್ಟು, ಘೋರ ವಿಷವನ್ನು ನಿಸ್ಸಂಕೋಚವಾಗಿ ಕಣ್ಣುಮುಚ್ಚಿಕೊಂಡು ಕುಡಿದುಬಿಟ್ಟ, ಸ್ವಲ್ಪವೂ ಅನುಮಾನಿಸಲಿಲ್ಲ. ಇಂಥ ಅಶ್ರದ್ಧೆ-ಅನಾಸಕ್ತಿಗಳ ಮೂರ್ತಿಯಾದ ಬಂಡೆಯನ್ನು ದೂರ ಸರಿಸಿ, ತಾಯಿ ಚಂಡಿಯೇ ತನಗೆ ರಕ್ಷಣೆಯ ಹಾದಿಯನ್ನು ತೋರಿಸಿದರೆ—!

ಎತ್ತನೋಡಿದತ್ತ ಕತ್ತಲೆಯ ಹೊರತೇನೂ ಷೋಡಶಿಗೆ ಕಾಣಿಸುತ್ತಿರಲಿಲ್ಲ. ಬೆಳಕಿನ ಸಣ್ಣ ಕಿರಣ ಕೂಡ ಅವಳ ಕಣ್ಣೆದುರಿಗೆ ಬರುತ್ತಿರಲಿಲ್ಲ. ಹೀಗೆ ಪೂರಾ ನಿರಾಧಾರಳಾದುದರಿಂದ ಅವಳು ಕಲ್ಪನಾರಾಜ್ಯದಲ್ಲಿ ಗುಡಿಯೊಳಗಿನ ವ್ಯವಹಾರಗಳ ಜಾಲವನ್ನು ಹೆಣೆಯುತ್ತ ಕುಳಿತಳು.

ಪ್ರಾತಃಕಾಲದ ಸುಮಾರಿಗೆ ಅವಳ ಕಣ್ಣು ಕೊಂಚ ಮುಚ್ಚಿದವು. ಬೆನ್ನಿಗೆ ಪೆಟ್ಟು ಬಿದ್ದಂತಾಗಲು ಥಟ್ಟನೆ ಎಚ್ಚರಾಗಿ ಅವಳು ಎದ್ದು ಕುಳಿತಳು. ಆಗಲೇ ಸೂರ್ಯಪ್ರಕಾಶವು ಕಿಟಕಿಯಿಂದ ಒಳಗೆ ಪ್ರವೇಶಿಸಿತ್ತು.

"ಹೊರಗೆ ಬರ್ರಿ. ನಾನು ಏಕಕೌಡಿ" ಹೊರಗಿನಿಂದ ಬಾಗಿಲನ್ನು ತಳ್ಳುತ್ತಿದ್ದವನು ನುಡಿದ.

ಬಟ್ಟೆಗಳನ್ನು ನೇವರಿಸಿಕೊಂಡು ಷೋಡಶಿ ಎದ್ದು ನಿಂತಳು. ಬಾಗಿಲನ್ನು ತೆರೆದು ನೋಡಿದಳು. ಎದುರಿನಲ್ಲಿ ಕಳೆದ ರಾತ್ರಿಯಂತೆಯೇ ಜೀವಾನಂದನು ತನ್ನ ಹಾಸಿಗೆಯ ಮೇಲೆ ತಕ್ಕೆಗಾತು ಕುಳಿತುಕೊಂಡಿದ್ದ. ರಾತ್ರಿ ಮಬ್ಬಾಳವಾದ ದೀಪದ ಬೆಳಕಿನಲ್ಲಿ ಅವನ ಮುಖಮುದ್ರೆ ಅವಳಿಗೆ ಸರಿಯಾಗಿ ಕಂಡಿರಲಿಲ್ಲ. ಈಗ ನೋಡಿದಳು. ಅತ್ಯಾಚಾರದ ಎಲ್ಲ ಬಗೆಯ ಪರಿಣಾಮಗಳೂ ಅವನ ಶರೀರದಲ್ಲಿ ಎಲ್ಲೆಲ್ಲಿಯೂ ಕಂಡುಬಂದವು. ಅವನ ವಯಸ್ಸನ್ನು ಕಲ್ಪಿಸಿಕೊಳ್ಳುವುದು ಅವಳಿಗೆ ಅಸಾಧ್ಯವಾಯಿತು. ನಾಲ್ವತ್ತಿರಬಹುದು, ಒಂದು ವೇಳೆ ಹೆಚ್ಚೂ ಇರಬಹುದು. ಹಣೆಯ ಮೇಲಿನ ಎರಡೂ ಬದಿಯ ಕೂದಲು ಕೊಂಚ ಕೊಂಚ ಹಣ್ಣಾಗಿವೆ. ಹರವಾದ ಹಣೆಯಲ್ಲಿ ಗೆರೆಗಳ ಜಾಳಿಗೆ. ಅದರ ಮೇಲೆ ಅಲ್ಲಲ್ಲಿ ಕಪ್ಪು ಕಲೆಗಳು.

ಅವನ ದೃಷ್ಟಿ ಕ್ಷಯರೋಗಿಗಳಂತೆ ಅಸ್ವಾಭಾವಿಕ ತೀಕ್ಷ್ಣವಾಗಿ ಕಾಣು ತ್ತಿವೆ. ಆ ಕಣ್ಣುಗಳ ಕೆಳಗೆ ಉದ್ದಮೂಗು ಎದ್ದು ನಿಂತಿದೆ. ಮೊದಲೇ ಹಂಚುವಡೆದಿದ್ದ ಅವನ ಮುಖದಲ್ಲಿ ಹೊಟ್ಟೆಯೊಳಗಿನ ವೇದನೆಯ ಕಪ್ಪು-ಕಾಡಿಗೆ ದಟ್ಟವಾಗಿ ಹರಡಿದೆ.

"ಎಷ್ಟೊ ಹೆದರಬೇಡ, ಈಕಡೆ ಬಾ" ಕೈಸನ್ನೆ ಮಾಡುತ್ತ ತೀಕ್ಷ್ಣ ಸ್ವರದಿಂದ,ಜೀವಾನಂದನೆಂದ.

ಅಂಜುತ್ತಂಜುತ್ತ ಕೆಲಹೆಜ್ಜೆ ಮುಂದೆ ಹೋಗಿ ಷೋಡಶಿ ದೃಷ್ಟಿ ಯನ್ನು ಕೆಳಗಿಟ್ಟು ನಿಂತುಕೊಂಡಳು. ಜೀವಾನಂದನು ಹೇಳಿದ: "ಪೋಲಿ ಸರು ಮನೆಯನ್ನು ಮುತ್ತಿದ್ದಾರೆ. ಮ್ಯಾಜಿಸ್ಟ್ರೇಟರು ಒಳಂಗಳದೊಳಗೇ ಬಂದಿರುವರಂತೆ. ಇಷ್ಟರಲ್ಲಿಯೇ ಅವರು ಮನೆಯೊಳಗೆ ಬಂದು ಬಿಡ ಬಹುದು—"

ಷೋಡಶಿಗೆ ಮನಸಿನೊಳಗೇ ಭಯವಾಯಿತು. ಅವಳು ಮಾತ ನಾಡಲಿಲ್ಲ. ಜೀವಾನಂದನು ಹೇಳುತ್ತಲಿದ್ದ: "ಜಿಲ್ಲೆಯ ಮ್ಯಾಜಿಸ್ಟ್ರೇಟರು ಸಂಚಾರಕ್ಕೆ ಹೊರಟಿದ್ದರು. ಹರದಾರಿ ದೂರದಲ್ಲಿ ಅವರು ಬೀಡು ಬಿಟ್ಟಿ ದ್ದಾರೆ. ನಿನ್ನೆ ರಾತ್ರಿ ಸಿಮ್ಮಪ್ಪ ಹೋಗಿ ಅವರಿಗೆ ಎಲ್ಲವನ್ನೂ ಹೇಳಿಬಿಟ್ಟ. ಅಷ್ಟಕ್ಕೇ ಅವರು ಬರುತ್ತಿರಲಿಲ್ಲ. ಈ ಕೆ ಸಾಹೇಬರಿಗೆ ನನ್ನ ಮೇಲೆ ಬಹಳ ದಿವಸದ ಕುನಸು ಇದೆ. ಹೋದ ವರ್ಷ ನನ್ನನ್ನು ಹಿಡಿಯುವುದ ಕ್ಕಾಗಿ ಎರಡು ಸಲ ಬಲೆ ಬೀಸಿದ್ದರು; ಸಾಧಿಸಿರಲಿಲ್ಲ. ಈಗ ಅವರು ನನ್ನನ್ನು ಹಿಡಿದಿದ್ದಾರೆ—" ಎಂದು ಅವನು ಸ್ವಲ್ಪ ನಕ್ಕ.

ಮೋರೆ ತಿರುವಿಕೊಂಡು ಏಕಕೌಡಿ ಅಲ್ಲಿಯೇ ನಿಂತಿದ್ದ. "ಧನಿ ಯರೇ, ಈಗ ನನ್ನ ಪುಣ್ಯ ಕೂಡ ತೀರಿದಂತೆ ಕಾಣುತ್ತದೆ" ಎಂದು ಅವ ನೆಂದ.

ಜೀವಾನಂದನು ತಲೆಹಾಕಿ, "ಶಕ್ಯವಿದೆ" ಎಂದು ಷೋಡಶಿಗೆ ನುಡಿದ: "ಸೇಡು ತೀರಿಸಿಕೊಳ್ಳುವುದಕ್ಕೆ ಇದೇ ಹೊತ್ತು. ಈಗ ನನ್ನನ್ನು ಸೆರೆಮನೆಗೆ ಅಟ್ಟುವುದೂ ಸಾಧ್ಯವಿದೆ!"

ಮೊಗವೆತ್ತಿ ನೋಡಿದಳು ಷೋಡಶಿ; ಜೀವಾನಂದನು ನಟ್ಟ ನೋಟ ದಿಂದ ಅವಳನ್ನೇ ನೋಡುತ್ತಿದ್ದ. ತಿರುಗಿ ತನ್ನ ನೋಟವನ್ನು ಕೆಳಗಿಳಿಸಿ

ಶಾಂತವಾಗಿ ಅವಳು ಕೇಳಿದಳು: "ಇಷ್ಟಕ್ಕೇ ಸೆರೆಮನೆ ಸೇರಬೇಕಾಗು ವುದೆ?"

ಜೀವಾನಂದನೆಂದ: "ಕಾಯದೆ! ಅಲ್ಲದೆ ಕೆ ಸಾಹೇಬರ ಕೈಯೊಳಗೆ ಸಿಕ್ಕಿದ್ದೇನೆ, ಬಹಾದೂರಬಾಗಿನ ಹೋಟೆಲಿನಲ್ಲಿದ್ದಾಗ ಇವರ ಕೈಯೊಳಗೆ ಸಿಕ್ಕುಬಿದ್ದು ಇಪ್ಪತ್ತು ದಿನ ಸೆರೆಮನೆಯಲ್ಲಿ ಬಿದ್ದಿದ್ದೆ. ಮಗ ಜಾಮೀನು ತೆಗೆದುಕೊಳ್ಳಲಿಲ್ಲ – ಅಲ್ಲದೆ ಜಾಮೀನು ಕೊಡಲಿಕ್ಕೆ ಅಲ್ಲಿ ಯಾರಿದ್ದರು?"

"ಬಹಾದೂರಬಾಗಿನ ಹೊಟೆಲಿನಲ್ಲಿ ನೀವಿದ್ದಿರೇನು?" ಉತ್ಸುಕತೆ ಯಿಂದ ಷೋಡಶಿ ಕೇಳಿದಳು.

"ಹೌದು. ಒಂದು ಪ್ರೇಮಜಾಲದಲ್ಲಿ ಸಿಲುಕಿದ್ದೆ ಆಗ ನಾನು. ಆ ಮಗ ಘೋಷಬಾಬು ಕೇಳಲಿಲ್ಲ; ಪೋಲಿಸರಿಗೆ ಒಪ್ಪಿಸಿದ. ಹೋಗಲಿ ಬಿಡು – ಅದೊಂದು ರಾಮಾಯಣವೇ. ಯಾರೂ ಮರೆತಿಲ್ಲ, ಎಲ್ಲರೂ ನನ್ನನ್ನು ಚೆನ್ನಾಗಿಯೇ ನೆನಪಿಟ್ಟಿದ್ದಾರೆ. ಈಪ್ರೊತ್ತೂ ಓಡಿಹೋಗುತ್ತಿದ್ದೆ. ಆದರೆ ಬೇನೆಯಿಂದ ಬಳಲಿ ಬೆಂಡಾಗಿದ್ದೇನೆ. ಮಿಸುಕಾಡಲೂ ತ್ರಾಣವಿಲ್ಲ."

"ನಿನ್ನೆಯ ವೇದನೆ ಇನ್ನೂ ನಿಂತಿಲ್ಲವೆ?" ಷೋಡಶಿ ಮೆಲ್ಲನೆ ಪ್ರಶ್ನಿಸಿದಳು.

"ಇಲ್ಲ, ಭಯಂಕರ ಹೆಚ್ಚಾಗಿದೆ. ಇಷ್ಟು ಧಟ್ಟನೆ ಕಡಿಮೆಯಾಗುವ ಬೇನೆಯಲ್ಲ ಇದು."

ಷೋಡಶಿ ಕ್ಷಣಹೊತ್ತು ಸ್ತಬ್ಧವಾಗಿದ್ದು ಬಳಿಕೆಂದಳು: "ಹಾಗಾದರೆ ನಾನೇನು ಮಾಡಬೇಕು?"

"ನೀನು ಇಷ್ಟೇ ಹೇಳಬೇಕು – 'ನಾನಿಲ್ಲಿಗೆ ಸ್ವೇಚ್ಛೆಯಿಂದಲೇ ಇಲ್ಲಿ ಉಳಿದುಕೊಂಡೆ.' ಇಷ್ಟು ಹೇಳಿದರೆ ಎಲ್ಲಾ ದತ್ತಿಭೂಮಿಗಳನ್ನು ಬಿಟ್ಟು ಬಿಡುತ್ತೇನೆ, ನಗದು ಸಾವಿರ ರೂಪಾಯಿಗಳನ್ನು ಕೊಡುತ್ತೇನೆ, ಕಾಣಿಕೆಯ ಮಾತನ್ನೇ ತೆಗೆಯುವುದಿಲ್ಲ."

ಏಕಕೌಡಿ ಒಡೆಯನ ಮಾತನ್ನು ಪಡಿನುಡಿಯುವುದಕ್ಕಾಗಿ ಹಾತೊರೆದು, ಷೋಡಶಿಯ ಮುಖವನ್ನು ನೋಡಿದವನೇ ಸುಮ್ಮನಾಗಿ ಬಿಟ್ಟ. ಜೀವಾನಂದನನ್ನು ದಿಟ್ಟಿಸುತ್ತ ಷೋಡಶಿಯೆಂದಳು: "ನಾನು ಹೀಗೆ ಒಪ್ಪಿಕೊಳ್ಳುವುದೆಂದರೆ ಏನೆಂಬುದು ನಿಮಗೆ ತಿಳಿಯುವುದಷ್ಟೆ?

ಅಷ್ಟಾದ ಬಳಿಕ, ಭೂಮಿ ಕಾಣಿ ಹಣಕಾಸುಗಳನ್ನು ತೆಗೆದುಕೊಂಡರೆ ನಷ್ಟವಾದ ಮಾನವು ತುಂಬಿಕೊಳ್ಳುವುದೆಂದು ನಿನಗೆನಿಸುವುದೆ ? ”

ಜೀವಾನಂದನ ಮುಖವು ಒಮ್ಮೆಲೆ ಬಿಳುಪಿಟ್ಟಿತು. ಅವನ ಕಣ್ಣುಗಳಲ್ಲಿ ಕಳೆದ ರಾತ್ರಿಯಂತೆಯೇ ಸ್ನಿಗ್ಧದೃಷ್ಟಿ ಎಲ್ಲಿಂದಲೋ ಮೆಲ್ಲಗೆ ಬಂದು ನಿಂತಿತು. ಕೆಲಹೊತ್ತು ಅವನು ಒಂದು ಶಬ್ದವನ್ನೂ ಉಚ್ಚರಿಸಲಿಲ್ಲ. ಆ ಬಳಿಕ ಸಾವಕಾಶವಾಗಿ ತಲೆಯಾಡಿಸುತ್ತ ಮಾತನಾಡಿದ: “ಅದು ನಿಜ, ಷೋಡಶಿ ಅದು ನಿಜ. ಈವರೆಗೆ ನೀನು ಪಾಪ ಮಾಡಿಲ್ಲ. ಇನ್ನು ಮುಂದೆಯೂ ಮಾಡುವುದಿಲ್ಲ! ಅದು ನಿಜ!”

ನಸುನಕ್ಕು ಮತ್ತೆ ಅವನೆಂದ: “ ಮಾನವನ್ನು ಹಣಕ್ಕೆ ಮಾರಲಾಗುವುದಿಲ್ಲವೆಂಬುವನ್ನು ಈ ಕ್ಷಣ ಮರೆತಿದ್ದೆ. ಇರಲಿ ಬಿಡು. ಸತ್ಯವಿದ್ದದ್ದು ಹೇಳಿ ಬಿಡು. ಇನ್ನೂ ಮೇಲೆ ಜಮೀನದಾರನಿಂದ ನಿನಗೆ ಯಾವ ಕಾಟವೂ ಆಗಲಾರದು.”

ಕನಿಕರಪಟ್ಟು ಏಕಕಾಲಕ್ಕೆ ಏನೋ ಹೇಳಲಿಕ್ಕೆ ಮತ್ತೆ ಹಾತೊರೆದ. ಅಷ್ಟರಲ್ಲಿ ಯಾರೋ ಬಾಗಿಲನ್ನು ತಟ್ಟಿದರು. ಅವನ ಬಾಯೊಳಗಿನ ಮಾತು ಬಾಯೊಳಗೇ ಉಳಿಯಿತು. ಅವನ ಮೋರೆ ಕಳೆಗುಂದಿತು.

“ಚಿಲಕ ಹಾಕಿಲ್ಲ, ತೆರೆದುಕೊಂಡು ಒಳಗೆ ಬರ್ರಿ” ಜೀವಾನಂದನೆಂದ.

ಬಾಗಿಲು ತೆರೆಯಿತು. ಎದುರಿಗೆ ಸಣ್ಣ ದೊಡ್ಡ ಪೋಲಿಸ್ ಅಧಿಕಾರಿಗಳು ಕಣ್ಣಿಗೆ ಬಿದ್ದರು. ಎಲ್ಲರ ಮುಂದುಗಡೆ ಜಿಲ್ಲಾ ಮ್ಯಾಜಿಸ್ಟ್ರೇಟರು. ಅವರ ಹಿಂದುಗಡೆಯಿಂದ ತಾರಾದಾಸನು ಮೆಲ್ಲಗೆ ಹಣಿಕಿ ನೋಡುತ್ತಿದ್ದ. ಅವನು ಒಮ್ಮೆಲೆ ಒಳಗೆ ಬಂದು ಅಳುತ್ತಳುತ್ತ ನುಡಿದ: “ಧರ್ಮಾವತಾರರೇ, ಈಕೆ ನನ್ನ ಮಗಳು ಮಹಾಶಯ. ಚಂಡೀದೇವಿಯ ಭೈರವಿ. ಈವೊತ್ತು ನೀವು ದಯಮಾಡದಿದ್ದರೆ ದುಡ್ಡಿಗಾಗಿ ಇವರು ಇವಳ ಕೊಲೆ ಮಾಡುತ್ತಿದ್ದರು, ಧರ್ಮಾವತಾರ!”

ಷೋಡಶಿಯನ್ನು ಅಡಿಯಿಂದ ಮುಡಿಯವರೆಗೂ ನೋಡಿ ಶುದ್ಧ ಬಂಗಾಲಿಯಲ್ಲಿ ಕೆ ಸಾಹೇಬರು ಪ್ರಶ್ನಿಸಿದರು: “ನಿನ್ನ ಹೆಸರು ಷೋಡಶಿಯೇನು? ನಿಮ್ಮ ಮನೆಯಿಂದ ನಿನ್ನನ್ನು ಹಿಡಿತರಿಸಿ ಇಲ್ಲಿ ಇವರು ಸೆರೆ ಇಟ್ಟಿದ್ದರೇನು ?”

"ಇಲ್ಲ, ನಾನು ಸ್ವೇಚ್ಛೆಯಿಂದಲೇ ಬಂದೆ. ನನ್ನ ಮೈಗೆ ಯಾರೂ ಕೈಹಚ್ಚಲಿಲ್ಲ."

ಚೀರಾಡುತ್ತ ಚಕ್ರವರ್ತಿ ಹೇಳಿದ: "ಇಲ್ಲ ಜೀಯಾ, ಇವಳು ಸುಳ್ಳು ಹೇಳುತ್ತಾಳೆ. ಇಡೀ ಊರೇ ಸಾಕ್ಷಿ. ನನ್ನ ಮಗಳು ಅಡಿಗೆ ಮಾಡುತ್ತಿದ್ದಳು. ಎಂಟು ಜನ ಪೇದೆಗಳು ಬಂದು, ಇವಳನ್ನು ಹೊಡೆಯುತ್ತ ಎಳೆದುಕೊಂಡು ಬಂದರು."

ಜೀವಾನಂದನ ಕಡೆಗೊಮ್ಮೆ ನೋಟವನ್ನು ಬೀರಿ ಮ್ಯಾಜಿಸ್ಟ್ರೇಟರು ಷೋಡಶಿಗೆಂದರು: "ಏನೇನೂ ಹೆದರಬೇಡ. ಇದ್ದದ್ದನ್ನು ಹೇಳು. ನಿನ್ನನ್ನು ಮನೆಯಿಂದ ಹಿಡಿದು ಎಳೆದುಕೊಂಡು ಬಂದರೇನು?"

"ಇಲ್ಲ, ನಾನೇ ಬಂದೆ."

"ಏಕೆ ಬಂದೆ?"

"ಕೆಲಸವಿತ್ತು!"

"ಇಡೀ ರಾತ್ರಿ ಕೆಲಸವೆ?" ಸಾಹೇಬರು ಮುಗುಳ್ನಗುತ್ತ ಪ್ರಶ್ನಿಸಿದರು.

"ಹೌದು, ಇಡೀ ರಾತ್ರಿ ಇಲ್ಲಿ ನನ್ನ ಕೆಲಸವಿತ್ತು. ಒಮ್ಮೆಲೆ ಇವರ ಪ್ರಕೃತಿ ಕೆಟ್ಟಿದ್ದರಿಂದ ಮನೆಗೆ ಹೋಗಲಿಕ್ಕಾಗಲಿಲ್ಲ." ಷೋಡಶಿ ಅತ್ಯಂತ ಶಾಂತವಾಗಿ ಉತ್ತರವಿತ್ತಳು.

ತಾರಾದಾಸನು ದೊಡ್ಡ ದನಿ ತೆಗೆದು ಒದರಾಡತೊಡಗಿದ: "ಇವಳನ್ನೇನು ಕೇಳುತ್ತೀರಿ ಮಹಾಶಯ, ಸುಳ್ಳು–ಸಂಪೂರ್ಣ ಸುಳ್ಳು–ಎಲ್ಲಾ ಕೃತಕ. ಕಲಿಸಿಕೊಟ್ಟದ್ದು."

ಅವನ ಮಾತಿನ ಕಡೆ ಲಕ್ಷ್ಯಕೊಡದೆ ಸಾಹೇಬರು ಕೆನ್ನೆಯೊಳಗೇ ನಕ್ಕರು. ಸಿಳ್ಳುಹಾಕುತ್ತ ಅವರು ಬಂದೂಕು ಪಿಸ್ತೂಲುಗಳನ್ನು ಸೂಕ್ಷ್ಮವಾಗಿ ನಿರುಕಿಸಿದರು. ಬಳಿಕ ಜೀವಾನಂದನನ್ನು ಕುರಿತು ಸಹಜವಾಗಿ ನುಡಿದರು: "ಈ ವಸ್ತುಗಳ ಲೈಸನ್ಸ್ ಇದ್ದೇ ಇರಬೇಕು ನಿಮ್ಮ ಕಡೆ!"

ಇಷ್ಟೆಂದು ಸಾಹೇಬರು ಮೆಲ್ಲಮೆಲ್ಲನೆ ಹೊರಬಿದ್ದರು.

## ೫

ಮ್ಯಾಜಿಸ್ಟ್ರೇಟರ ಕುದುರೆಯ ಕೊಳಗದ ಸಪ್ಪುಳ ಮೆಲ್ಲಮೆಲ್ಲಗೆ ಅಸ್ಪಷ್ಟವಾಯಿತು. ಪೋಲಿಸ್ ಅಧಿಕಾರಿಗಳು ತಮ್ಮ ಪೇದೆಗಳಿಗೆ ಹೊರಟು ಹೋಗಲು ಅಪ್ಪಣೆ ವಿಧಿಸಿದರು. ಆಗ ತಾರಾದಾಸನಿಗೆ ಒಮ್ಮಿಂದೊಮ್ಮೆಲೆ ತನ್ನ ಪರಿಸ್ಥಿತಿಯ ಅರಿವುಂಟಾಯಿತು. ಈವರೆಗೆ ಅವನು ಮೋಡಗವಿದು ಬೀಸುತ್ತಿದ್ದ ಬಿರುಗಾಳಿಯಲ್ಲಿ ಸಿಕ್ಕಂತಾಗಿದ್ದ. ಒಮ್ಮೆಲೆ ಮಧ್ಯಾಹ್ನಸೂರ್ಯನ ಕಿರಣ ಬಿದ್ದು, ಮೋಡದ ಒಂದು ಸಣ್ಣ ತುಂಡು ಕೂಡ ಇಲ್ಲದಂತಾದ ಹಾಗೆ ಅವನ ತತ್ಕಾಲೀನ ಪರಿಸ್ಥಿತಿಯ ದಿಙ್ಮೂಢತೆ ಮಾಯವಾಯಿತು. ಅವನ ನೋಟದಳತೆಯಲ್ಲಿ ಎಲ್ಲಿಯೂ ಸ್ವಲ್ಪವೂ ನೆರಳಿರಲಿಲ್ಲ. ಮೃತ್ಯು ಅವನೆದುರಿಗೆ ಹಲ್ಲುಕಿರಿದು ನಿಂತು ಅಣಕಿಸುತ್ತಿತ್ತು.

ಇಡೀ ಜಿಲ್ಲೆಯ ಭಾಗ್ಯವೇ ಅವನ ಕೈಯೊಳಗಿದ್ದಂತೆ ಇತ್ತು. ಯಾರ ಮುಂದೆಯೂ ಸೆರಗೊಡ್ಡಿ ಬಾಯಿ ತೆರೆಯುವ ಪ್ರಸಂಗವು ಅವನಿಗೆ ಈವರೆಗೆ ಎಂದೂ ಬಂದಿರಲಿಲ್ಲ. ಆದುದರಿಂದ ಅವನು ಯಾರ ಹಂಗೂ ಇಲ್ಲದೆ ನಡೆಯುತ್ತಿದ್ದ. ಈ ಅತ್ಯಾಚಾರಿಯಾದ ಕುಡುಕನನ್ನು ಹಿಡಿದು ಕೊಟ್ಟು ಬಿಟ್ಟರೆ ತನ್ನ ಸೌಭಾಗ್ಯದ ಚರಮಸೀಮೆಗೆ ಮುಟ್ಟಿದಂತೆ ಎಂದು ಅವನಿಗೆನಿಸಿತ್ತು. ಅವನ ಭಾಗ್ಯಶಾಲಿಯಾದ ಕೈಗಳ ಹತ್ತು ಬೆರಳುಗಳ ಸಂದುಗಳೊಳಗಿಂದ ಜಮಿನಾದಾರನ ಸರ್ವನಾಶದ ಚಿತ್ರವೇ ಚಲಿಸುತ್ತಿತ್ತು. ಇಷ್ಟೇ ಅಲ್ಲ, ಆ ಬೊಟ್ಟುಗಳಿಂದ ಹೊಲ ಮನೆ, ಹಣ ಮೊಹರುಗಳ ರಾಶಿಗೆ ರಾಶಿಯೇ ಬಳಬಳ ಸೋರುತ್ತಿರುವಂತೆ ಅವನಿಗೆ ತೋರುತ್ತಿದ್ದಿತು. ಅವನಿಗಿದ್ದ ಸಂದೇಹವೊಂದೇ–ಸಾಹೇಬರನ್ನು ಕರೆದುಕೊಂಡು ಹೋಗುವುದರೊಳಗೇ ಜಮಿನಾದಾರನನ್ನು ಯಾರಾದರೂ ಎಚ್ಚರಿಸುವರೋ ಏನೋ! ಹಾಗಾಗಬಾರದೆಂದು ಅವನು ಸಾಧ್ಯವಾದಷ್ಟೂ ಜತನದಿಂದಿದ್ದ. ತಾನು ಒಗೆದ ಗಾಳ ಹುಸಿಹೋಗುವುದಿಲ್ಲವೆಂದು ಅವನು ಖಂಡಿತವಾಗಿ ನಂಬಿಕೊಂಡಿದ್ದ.

ಆದರೆ ತನ್ನ ಹೊಂಚು ಹಂಚಿಕೆಗಳು ಹೀಗೆ ತನ್ನ ಮೇಲೇ ತಿರುಗಿಯಾವೆಂದು ಅವನು ಯೋಚಿಸಿರಲಿಲ್ಲ. ಇಷ್ಟು ಮಹಾಪ್ರಯತ್ನದಿಂದ

ಕಟ್ಟಿದ ಭದ್ರವಾದ ಕಲ್ಲ ಕಟ್ಟಡವು ಷೋಡಶಿಯ ಕೈಯಿಂದಲೇ ಉರುಳಿ ಬಿದ್ದುದನ್ನು ಕಂಡು ತಾರಾದಾಸನು ಹುಚ್ಚಿದ್ದು ಒದರಾಡತೊಡಗಿದ. ಆಮೇಲೆ ಕೆಲಹೊತ್ತು ಮುಂಗಾಣದವನಾಗಿ ಅವನು ಸ್ತಬ್ಧವಾಗಿ ಕಲ್ಲಿನಂತೆ ನಿಂತಿದ್ದು, ಒಮ್ಮೆಲೆ ಹೃದಯಭೇದಕವಾದ ಚೀತ್ಕಾರದೊಡನೆ ಅಳಲಾರಂಭಿಸಿದ. ನೆರೆದವರೆಲ್ಲರೂ ದಂಗುಬಡೆದು ನಿಂತರು. ಅಳುತ್ತಳುತ್ತ ಪೋಲಿಸ್ ಅಧಿಕಾರಿಯ ಕಾಲಮೇಲೆ ಬಿದ್ದು ಹೊರಳುತ್ತ ಅವನೆಂದ: “ಬಾಬೂ ಮಹಾಶಯಾ, ಇನ್ನು ನನ್ನ ಗತಿಯೇನು? ಈ ಜಮೀದಾರನ ಜನರು ನನ್ನನ್ನು ಜೀವಂತವಾಗಿ ಹುಗಿಯದೆ ಬಿಡರು!”

ಇನ್ಸ್‌ಪೆಕ್ಟರು ಒಳ್ಳೆಯ ಸಭ್ಯ ಮನುಷ್ಯ, ಹಾಗೆಯೆ ಅನುಭವಿ. ಅತ್ಯಂತ ಗೌರವದಿಂದ ತಾರಾದಾಸನನ್ನು ಕೈಹಿಡಿದೆತ್ತಿ ಭರವಸೆಯನ್ನೀಯುತ್ತ ನುಡಿದ: “ಭಯವೇಕೆ ಭಟ್ಟರೇ? ನಿಮ್ಮದು ಸರಿಯಾಗಿಯೇ ಸಾಗುವುದು; ಅದರಲ್ಲಿ ವ್ಯತ್ಯಾಸವಾಗುವುದಿಲ್ಲ. ಮ್ಯಾಜಿಸ್ಟ್ರೇಟರ ಬೆಂಬಲ ನಿಮಗಿದೆ. ನಿಮ್ಮ ಮೇಲೆ ಕೈಯೆತ್ತುವ ಧೈರ್ಯ ಯಾರಿಗೂ ಆಗಲಾರದು”

ಹೀಗೆಂದು ಇನ್ಸ್‌ಪೆಕ್ಟರು ಜೀವಾನಂದನ ಕಡೆಗೊಮ್ಮೆ ಅರ್ಥಪೂರ್ಣ ದೃಷ್ಟಿಯಿಂದ ನೋಡಿದ. ಕಣ್ಣೊರಸಿಕೊಳುತ್ತ ತಾರಾದಾಸನೆಂದ: “ಸಾಹೇಬರು ಸಿಟ್ಟುಸಿಟ್ಟಾಗಿಯೇ ಹೊರಟುಹೋದರು ಬಾಬೂ.”

ಇನ್ಸ್‌ಪೆಕ್ಟರು ಮುಗುಳುನಗೆ ನಕ್ಕು, “ಇಲ್ಲ ಭಟ್ಟರೆ, ಅವರು ಸಿಟ್ಟಾಗಿಲ್ಲ. ಆದರೆ ಇಂದಿನ ಈ ಚೇಷ್ಟೆಯನ್ನು ಅವರು ಸಹಜವಾಗಿ ಮರೆಯಲಾರರು. ಅಲ್ಲದೆ ನಮಗೂ ನಿಷ್ಕಾರಣವಾಗಿ ತೊಂದರೆಯಾಯಿತು. ಪೋಲಿಸ್ ಠಾಣ್ಯವೆಂಬುದಕ್ಕೆ ಮರ್ಯಾದೆ ಇದೆಯಲ್ಲವೆ?” ಎಂದು ಜಮೀದಾರನ ಹಾಸಿಗೆಯ ಕಡೆ ಓರೆಗಣ್ಣಿನಿಂದ ನೋಡಿದ.

ಈ ಸನ್ನೆಯ ಅರ್ಥವು ಏನೇ ಇರಲೊಲ್ಲದೇಕೆ, ಜಮೀದಾರನಿಂದ ಮಾತ್ರ ಯಾವ ಉತ್ತರವೂ ದೊರೆಯಲಿಲ್ಲ. ಕ್ಷಣಕಾಲ ಹಾದಿ ನೋಡಿ ಇನ್ಸ್‌ಪೆಕ್ಟರನೆಂದ: “ನಡೆಯಿರಿನ್ನು ಭಟ್ಟರೆ, ಹೊರಡುವ. ಏನೇ ಆದರೂ ಇಲ್ಲಿಂದ ಹೋಗಬೇಕಲ್ಲವೇ?”

ಸಬ್ ಇನ್ಸ್‌ಪೆಕ್ಟರ್ ತರುಣ. ಅವನು ಮುಸಿನಗೆ ನಕ್ಕು, “ಭಟ್ಟರೊಬ್ಬರೇ ಬರುವವರಿದ್ದಾರೇನು?” ಎಂದು ನುಡಿದ.

ಅವನ ಉದ್ಗಾರಕ್ಕೆ ಎಲ್ಲರೂ ನಗಲಾರಂಭಿಸಿದರು. ಬಾಗಿಲ ಹತ್ತಿರ ನಿಂತಿದ್ದ ಪೇದೆಗಳು ಕೂಡ ನಗುವುದಕ್ಕಾಗಿ ಮುಖ ತಿರುಗಿಸಿದರು; ಮುಖದ ಮೇಲೆ ಮೂಡಿದ ನಗೆಯ ತೆರೆಯನ್ನು ಮರೆಯಿಸುವುದಕ್ಕಾಗಿ ಜಂತೆಯನ್ನು ನೋಡತೊಡಗಿದರು.

ಈ ಕುತ್ಸಿತವಾದ ವ್ಯಂಗ್ಯದಿಂದ ತಾರಾದಾಸನ ಕಣ್ಣುಗಳಲ್ಲಿಯ ಜಲ ಬಿಂದುಗಳು ಕಿಡಿಗಳಾಗಿ ಪರಿಣಮಿಸಿದವು. ಅವನು ಸಿಟ್ಟುಸಿಟ್ಟಿನಿಂದ ಷೋಡ ಶಿಯ ಕಡೆ ನೋಡುತ್ತ ಒದರಿಕೊಂಡ: "ಹೌದು ಹೌದು! ನಾನೊಬ್ಬನೇ ಬರತಕ್ಕವನು! ಪುನಃ ನಾಸಿವಳ ಮೋರೆ ನೋಡುತ್ತೇನೆ, ಪುನಃ ಇವಳನ್ನು ಮನೆಯೊಳಗೆ ಇಟ್ಟುಕೊಳ್ಳುತ್ತೇನೆ ಎಂದು ತಿಳಿದುಕೊಂಡಿದ್ದೀರೇನು?"

ಇನ್ಸ್ಪೆಕ್ಟರ್ ಬಾಬು ನಗುತ್ತ ಹೇಳಿದ: "ಮೋರೆ ನೋಡುವುದಿಲ್ಲ ವಾದರೆ ನೋಡಬೇಡಿರಿ ಭಟ್ಟರೇ, – ಅದಕ್ಕಾಗಿ ಯಾರೂ ನಿಮ್ಮ ಕತ್ತಿನ ಮೇಲೆ ಚೂರಿ ಇಟ್ಟಿಲ್ಲ. ಆದರೆ ಅವಳ ಮನೆ, ಅವಳ ಮಾರು, ಅಲ್ಲಿ ಅವಳನ್ನು ಬರಗೊಡುವುದಿಲ್ಲ ಎನ್ನುತ್ತೀರಲ್ಲ, – ಇನ್ನೊಂದು ಹೊಸ ಕುತ್ತ ವನ್ನು ಮೈಮೇಲೆ ಹಾಕಿಕೊಳ್ಳಬೇಡಿರಿ, ಎಂದರಾಯಿತು."

ತಾರಾದಾಸನಿಗೆ ರೇಗಿತು. ಅವನೆಂದ: "ಯಾರ ಮನೆ? ಯಾರ ಮಾರು? ಮನೆ ಮಾರು ಎಲ್ಲಾ ನನ್ನವು. ಇವಳನ್ನು ಭೈರವಿಯಾಗಿ ಮಾಡಿದ್ದು ನಾನು. ನಾನೇ ಇಂದು ಇವಳನ್ನು ಹೊಡೆದಟ್ಟುತ್ತೇನೆ. ಕೀಲಿಕೈ ಈ ತಾರಾ ಚಕ್ರವರ್ತಿಯ ಕೈಯಲ್ಲಿದೆ—" ಎಂದು ಎದೆಯನ್ನು ತಟ್ಟಿಕೊಂಡು ಮತ್ತೆ ಆರಂಭಿಸಿದ: "ಇವಳಿಗೆಲ್ಲ ಗೊತ್ತಿದೆ, ತನ್ನ ತಾಯಿಯ ಪೂರ್ಣ ಇತಿಹಾಸ—"

"ತಡೆಯಿರಿ ಭಟ್ಟರೆ, ತಡೆಯಿರಿ" ಇನ್ಸ್ಪೆಕ್ಟರ್ ನಡುವೆಯೆ ಅವ ನನ್ನು ತಡೆದ. ಸಿಟ್ಟಿನ ಭರದೊಳಗೆ ಪೋಲಿಸರೆದುರಿಗೆ ಎಲ್ಲವನ್ನೂ ಆಡಿ ಬಿಡಬೇಡಿರಿ. ಅದರಿಂದ ಸಂಕಟದಲ್ಲಿ ಬಿದ್ದೀರಿ" ಎಂದು ಷೋಡಶಿಯ ಕಡೆ ನೋಡಿ ಅವನೆಂದ: "ನೀವು ಬರುತ್ತಿದ್ದರೆ ಸುರಕ್ಷಿತವಾಗಿ ಮನೆಯನ್ನು ಮುಟ್ಟಿಸುತ್ತೇವೆ. ನಡೆಯಿರಿನ್ನು, ತಡ ಬೇಡ."

ಈವರೆಗೂ ಷೋಡಶಿ ಮೋರೆ ಕೆಳಗೆ ಹಾಕಿಕೊಂಡು ಮೌನವಾಗಿ ನಿಂತಿದ್ದಳು. ಈಗ "ಒಲ್ಲೆ" ಎಂದಳು.

ಸಬ್ ಇನ್ಸ್‌ಪೆಕ್ಟರ್ ನಗೆಯನ್ನು ಹತ್ತಿಟ್ಟು, "ಬರಲಿಕ್ಕೆ ಇನ್ನೂ ತಡವೇನೊ?" ಎಂದು ಕೇಳಿದ.

ಷೋಡಶಿ ಅವನ ಕಡೆಗೆ ನೋಡಿದಳಷ್ಟೆ; ಉತ್ತರ ಕೊಟ್ಟಳು ಇನ್ಸ್‌ಪೆಕ್ಟರಿಗೆ: "ನೀವು ಹೋಗಿರಿ. ನನ್ನದಿನ್ನೂ ತಡ."

"ಇನ್ನೂ ತಡವೆ?" ತಾರಾದಾಸನು ಹುಚ್ಚೆದ್ದು ಮಾತನಾಡಿದ: "ಹುಚ್ಚುಮುಂಡೇ, ಈಗಲೇ ನಿನ್ನನ್ನು ಕೊಂದುಹಾಕದಿದ್ದರೆ, ನಾನು ಮನೋಹರ ಚಕ್ರವರ್ತಿಯ ಉತ್ತರಕ್ಕೆ ಹುಟ್ಟಿದವನಲ್ಲವೆಂದೇ ತಿಳಿ!" ಎಂದೆನ್ನುತ್ತ ಅವನು ಷೋಡಶಿಯನ್ನು ಹೊಡೆಯಲು ಏರಿಹೋದ. ಆದರೆ ಇನ್ಸ್‌ಪೆಕ್ಟರ್ ಗದ್ದರಿಸಿದ: "ಹಾಂ, ಹೆಚ್ಚು ಗೊಂದಲ ಹಾಕಿದರೆ ಠಾಣ್ಯಕ್ಕೆ ಹಿಡಿದೊಯ್ಯುವೆವು. ನಡೆಯಿರಿ, ಸುಮ್ಮನೆ ಮನೆಗೆ ನಡೆಯಿರಿ."

ಇನ್ಸ್‌ಪೆಕ್ಟರ್ ಅವನನ್ನು ಹಿಡಿದೆಳೆದುಕೊಂಡು ಹೋಗಲು ಪ್ರಯತ್ನಿಸುತ್ತಿದ್ದ. ತಾರಾದಾಸನು ಅವನ ಮಾತನ್ನು ಗಮನಿಸಲಿಲ್ಲ. ಅವನೊಡನೆ ಹೋಗುತ್ತಿದ್ದಾಗ, ಷೋಡಶಿಯ ತಾಯಿಯ ಬಗ್ಗೆ ಹೊಲ್ಲದ ಸಲ್ಲದ ಸಂಗತಿಗಳನ್ನು ಗಟ್ಟಿಯಾಗಿ ಹೇಳಿಯೇ ಹೇಳಿದ. ತಾನು ಒಮ್ಮೆಲ್ಲೊಮ್ಮೆ ಷೋಡಶಿಯನ್ನು ಕೊಲೆ ಮಾಡುವವನೇ ಎಂದು ಅವನು ಆಣೆಯಿಟ್ಟುಕೊಂಡು ಹೇಳುತ್ತಿದ್ದುದು ದೂರ ಹೋದರೂ ಕೇಳಬರುತ್ತಿತ್ತು.

ಎಲ್ಲ ಪೋಲಿಸರೂ ಹೊರಟು ಹೋದರೋ ಅಥವಾ ಅವರಲ್ಲಿ ಯಾರಾದರೂ ಅಡಗಿಕೊಂಡಿರುವರೋ ಎಂಬುದನ್ನು ಅರಿತುಕೊಳ್ಳುವುದಕ್ಕಾಗಿ ಏಕಕೌಡಿ ಕಳ್ಳ ಹೆಜ್ಜೆಯಿಂದ ಹೊರಗೆ ಹೋದ. ಆಗ ಜೀವಾನಂದನು ಷೋಡಶಿಗೆ ಹತ್ತಿರ ಬರುವಂತೆ ಸೂಚಿಸಿದ. ಅವಳು ಬರಲು, "ಅವರೊಡನೆ ಏಕೆ ಹೋಗಲಿಲ್ಲ?" ಎಂದು ಕ್ಷೀಣ ಸ್ವರದಲ್ಲಿ ಕೇಳಿದ.

"ಅವರ ಜೊತೆಗೇನೂ ನಾನು ಬಂದಿರಲಿಲ್ಲ."

ಸ್ವಲ್ಪ ತಡೆದು ಜೀವಾನಂದನೆಂದ: "ನಿಮ್ಮ ಇಸ್ಟೇಟನ್ನು ಬಿಟ್ಟು ಕೊಡುವ ಕಾಗದ ಪತ್ರಗಳು ಸಿದ್ಧವಾಗಲಿಕ್ಕೆ ನಾಲ್ಕೈದು ದಿನ ಬೇಕು. ಹಣವನ್ನು ಈಗಲೇ ಒಯ್ಯುವೆಯೇನು?"

"ಕೊಡಿರಿ ಹಾಗಾದರೆ!"

ಜೀವಾನಂದನು ಹಾಸಿಗೆಯ ಅಡಿಯಿಂದ ನೋಟುಗಳ ಸಿವುಡನ್ನು

ತೆಗೆದ. ಅವುಗಳನ್ನು ಎಣಿಸುತ್ತಿರುವಾಗ ಷೋಡಶಿಯ ಕಡೆ ಮತ್ತೆ ಮತ್ತೆ ನೋಡುತ್ತ ನಗುನಗುತ್ತ ಅವನೆಂದ: "ನಾನು ಅತಿ ನಿರ್ಲಜ್ಜ ಮನುಷ್ಯ. ಆದರೂ ಈ ಹಣವನ್ನು ನಿನಗೆ ಕೊಡುವಾಗ ನನಗೆ ಹೇಗೆ ಹೇಗೋ ಎನಿಸುತ್ತದೆ."

"ಆದರೆ ಕೊಡಬೇಕೆಂದು ಗೊತ್ತಾಗಿದೆಯಲ್ಲವೆ?" ಷೋಡಶಿ ಶಾಂತವಾಗಿ ನುಡಿದಳು.

ಜೀವಾನಂದನ ಬೆಳ್ಳನೆಯ ಮುಖದಲ್ಲಿ ನಾಚಿಕೆಯ ಕೆಂಪು ಎದ್ದಿತು. 'ಗೊತ್ತಾದದ್ದು ಏನೋ ಇರಲಿ ಷೋಡಶಿ. ನನ್ನನ್ನು ಉಳಿಸುವುದಕ್ಕಾಗಿ ನೀನು ನೋಸಿದ ನಷ್ಟಕ್ಕೆ ದುಡ್ಡಿನ ಪ್ರತಿಫಲವನ್ನು ಕೊಡುತ್ತಿದ್ದೇನಲ್ಲ ಎಂಬ ವಿಚಾರ ಮನಸಿನಲ್ಲಿ ಚುಚ್ಚುವುದು: ಅದಕ್ಕಿಂತ ನಾನು ಸತ್ತಿದ್ದರೇ ಲೇಸಾಗುತ್ತಿತ್ತು ಎಂದೆನಿಸುತ್ತದೆ!" ಎಂದ ಅವನು.

ಷೋಡಶಿ ಅವನ ಮುಖದಲ್ಲಿ ತನ್ನ ದೃಷ್ಟಿಯನ್ನು ನಿಶ್ಚಲವಾಗಿರಿಸಿ ಉತ್ತರವಿತ್ತಳು: "ಆದರೆ ನೀವು ಹೆಂಗುಸರ ಬೆಲೆಯನ್ನು ದುಡ್ಡಿನಿಂದಲೇ ಕಟ್ಟುವವರು! ಇದೇ ನಿಮ್ಮ ಬಿರುದಲ್ಲವೆ?"

ಜೀವಾನಂದನು ಮರುಮಾತನಾಡಲಿಲ್ಲ.

"ಒಳ್ಳೇದು. ನಿಮ್ಮ ಮೊದಲಿನ ವಿಚಾರ ಈಗ ಬದಲಾಗಿದ್ದರೆ ನಿಮ್ಮ ಹಣ ನೀವಿಟ್ಟುಕೊಳ್ಳಿರಿ. ನನಗೇನೂ ಕೊಡಬೇಕಾಗಿಲ್ಲ! — ಆದರೆ ನಿಜವಾಗಿಯೂ ನನ್ನನ್ನೀವರೆಗೂ ಗುರುತಿಸಲಿಲ್ಲವೆ ನೀವು? ಚೆನ್ನಾಗಿ ದಿಟ್ಟಿಸಿ ನೋಡಿರಿ ನನ್ನ ಕಡೆ."

ಜೀವಾನಂದನು ಅವಳನ್ನೇ ನೋಡತೊಡಗಿದ. ಅದೆಷ್ಟೋ ಹೊತ್ತು ಏನೂ ನುಡಿಯಲಿಲ್ಲ. ಕೊನೆಗೆ ಮೆಲ್ಲಮೆಲ್ಲನೆ ಕತ್ತಲ್ಲಾಡಿಸುತ್ತ ಅವನೆಂದ: "ನಿನ್ನ ಗುರುತು ಹತ್ತಿದಂತೆ ನನಗೆನಿಸುತ್ತದೆ. ಚಿಕ್ಕಂದಿನಲ್ಲಿ ನೀನು ಅಲಕಾ ಅಲ್ಲವೆ?"

ಷೋಡಶಿ ನಗಲಿಲ್ಲ. ಅವಳ ಮುಖ ಒಮ್ಮೆಲೆ ಉಜ್ವಲವಾಯಿತು. ಅವಳೆಂದಳು: "ನನ್ನ ಹೆಸರು ಷೋಡಶಿ. ದಶಮಹಾವಿದ್ಯೆಯ ಹೆಸರಿನ ಹೊರತು ಭೈರವಿಗೆ ಬೇರೆ ಹೆಸರಿರುವುದಿಲ್ಲ. — ಅಂತೂ ಅಲಕೆಯ ನೆನಪಾಗುವುದಲ್ಲವೆ ನಿಮಗೆ?"

ಜೀವಾನಂದನು ಯಾವ ಬಗೆಯ ಉತ್ಸುಕತೆಯನ್ನೂ ತೋರಲಿಲ್ಲ. ಅವನೆಂದ: "ಹೌದು ಸ್ವಲ್ಪ ಸ್ವಲ್ಪ ನೆನಪಾಗುತ್ತದೆ. ನಾನು ನಿಮ್ಮಪ್ಪನ ಹೋಟಲಿಗೆ ಬರುತ್ತಿದ್ದಾಗ ನೀನು ಆರೇಳು ವರ್ಷದ ಹುಡುಗಿ. ಈಗ ನನ್ನನ್ನು ಇಷ್ಟು ಸುಲಭವಾಗಿ ಹೇಗೆ ಗುರುತಿಸಿದೆ."

ಅವನ ಧ್ವನಿ, ಆ ಧ್ವನಿಯ ಹಿಂದಡಗಿದ್ದ ಅರ್ಥ ಷೋಡಶಿಗೆ ಹೊಳೆದುದರಿಂದ ಅವಳು ಕೆಲಹೊತ್ತು ಉತ್ತರವೀಯದೆ ಸುಮ್ಮನಿದ್ದಳು. ಕಡೆಗೆ ಅತ್ಯಂತ ಸಹಜವಾಗಿಯೆ ಮಾತನಾಡಿದಳು: "ಅದಕ್ಕೆ ಕಾರಣ ಇದೆ. ಆಗ ಅಲಕಾ ಆರೇಳು ವರ್ಷದವಳಿರಲಿಲ್ಲ, ಒಂಬತ್ತು ಹತ್ತು ವರ್ಷದವಳಿದ್ದಳು. ನನ್ನನ್ನು ನಿಮ್ಮ ವಾಹನವೆಂದು ಅಪ್ಪ ನಗೆಯಾಡುತ್ತಿದ್ದುದು ಜ್ಞಾಪಕದಲ್ಲಿರಬಹುದು ನಿಮಗೆ. ನಿಮ್ಮ ಮೋರೆ ಎಷ್ಟು ವ್ಯತ್ಯಾಸಹೊಂದಿದ್ದರೂ ಎಡಗಣ್ಣಿನ ಕೆಳಗಡೆಯ 'ಗೆಳೆಯ' ಬದಲಾಗಿಲ್ಲ! ಅಲಕೆಯ ಅಪ್ಪನ ನೆನಪುಂಟೇನು?"

"ಹೂಂ, ಇದೇ ಈಗ ತಾರಾದಾಸರು ಅವಳ ಬಗ್ಗೆ ಏನೇನೋ ಬಡಬಡಿಸುತ್ತಿದ್ದನಲ್ಲ, ಅದು ಕೂಡ ಗೊತ್ತಿದೆ! ಇನ್ನೂ ಇದ್ದಾಳೇನು ಆಕೆ?"

"ಇಲ್ಲ; ಒಂಬತ್ತು ಹತ್ತು ವರ್ಷ ಆಯಿತು ತೀರಿಕೊಂಡು. ನಿಮ್ಮ ಮೇಲೆ ಅವಳ ಪ್ರೀತಿಯಿತ್ತು, ಅಲ್ಲವೆ?"

ಜೀವಾನಂದನ ನೆರಿಗೆ ಬಿದ್ದ ಮುಖದಲ್ಲೀಗ ಉದ್ವೇಗದ ಛಾಯೆ ಕಾಣಿಸಿಕೊಂಡಿತು. ಅವನೆಂದ: ಹೌದು. ಒಮ್ಮೆ ಹೀಗೆಯೇ ತೊಡಕಿನಲ್ಲಿ ಸಿಕ್ಕಿದ್ದೆ. ಆಗ ಅವಳಿಂದ ನೂರು ರೂಪಾಯಿ ಕೈಗಡವಾಗಿ ತೆಗೆದುಕೊಂಡಿದ್ದೆ. ಅದನ್ನಿನ್ನೂ ಮುಟ್ಟಿಸಿಲ್ಲವೆಂದು ಕಾಣುತ್ತದೆ."

ಕೂಡಲೆ ಷೋಡಶಿಯ ತುಟಿಗಳಲ್ಲಿ ನಗೆಯ ಮುಗುಳು ಅರಳಲು ನೋಡುತ್ತಿತ್ತು. ಅವಳು ಅದನ್ನು ತಡೆದು ಸಹಜ ಸ್ವರದಲ್ಲಿ ಮಾತನಾಡಿದಳು: "ಅದಕ್ಕಾಗಿ ನೀವು ಸಂಕೋಚಪಟ್ಟುಕೊಳ್ಳಬೇಡಿರಿ. ಅಲಕೆಯ ತಾಯಿ ಆ ಹಣವನ್ನು ನಿಮಗೆ ಕಡವಾಗಿ ಕೊಟ್ಟಿರಲಿಲ್ಲ–ಪರೋಪಕಾರವೆಂದು ಕೊಟ್ಟಿದ್ದಳು."

ಒಂದು ನಿಮಿಷ ಸುಮ್ಮನಿದ್ದು ಷೋಡಶಿ ಮತ್ತೆಂದಳು: "ಅಕಸ್ಮಾತ್

ವೈಭವ ದೊರೆತಿದೆ ಈಗ. ಈಗ ಆ ದುಃಖದ ವಿಷಯವನ್ನು ಸ್ಮರಿಸದಿರುವುದೇ ಒಳ್ಳೇದು. ಇಂದಿನ ಬೆಲೆಯಿಂದ ಅಂದಿನ ನೂರು ರೂಪಾಯಿಗಳ ಲೆಕ್ಕ ಮಾಡುವುದು ಕಠಿಣವೇ ಆದೀತು. ಆದರೆ ಸ್ವಲ್ಪ ಹಿಂದೆ ನೋಡಿದರೆ, ಹಳೆಯ ಸಂಗತಿಗಳನ್ನು ನೆನಸಿಕೊಂಡರೆ, ಆ ದಿವಸ ಮತ್ತು ಈ ದಿವಸ ಎರಡೂ ಅಷ್ಟೇ ಆಪತ್ತಿನವೆಂದು ನೀವು ಒಪ್ಪಬೇಕಾಗುವುದೆಂದು ನನಗೆನಿಸುತ್ತದೆ. ಇಂದು ಷೋಡಶಿಯ ಮರಣ ನಿಮಗೆ ಭಾರವಾಗಿ ತೋರುತ್ತಿದೆ, ಆದರೆ ಅಲಕೆಯ ಕುಲಟೆಯಾದ ತಾಯಿಯ ಅಂದಿನ ಋಣ ಕೂಡ ಕಡಮೆಯದಾಗಿರಲಿಲ್ಲ!"

ಈ ಮಾತು ಜೀವಾನಂದನಿಗೆ ತಗುಲಿತು. "ಇಷ್ಟು ಹಣದ ಸಲುವಾಗಿ ಅವಳು ತನ್ನ ಮಗಳನ್ನು ಮಾಡಿಕೊಳ್ಳಬೇಕೆಂದು ಬಲವಂತ ಪಡಿಸದಿದ್ದರೆ ಆ ಋಣ ಮಹತ್ವದ್ದೆಂದು ನಾನು ಭಾವಿಸುತ್ತಿದ್ದೆ" ಎಂದು ಅವನೆಂದ.

"ಮದುವೆಗಾಗಿ ಅವಳೇನೂ ಒತ್ತಾಯಪಡಿಸಲಿಲ್ಲ. ನೀವಾಗಿಯೆ ಸಿದ್ಧರಾಗಿದ್ದಿರಿ. ಇರಲಿ ಬಿಡಿರಿ, ಅದೆಲ್ಲ ರಾಡಿರಗಳೆ. ಇಂದು ಇಷ್ಟು ಹಣ ತೀರ ಕ್ಷುಲ್ಲಕವೆನಿಸುವುದೇನೋ ನಿಜ. ಆದರೆ ಅಲಕೆಯ ತಾಯಿಯ ಇಡೀ ಜೀವನದ ಬಂಡವಾಳ ಅದು ಅಷ್ಟೆ. ಬೇರೆ ಉಪಾಯವನ್ನೇನೂ ಕಾಣದೆ ಅವಳು ಆ ಹಣವನ್ನೂ ಮಗಳನ್ನೂ ನಿಮ್ಮ ನೆರಗಿಗೆ ಕಟ್ಟಿದಳು. ನೀವು ಲಗ್ನವನ್ನಂತೂ ಮಾಡಿಕೊಳ್ಳಲಿಲ್ಲ. ಕೇವಲ ನಾಟಕ ಮಾಡಿದಿರಿ. ಕನ್ಯಾದಾನವಾದ ಕೂಡಲೇ ಓಡಿಬಂದಿರಿ. ಆ ಮೇಲೆ ನಿನ್ನೆಯೇ ಮೊದಲ ಭೆಟ್ಟಿ."

"ಆದರೆ ಆ ಮೇಲೆ ನಿನ್ನ ಸತ್ಯವಾದ ಮದುವೆಯಾಯಿತೆಂದು ಕೇಳಿದೆ."

ಇದಕ್ಕೆ ಷೋಡಶಿಯು ಹಿಂಜರಿಯಲಿಲ್ಲ. ಅದೇ ಶಾಂತ ಗಂಭೀರ ಸ್ವರದಲ್ಲಿ ಅವಳು ಪ್ರತಿಪಾದಿಸಿದಳು: "ಎಂದರೆ ಬೇರೊಬ್ಬರೊಡನೆಯೆ? ಅದರಲ್ಲಿ ಆ ಹುಡುಗಿಯದೇನು ತಪ್ಪು? ಅವಳಿಗೆ ಏನು ಮಾಡುವುದು ಸಾಧ್ಯವಿತ್ತು? ಅದೊಂದು ದೈವ ವಿಡಂಬನೆಯನ್ನು ಅವಳು ಅನುಭವಿಸಿದಳು—ಆದರೆ ಆ ವಿಷಯ ನಿಮಗೇನೂ ಸಂಬಂಧವಿಲ್ಲ."

ಜೀವಾನಂದನು ಕುಂಠಿತನಾಗಿ ನುಡಿದ: "ಷೋಡಶೀ, ನೀನಾಗ ಸಣ್ಣ ಹುಡುಗಿ. ಎಷ್ಟೋ ವಿಷಯಗಳು ನಿನಗೆ ಚನ್ನಾಗಿ ತಿಳಿದಿರಲಾರವು.

ನಿಮ್ಮಮ್ಮ ಇದ್ದಿದ್ದರೆ ಏನೆಂಬುದನ್ನು ಹೇಳುತ್ತಿದ್ದಳು. ನಾನು ನಿಮ್ಮ ತಂದೆಯನ್ನಂತೂ ಈವೊತ್ತು ನೋಡಿದ್ದೇ ನೋಡಿದ್ದು. ಕನ್ಯಾದಾನದ ಕಾಲದಲ್ಲಿ ಆತನ ಹೆಸರು ಮಾತ್ರ ಕೇಳಿದ್ದೆ. ಆದರೆ ಇವನೇ ಈ ತಾರಾದಾಸ, ಇವಳೇ ಎಂದರೆ ನೀನೇ ಅಲಕಾ ಎಂದು ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ–"

ಅವನನ್ನು ನಡುವೆಯೆ ತಡೆದು ಷೋಡಶಿ ಹೇಳಿದಳು: "ಇನ್ನು ಮೇಲೆಯೂ ಆ ವಿಷಯವನ್ನು ಲೆಕ್ಕಕ್ಕೆ ಹಿಡಿಯುವ ಅಗತ್ಯವಿಲ್ಲ."

"ಅಗತ್ಯವಿರಲಿಕ್ಕಿಲ್ಲ, ನಿಜ. ಆದರೆ ನಿಮ್ಮ ತಂದೆಯ ಕೈಯಿಂದ ನಿನ್ನನ್ನು ಉಳಿಸಿಕೊಳ್ಳುವುದಕ್ಕಾಗಿ ಈ ಕಾರಸ್ಥಾನವನ್ನು ಅವಳು ಹೇಗೆ ಹೂಡಿದ್ದಳೆಂಬುದು ಅವಳಿಗೇ ಗೊತ್ತಿತ್ತು. ಅದಕ್ಕಾಗಿಯೇ ಅವಳು—"

"ಮದುವೆಯ ಆಟ ಹೂಡಿದ್ದಳು ಎನ್ನುವಿರಲ್ಲವೆ? ಇರಬಹುದು. ಅಲಕೆಯ ತಾಯಿ ಈಗ ಬದುಕಿಲ್ಲ. ಅಲಕೆ ನಾನೇಯೋ ಮತ್ತೆ ಬೇರೆಯೋ ಎಂದು ನೀವು ಕೆದಕಬೇಕಾದ ಅಗತ್ಯವೇನೂ ಇಲ್ಲ. ಆದರೆ ನಾನೀಗ ಅವರೊಂದಿಗೆ ಏಕೆ ಹೋಗಲಿಲ್ಲ, ಸ್ವಂತದ ಸರ್ವನಾಶ ಮಾಡಿಕೊಳ್ಳುವುದರಲ್ಲಿ ಏಕೆ ಬಾಕಿ ಉಳಿಸಲಿಲ್ಲ ಎಂಬ ಸಂಗತಿಯನ್ನು ನಿಮಗೆ ತಿಳಿಸಬೇಕಾಗಿದೆ. ನನಗೆ ಓದು-ಬರೆ ಬರುವುದೋ ಇಲ್ಲವೋ ಎಂಬ ಬಗ್ಗೆ ನಿನ್ನೆ ನಿಮಗೆ ಸಂಶಯ ಬಂದಿತು. ನಿಮ್ಮ ಏಕಕೌಡಿಗಷ್ಟೇ ಓದಲಿಕ್ಕೆ ಬರೆಯಲಿಕ್ಕೆ ಬರುವುದೆಂತಲ್ಲ - ನನ್ನ ಗುರು ಕೈ ಬಿಗಿಹಿಡಿದು ದಾನಮಾಡುತ್ತಿರಲಿಲ್ಲ. ಅದಕ್ಕಾಗಿ ಈವೊತ್ತು ಆತನ ಪಾದದಲ್ಲಿ ಸರ್ವಸ್ವವನ್ನು ಬಲಿಗೊಡುವುದು ನನಗೆ ಸಾಧಿಸಲಿಲ್ಲ."

ಕೊಂಚ ಹೊತ್ತು ಜೀವಾನಂದನು ಮೌನವಾಗಿ ತಲೆ ತಗ್ಗಿಸಿಕೊಂಡು ಕುಳಿತಿದ್ದ. ಬಳಿಕ ಮೆಲ್ಲಗೆ ಮುಖವೆತ್ತಿ ಅವನೆಂದ: "ಇಲ್ಲಿ ಕೇಳು–ಸತ್ಯ ಸಂಗತಿಯನ್ನು ನೀನು ಒಂದು ವೇಳೆ ಹೇಳಿದೆಯಾದರೆ—"

"ಸತ್ಯ ಸಂಗತಿ ಎಂಥಾದ್ದು?" ಷೋಡಶಿ ಮಧ್ಯದಲ್ಲಿಯೇ ನುಡಿದಳು: "ಮದುವೆಯ ವಿಷಯವೊ? ಅದಂತೂ ಪೂರಾ ನಟನೆ! ಲಗ್ನವೆಲ್ಲಿ ಆಗಿತ್ತಾಗ? ಅಲ್ಲದೆ ನೋಡಿರಿ, ಅದೆಲ್ಲ ಕಂತ್ರಾಟ ಅಲಕೆಗೆ ಸಂಬಂಧಿಸಿದ್ದು, ನನಗಲ್ಲ. ನಾನು ರಾತ್ರಿಯೆಲ್ಲಾ ಇಲ್ಲಿಯೇ ಇದ್ದು, ಒಂದೇ ಸವನೆ ಮಾತಾಡುತ್ತ ಕುಳಿತರೂ ನನಗೊದಗಿದ ನಷ್ಟ ಬೇರೆ ತುಂಬಿ ಬರುವಂತಿಲ್ಲ.

ಅದಕ್ಕಾಗಿ ನಾನು ಚಿಂತಿಸುವುದಿಲ್ಲ, ನನ್ನ ವಿಷಯದಲ್ಲಿ ನನಗೆ ಯಾವ ಚಿಂತೆಯೂ ಇಲ್ಲ; ಚಿಂತೆ ಇರುವುದು ನಿಮ್ಮ ಬಗ್ಗೆ. ನೀವು ಬಲು ಸಾಹಸಿಗರು, ನಿಮಗೆ ನಿಮ್ಮ ಜೀವದಂಜಿಕೆಯೂ ಇಲ್ಲ ಎಂದು ನನಗೆನಿಸಿತ್ತು. ಅದು ತಪ್ಪು ತಿಳಿವಳಿಕೆಯೆಂದು ಈಗ ಗೊತ್ತಾಯಿತು. ನೀವು ನಿಮ್ಮ ಆತ್ಮರಕ್ಷಣೆಗಾಗಿ ನಿರಪರಾಧಿಯಾದ ಹೆಂಗುಸಿನ ಕಳಂಕದ ಸಹಾಯವನ್ನು ಪಡೆದಿರಿ. ಇಷ್ಟೇ ಅಲ್ಲ, ಹಿಂದೊಂದು ದಿನ ಆತ್ಮರಕ್ಷಣೆಗಾಗಿ ಅನಾಥ ಹುಡುಗಿಯನ್ನು ಅಡವಿಪಾಲು ಮಾಡಿ ಓಡಿಬಂದಿರಿ, – ಅವಳ ಪರಿಚಯವನ್ನು ತೋರಿಸಿಕೊಳ್ಳುವ ಧೈರ್ಯವೂ ನಿಮಗಾಗಲಿಲ್ಲ."

ಜೀವಾನಂದನು ತುಸ ಹೊತ್ತು ನೀರವವಾಗಿ ಕುಳಿತಿದ್ದ. ಆಮೇಲೆ ಒಮ್ಮೆಲೆ ಆವನುಸುರಿದ: "ಷೋಡಶಿ, ನಾನು ಅತ್ಯಂತ ಅಧಃಪತಿತ; ಸದ್ಗೃಹಸ್ಥರ ಕುಲವಧುಗಳ ಬಗ್ಗೆ ಮಾತನಾಡಿದರೆ ನೀನು ಮನಸಿನೊಳಗೆ ನಕ್ಕೀ. ಆದರೆ ಅಂದು ನಾನು ಅಲಕೆಯನ್ನು ಮಾಡಿಕೊಂಡಿದ್ದರೆ, ಬೀಜಗಾವದ ಜಮೀದಾರ ಮನೆತನದ ಕುಲವಧುವೆಂದು ಅವಳನ್ನು ಸಮಾಜದ ತಲೆಯ ಮೇಲೆ ಹೇರಿದ್ದರೆ ಸರಿಯಾಗುತ್ತಿತ್ತೆ?"

ನಿಸ್ಸಂಕೋಚವಾಗಿ ಷೋಡಶಿ ಉತ್ತರವಿತ್ತಳು: "ಅದು ನನಗೆ ಅಷ್ಟು ತಿಳಿಯುವುದಿಲ್ಲ. ಆದರದು ನಿಜ ತಾನೆ? ಸತ್ಯ ಮಾತಾಡಿದಂತೆ ಆಗುತ್ತಿತ್ತಲ್ಲವೆ? ಯಾವಳ ದುರ್ದೈವವನ್ನು ಅರಿತೂ ಅರಿತೂ ನೀವು ಸ್ವೀಕರಿಸಿದ್ದಿರೋ, ಸ್ವೀಕರಿಸುವಾಗ ನಿಮಗೇನೂ ಎನಿಸಿರಲಿಲ್ಲವೋ ಅವಳನ್ನು ಹಾಗೆ ಬಿಟ್ಟು ಓಡಿ ಬರದಿದ್ದರೆ, ನಿಮಗೆ ಇಂಥ ದೊಡ್ಡ ಲಾಂಛನ ತಗಲುತ್ತಿರಲಿಲ್ಲ; ಇಂಥ ಅಧೋಗತಿಯಿಂದ ನಿಮ್ಮನ್ನವಳು ರಕ್ಷಿಸುತ್ತಿದ್ದಳು. ಅದನ್ನು ನಾನಿಂದು ಸುಮ್ಮನೆ ಹೇಳುತ್ತಿದ್ದೇನೆ ಅಷ್ಟೆ. ಈಗ ಆ ಮಾತು ನಿಮ್ಮ ಮುಂದೆ ಆಡುವುದರಲ್ಲಿ ಏನರ್ಥವಿದೆ? ನಾನಿನ್ನು ಹೊರಡುತ್ತೇನೆ. ನನಗೆ ಏನಾದರೂ ಕೊಡಲು ಪ್ರಯತ್ನಿಸಿ ನನ್ನನ್ನು ಇನ್ನಷ್ಟು ಅವಮಾನಿಸಬೇಡಿರಿ." ಜೀವಾನಂದನು ಏನೂ ಮಾತನಾಡಲಿಲ್ಲ. ಬಾಗಿಲಲ್ಲಿ ಏಕಕೌಡಿ ನಿಂತಿರುವುದನ್ನು ನೋಡಿ ಕಳವಳಗೊಂಡು ಅವನೆಂದ: "ಇಲ್ಲಿ ಯಾರಾದರೂ ಡಾಕ್ಟರಿರುವರೇನು, ಏಕಕೌಡಿ? ಇದ್ದರೆ ಕರೆದುಕೊಂಡು ಬರುವಿರಾ? ಅವರು ಬೇಡಿದ ಫೀ ಕೊಡುತ್ತೇನೆ."

ಷೋಡಶಿ ಬೆಚ್ಚಿಬಿದ್ದಳು. ಕ್ರೋಧ ಉದ್ವೇಗಗಳ ಭರದಲ್ಲಿ ಅವಳ ದೃಷ್ಟಿ ಈವರೆಗೆ ವಿರುದ್ಧ ದಿಕ್ಕಿನಲ್ಲಿ ನಟ್ಟಿತ್ತು.

"ಡಾಕ್ಟರು ಇದ್ದಾರೆ ಧನಿಯರೆ. ನಮ್ಮ ವಲ್ಲಭ ಡಾಕ್ಟರರ ಕೈಗುಣ ಬಹಳ ಒಳ್ಳೇದು" ಎಂದು ನುಡಿದು ಏಕಕೌಡಿ ಅನುಮೋದನೆಗಾಗಿ ಷೋಡಶಿಯ ಕಡೆ ನೋಡಿದ. ಅವಳು ಏನೂ ಹೇಳಲಿಲ್ಲ.

"ಅವರನ್ನು ಕರೆಯಲಿಕ್ಕೆ ಯಾರನ್ನಾದರೂ ಕಳಿಸಿರಿ. ಒಂದು ಮಿನಿಟೂ ತಡಮಾಡಬೇಡಿರಿ. ಬರೀ ಸೀನೆಗಳು ಬಿದ್ದಿವೆ, ಯಾರಿಗಾದರೂ ಹೇಳಿ ಬಿಸಿನೀರು ತರಿಸಿರಿ. ಎಲ್ಲಿ ಹೋದರು ಇವರೆಲ್ಲಾ ?"

"ಅದನ್ನೇ ಹೇಳಲಿಕ್ಕೆ ಬಂದೆ ಧನಿಯರೇ – ಪೋಲಿಸರಿಗಂಜಿ ಯಾರು ಎಲ್ಲಿ ಓಡಿಹೋಗಿರುವರೋ ಪತ್ತೆಯೇ ಇಲ್ಲ" ಏಕಕೌಡಿ ಹೇಳಿದ.

"ಯಾರೂ ಇಲ್ಲವೆ? ಎಲ್ಲರೂ ಓಡಿದರೆ?"

"ಎಲ್ಲರೂ ಎಲ್ಲರೂ ; ನೊಣ ಕೂಡ ಇಲ್ಲ. ಅವರೇನು ಮನುಷ್ಯರೇ ಧನಿಯರೆ? ನಾನಂತೂ— "

"ಹಾಗಾದರೆ ಡಾಕ್ಟರನ್ನು ಕರೆಯಲಿಕ್ಕೆ ಹೋಗುವುದಿಲ್ಲವೆ, ಏಕ ಕೌಡಿ?" ಜೀವಾನಂದನು ವ್ಯಾಕುಲತೆಯಿಂದ ಕೇಳಿದ.

ಏಕಕೌಡಿಗೆ ಮನಸಿನೊಳಗೆ ನಾಚಿಕೆಯೆನಿಸಿತು. ಅವನೆಂದ: "ಹೀಗೇಕೆನ್ನುವಿರಿ ಧನಿಯರೆ? ನಾನೇ ಹೋಗುತ್ತೇನೆ. ಡಾಕ್ಟರು ಮನೆಯಲ್ಲಿಯೇ ಇದ್ದಿದ್ದಾರೆಂದು ಕಾಣುತ್ತದೆ. ಆದರೆ ನೀರು ಕಾಸಲಿಕ್ಕೆ ಹೋದೆನೆಂದರೆ ತಡವಾಗುವುದು. ಅಲ್ಲದೆ, ಇಲ್ಲಿ ಧನಿಯರೊಬ್ಬರೇ— "

ಅವನ ಮಾತು ಪೂರಯಿಸಲಿಲ್ಲ. ಜೀವಾನಂದನ ಮುಖವು ನೋವಿನಿಂದ ವಿವರ್ಣವಾಯಿತು. ಹೊಟ್ಟೆಯೊಳಗಿನ ಶೂಲೆಯನ್ನು ಶಮನ ಮಾಡುವುದಕ್ಕಾಗಿ ಡಬ್ಬ ಬಿದ್ದುಕೊಂಡು ನರಳುತ್ತ, "ಉಃ, ಸಾಕಪ್ಪ, ಇದನ್ನಿನ್ನು ಸಹಿಸಲಾರೆ!" ಎಂದ.

ಈ ಪ್ರಸಂಗವು ಷೋಡಶಿಯ ಮನಸಿನ ಮೇಲೆ ಪರಿಣಮಿಸಿತು. ಇಂತಹ ದುರ್ದಾಂತ ದುರ್ಜನನ ಬಾಯಿಂದ ಇಂತಹ ದೈನ್ಯವು ಹೊರಬಿದ್ದೀತೆಂದು ಅವಳಿಗೆನಿಸಿರಲಿಲ್ಲ. ಮೂಲತಃ ಮನುಷ್ಯನು ಎಷ್ಟು ದುರ್ಬಲನಿರುತ್ತಾನೆ, ಎಷ್ಟು ಅಸಹಾಯನಿರುತ್ತಾನೆ, ದುಃಖಯಾತನೆಗಳನ್ನು ಅನು

ಭವಿಸುವಾಗ ಇವರು ತನ್ನವರು ಇವರು ಹೆರವರು ಎಂಬ ಭಾವನೆ ಮನುಷ್ಯನಲ್ಲಿ ಹೇಗೆ ಉಂಟಾಗುತ್ತದೆ ಎಂಬುದು ಯೋಚನೆಯಲ್ಲಿ ಬರುತ್ತಲೇ ಅವಳ ಕಣ್ಣುಗಳಲ್ಲಿ ನೀರು ಬಂದಿತು.

ಅವಳು ತನ್ನ ಮನವನ್ನು ಸಾವರಿಸಿಕೊಂಡು ಹತಾಶನಾದ ಏಕಕೌಡಿಯ ಕಡೆ ನೋಡಿ ಹೇಳಿದಳು: "ನೀವು ಹೋಗಿ ವಲ್ಲಭ ಡಾಕ್ಟರನ್ನು ಕರೆದುಕೊಂಡು ಬನ್ರಿ. ಇಲ್ಲಿಯ ಕೆಲಸ ನಾನು ನೋಡಿಕೊಳ್ಳುತ್ತೇನೆ. ದಾರಿಯಲ್ಲಿ ಯಾರಾದರೂ ಕಂಡರೆ ಕಳಿಸಿಕೊಡಿರಿ; ಈಗಿಲ್ಲಿ ಪೋಲಿಸರ ಭಯವೇನೂ ಇಲ್ಲವೆಂದು ಅವರಿಗೆ ಹೇಳಿರಿ."

ಏಕಕೌಡಿ ಆಶ್ಚರ್ಯಚಕಿತನಾದ. ಹೆಚ್ಚಾಗಿ ಆನಂದಿತನಾದ. "ಎಲ್ಲಿದ್ದಲ್ಲಿಂದ ಡಾಕ್ಟರನ್ನು ಕರೆದುಕೊಂಡು ಬರುತ್ತೇನೆ. ಅಡಿಗೆಮನೆ ತೋರಿಸಲೇನು?" ಎಂದ.

"ಬೇಡ ನಾನು ಹುಡುಕಿಕೊಳ್ಳುತ್ತೇನೆ. ಮೊದಲು ಡಾಕ್ಟರನ್ನು ಕರೆದುಕೊಂಡು ಬನ್ರಿ. ಸುಮ್ಮನೆ ವೇಳೆ ಕಳೆಯಬೇಡಿರಿ."

"ಹೂಂ ಬಾಯಿಯವರೆ, ಇಕಾ ಹೊರಟೆ" ಎಂದು ಏಕಕೌಡಿ ತೀವ್ರಗತಿಯಿಂದ ಹೊರಟುಹೋದ.

## ೬

ಷೋಡಶಿ ನೀರು ಕಾಯಿಸಿ ಬಾಟಲಿ ತುಂಬಿಕೊಂಡು ಬಂದಾಗ ಇನ್ನೂ ಯಾರೂ ಬಂದಿರಲಿಲ್ಲ. ಜೀವಾನಂದನು ಹಾಗೆಯೆ ಡಬ್ಬಾಗಿ ಮಲಗಿಕೊಂಡಿದ್ದ. ಅವಳ ಸುಳಿವು ತಿಳಿದು ಮುಖವೆತ್ತಿ ನೋಡಿ ಅವನೆಂದ: "ನೀನೆ? ಡಾಕ್ಟರ್ ಬರಲಿಲ್ಲವೆ?"

"ಅವರು ಬರಲಿಕ್ಕಿನ್ನೂ ತಡವಾದೀತು" ಎಂದೆನ್ನುತ್ತ ಅವಳು ಎರಡು ಬಾಟಲಿಗಳನ್ನೂ ಹಾಸಿಗೆಯ ಮಗ್ಗುಲಲ್ಲಿಟ್ಟಳು.

"ಇನ್ನೂ ತಡವೆ? ಅವರ ಮನೆ ಎಷ್ಟು ದೂರ ಗೊತ್ತಿದೆಯೆ?"

"ಗೊತ್ತಿದೆ. ಆದರೆ ಹದಿನೈದೇ ನಿಮಿಷಗಳಲ್ಲಿ ಬರಲಿಕ್ಕಾಗಬಹುದೇ ಅವರಿಗೆ?"

ಜೀವಾನಂದನು ಉಸಿರ್ಗರೆದ. "ಈಗ ಒಟ್ಟು ಹದಿನೈದೇ ನಿಮಿಷ ಆಯಿತೆ? ಏಕಕಾಡಿ ಹೋಗಿ ಎರಡು ಮೂರು ಗಂಟೆ ಹೊತ್ತಾಯಿತೆಂದು ನನಗೆನಿಸಿತ್ತು. ಇನ್ನು ಅಂಜಿ ಅವನೂ ಬರುವುದಿಲ್ಲ, ಅಲಕಾ" ಎಂದು ನುಡಿದು ಆಪನು ಮೌನ ತಾಳಿ ಮೊದಲಿನಂತೆ ಒರಗಿದ. ಪರಮಾವಧಿಗೆ ಮುಟ್ಟಿದ ವ್ಯಾಕುಲತೆ ಅವನ ವಸಿಯುಲ್ಲಿಯಂತೆ ದೃಷ್ಟಿಯಲ್ಲಿಯೂ ಹೊಮ್ಮುತ್ತಿತ್ತು.

ಕ್ಷಣಕಾಲ ಸುಮ್ಮನಿದ್ದು ಒಳ್ಳೇ ಪ್ರೇಮಲ ಸ್ವರದಲ್ಲಿ ಷೋಡಶಿ ಯೆಂದಳು: "ಡಾಕ್ಟರು ಈಗ ಬರುತ್ತಾರೆ. ಅಲ್ಲಿಯ ತನಕ ಬಿಸಿನೀರಿನ ಸೀಸೆ ಎಳೆದುಕೊಳ್ಳಿರಲ್ಲ."

ಜೀವಾನಂದನು ಬಿದ್ದುಕೊಂಡಿದ್ದಂತೆಯೇ ಉತ್ತರವಿತ್ತ: "ಬೇಡ, ಇರಲಿ ಬಿಡು. ಅದರಿಂದೇನೂ ಆಗುವುದಿಲ್ಲ. ತ್ರಾಸ ಮಾತ್ರ ಆಗುವುದು."

ಷೋಡಶಿ ಮರುಮಾತನಾಡಲಿಲ್ಲ. ನಿರುಪಾಯನಾದ ರೋಗಗ್ರಸ್ತನ ಬಾಯಲ್ಲಿ, ತನ್ನ ಚಿಕ್ಕಂದಿನ ಹೆಸರನ್ನು ಇಷ್ಟು ವರುಷಗಳ ತರುವಾಯ ಮೊಟ್ಟ ಮೊದಲು ಕೇಳಿದುದರಿಂದ ಅದು ಅವಳ ಕಿವಿಯಲ್ಲಿ ಗುಣುಗುಣಿಸ ಲಾರಂಭಿಸಿತು. ಆ ಹೆಸರಿನ ಮೂಲಕ ಅಜ್ಞಾತವಾದ ಯಾವ ಗುಟ್ಟನ್ನೋ ರಟ್ಟುಮಾಡುವ ಪ್ರಯತ್ನ ನಡೆದಿರುವಂತೆ ಅವಳಿಗೆ ಭಾಸವಾಯಿತು.

ಆ ವಿಚಾರದಲ್ಲಿಯೇ ಮುಳುಗಿ ಮೈ ಮರೆತು ಅವಳು ನಿಂತಿದ್ದಳು. ಜೀವಾನಂದನ ಕರೆಗೆ ಎಚ್ಚತ್ತಳು.

"ಅಲಕಾ!"

ಆ ಹೆಸರನ್ನು ಉಪೇಕ್ಷಿಸುವುದು ಅವಳಿಗಸಾಧ್ಯವಾಯಿತು. "ಧನಿ ಯರೇ" ಎಂದು ಮಾರ್ನುಡಿದಳು.

"ಇನ್ನೂ ತಡವಿದೆಯೆ? ಅವರು ಬರುವುದೇ ಇಲ್ಲವೆಂದು ನನಗೆನಿಸು ತ್ತಿದೆ; ಅಥವಾ ಮತ್ತೆಲಿಯೋ ಹೋಗಿದ್ದಾರೆ."

"ನನಗೆ ಖಂಡಿತ ಗೊತ್ತಿದೆ – ಅವರು ಬರುತ್ತಾರೆ. ಎಲ್ಲಿಯೂ ಹೋಗಿರಲಾರರು."

"ಇನ್ನೂ ಯಾವ ಆಳೂ ಬರಲಿಲ್ಲವೇ?"

ಮತ್ತೆ ಕೊಂಚ ಸಮಯ ಸುಮ್ಮನಿದ್ದು ಜೀವಾನಂದನೆಂದ:

"ಯಾರೂ ಬರುವುದಿಲ್ಲವೇನೋ! ಏಕಕೌಡಿಯೂ ನೆವ ತೆಗೆದು ಓಡಿ ಹೋದನೋ ಏನೋ!"

ಷೋಡಶಿ ಮಾತನಾಡಲಿಲ್ಲ.

ತುಟಿ ಕಚ್ಚಿಕೊಂಡು ವ್ಯಥೆಯನ್ನು ಕಷ್ಟದಿಂದ ಸಹಿಸಿಕೊಳ್ಳುತ್ತ ಕೆಲ ಹೊತ್ತಿನ ಮೇಲೆ ಜೀವಾನಂದನೆಂದ: "ಎಲ್ಲರೂ ಹೋದರು, ಅವರು ಹೋಗಬಲ್ಲರು; ನೀನು ಮಾತ್ರ ಹೋಗಲಾರೆ."

"ಏಕೆ?"

"ನಾನಿನ್ನು ಬದುಕುವುದಿಲ್ಲವೆಂದು ನನಗೆನಿಸುತ್ತದೆ. ಉಸಿರಾಡಿಸು ವುದೂ ಕಷ್ಟಕ್ಕಿಟ್ಟುಕೊಂಡಿದೆ. ಜಗತ್ತಿನೊಳಗಿನ ಗಾಳಿಯೇ ತೀರಿಹೋಗಿರು ವಂತೆ ನನಗೆನಿಸುತ್ತಿದೆ."

"ಬಹಳ ತ್ರಾಸವಾಗುತ್ತಿದೆಯೇನು?"

"ಹುಂ. ಅಲಕಾ, ನನ್ನನ್ನು ಕ್ಷಮಿಸು."

ಷೋಡಶಿ ಮೌನವಾಗಿದ್ದಳು. ಕೆಲಹೊತ್ತು ತಡೆದು ಜೀವಾನಂದನು ಮಾತನಾಡಿದ: "ನಾನು ದೇವರು ಧರ್ಮ ಮನ್ನಿಸುವುದಿಲ್ಲ, ಅದರ ಅಗತ್ಯವೇ ಕಾಣುವುದಿಲ್ಲ. ಆದರೆ ನನ್ನ ಮನಸ್ಸನ್ನು ಪರಿಶೋಧಿಸಿಕೊಂಡೆ. ಈ ಜನ್ಮದಲ್ಲಿ ನಾನು ಅನೇಕ ಪಾಪಗಳನ್ನು ಮಾಡಿದೆ, ಅವುಗಳಿಗೆ ಮೊದ ಲಿಲ್ಲ, ಕೊನೆಯಿಲ್ಲ. ಈಗ ವಿಚಾರ ಮಾಡುತ್ತಿರುವಾಗ, ಈ ಎಲ್ಲ ಹೊರೆ ಯನ್ನು ಹೊತ್ತುಕೊಂಡೇ ಹೋಗಬೇಕಾಗುವುದೆಂದು ಎನಿಸತೊಡಗಿದೆ—"

ಷೋಡಶಿ ಈಗಲೂ ಮೌನವಾಗಿಯೇ ನಿಂತಿದ್ದಳು.

"ಮನುಷ್ಯನೇನೂ ಅಮರನಲ್ಲ. ಮೃತ್ಯುವಿನ ವಯಸ್ಸನ್ನು ಯಾರೂ ಅಳೆದು ಹೇಳಲಾರರು. ಆದರೆ ಈ ಯಾತನೆಯನ್ನೇನೂ ನಾನು ಸೈರಿಸಿ ಕೊಳ್ಳಲಾರೆ. ಉಃ, ಅಯ್ಯಯ್ಯಪ್ಪ!" ಮಾತನಾಡುತ್ತಿದ್ದಂತೆ ಅಸಹ್ಯ ವೇದನೆಯಿಂದ ಜೀವಾನಂದನ ಮೈ ಬಿಲ್ಲಾಯಿತು.

ಷೋಡಶಿ ದಿಟ್ಟಿಸಿದಳು. ಬರಿ ಮೈಮೇಲಲ್ಲ, ಹಣೆಯ ಮೇಲೂ ಬೆಮರಿನ ದೊಡ್ಡ ದೊಡ್ಡ ಹನಿಗಳು ಕಾಣುತ್ತಿದ್ದವು. ಮೋರೆ ಸೊಟ್ಟಾ ಗಿತ್ತು. ಮುಚ್ಚಿದ ಎರಡೂ ಕಣ್ಣುಗಳ ಕೆಳಗೆ, ತುಟಿಯ ಕೆಳಗೆ ಕಪ್ಪುಗೆರೆ ಗಳು ಕಾಣುತ್ತಿದ್ದವು.

ಒಂದು ನಿಮಿಷ ಅವಳು ಯೋಚಿಸಿದಳು; ಒಂದು ನಿಮಿಷವೇ ಅವಳ ಮನಸು ಹಿಂದೆ ಮುಂದೆ ನೋಡಿತು. ಮರುನಿಮಿಷದಲ್ಲಿ ಅವಳು ಆ ದೈವ ಗೇಡಿಯಾದ ರೋಗಿಯ ಹಾಸಿಗೆಯ ಬದಿಯಲ್ಲಿ ಕುಳಿತುಕೊಂಡಳು. ಎರಡೂ ಬಿಸಿನೀರಿನ ಸೀಸೆಗಳನ್ನು ಅವನ ಹೊಟ್ಟೆಯಡಿಯಲ್ಲಿಟ್ಟಳು. ಆಗ ಜೀವಾನಂದನು ಒಮ್ಮೆ ಮಾತ್ರ ಕಣ್ದೆರೆದು ಅವಳ ಕಡೆ ನೋಡಿ ಮತ್ತೆ ಕಣ್ಣು ಮುಚ್ಚಿದ. ಷೋಡಶಿ ಸೆರಗಿನಿಂದ ಅವನ ಹಣೆಯನ್ನು ಒರಸಿ ಗಾಳಿ ಹಾಕತೊಡಗಿದಳು.

ಜೀವಾನಂದನು ಮಾತನಾಡಲಿಲ್ಲ. ಬಲಗೈಯನ್ನು ಮೆಲ್ಲನೆತ್ತಿ ಷೋಡಶಿಯ ಮೈಮೇಲೆ ಚೆಲ್ಲಿದ. ಹತ್ತು ಹದಿನೈದು ನಿಮಿಷಗಳು ನೀರವ ವಾಗಿಯೇ ಕಳೆದವು. ಬಳಿಕ ಜೀವಾನಂದನು ಮಾತಿಗೆ ಮೊದಲು ಮಾಡಿದ.

"ಅಲಕಾ—"

"ನನ್ನನ್ನು ಷೋಡಶಿಯೆಂದೇ ಕರೆಯಿರಿ."

"ಪುನಃ ಅಲಕಾ ಆಗುವುದಿಲ್ಲವೆ ನೀನು?"

"ಇಲ್ಲ."

"ಎಂದೆಂದೂ? ಏನು ಮಾಡಿದರೂ?"

"ಮತ್ತೇನಾದರೂ ಮಾತನಾಡಿರಿ."

ಬೇರೆ ಮಾತನಾಡಲು ಜೀವಾನಂದನ ಮನಸಿರಲಿಲ್ಲ. ದೀರ್ಘ ಶ್ವಾಸವು ಹೊರಡುವ ಪ್ರಯತ್ನದಲ್ಲಿ ಅವನೆದೆ ಉಬ್ಬಿ, ಶ್ವಾಸ ಬಿಟ್ಟಬಳಿಕ ಸಮನಾಯಿತು.

"ಇನ್ನೂ ಕಡಿಮೆಯೆನಿಸುವುದಿಲ್ಲವೆ?" ಒಂದೆರಡು ನಿಮಿಷಗಳ ಮೇಲೆ ಷೋಡಶಿ ಮೆಲ್ಲನೆ ವಿಚಾರಿಸಿದಳು.

"ಸ್ವಲ್ಪ ಕಡಿಮೆಯಾದಂತೆ ತೋರುತ್ತದೆ. ಒಳ್ಳೇದು. ಬದುಕಿ ಉಳಿದರೆ ನಿನಗಾಗಿ ನಾನೇನು ಮಾಡಲಿ?"

"ಏನೂ ಬೇಡ. ನಾನು ಸಂನ್ಯಾಸಿನಿ. ನನಗಾಗಿ ಯಾರೂ ಏನೂ ಮಾಡುವ ಅಗತ್ಯವಿಲ್ಲ."

ಜೀವಾನಂದನು ಕೆಲಹೊತ್ತು ಸುಮ್ಮನಿದ್ದು, "ಒಳ್ಳೇದು, ಸಂನ್ಯಾಸಿ ನಿಗೆ ಇಷ್ಟವಾದದ್ದು ಯಾವುದೂ ಇಲ್ಲವೆ?" ಎಂದು ಕೇಳಿದ.

" ಇದ್ದರೂ ಇರಬಹುದು. ನಿಮಗೇಕೆ ಅದರ ಗೊಡವೆ? "

ಜೀವಾನಂದನು ಕಿರುನಗೆ ನಕ್ಕ. " ನನ್ನಲ್ಲಿ ಅನೇಕ ದೋಷಗಳಿವೆ. ಆದರೆ ಪರೋಪಕಾರಕ್ಕಾಗಿ ನಾನೆಂದಾದರೂ ಕಳಕಳಿ ತೋರಿಸಿದ್ದೇನೆಂಬ ದೋಷವನ್ನು ನನ್ನ ಮೇಲೆ ಯಾರೂ ಹೊರಿಸಿಲ್ಲ. ಈಗ ಆಡಬೇಕೆಂದು ಆಡುತ್ತಿದ್ದೇನೆ ಅಷ್ಟೆ; ಇದರಲ್ಲಿ ನಿಶ್ಚಿತತನವೇನೂ ಇಲ್ಲ. ಇದು ಹೀಗೆಯೇ ಸಾಗುವುದೇ! ಇದು ಹೀಗೆ ಸಾಗುವುದೆ! ಇದೀ ಜನ್ಮದಲ್ಲಿ ಇದರ ಹೊರತು ಏನೂ ಆಗಲಾರದು! "

ಷೋಡಶಿ ಮತ್ತೊಮ್ಮೆ ಅವನ ಹಣೆಯ ಬೆವರನ್ನೊರಸಿದಳು. ಆಗವಳ ಕೈಯನ್ನು ಹಿಡಿದು ಜೀವಾನಂದನೆಂದ: " ಸಂನ್ಯಾಸಿನಿಗೆ ಸುಖ ದುಃಖ ಯಾವುದೂ ಇಲ್ಲವೆ? ಅವಳಿಗೆ ಆನಂದದ ಸಾಧನವು ಯಾವುದೂ ಇಲ್ಲವೆ? "

" ಆದರೆ ಅವು ನಿಮ್ಮ ಕೈಯೊಳಗಿನವಲ್ಲ."

" ಮನುಷ್ಯನ ಕೈಯಿಂದಾಗುವಂಥವೇನಾದರೂ? ಹೀಗೇ ಏನಾದರೂ? "

" ಅಂಥವು ಕೆಲವಿವೆ. ಆದರೆ ಮೊದಲು ನೆಟ್ಟಗಾಗಿರಿ; ಆಮೇಲೆ ಆ ವಿಚಾರ. "

ಅವಳ ಕೈಯನ್ನು ಒಮ್ಮೆಲೆ ಸೆಳೆದುಕೊಂಡು, ತನ್ನ ಎದೆಯ ಮೇಲಿಟ್ಟುಕೊಂಡು ತಲೆಯಲ್ಲಾಡಿಸುತ್ತ ಜೀವಾನಂದನೆಂದ: " ಇಲ್ಲ ಇಲ್ಲ, — ನೆಟ್ಟಗಾಗುವುದು ಇರಲಿ. ಈ ನೋವಿನ ಸಮಯದಲ್ಲಿಯೇ ಹೇಳು. ನಾನು ಎಷ್ಟೋ ಜನರನ್ನು ಪೀಡಿಸಿದ್ದೇನೆ. ಇಂದು ನನ್ನ ದುಃಖದ ಸಮಯದಲ್ಲಿ ಪರರಿಗೆ ಸಮಾಧಾನವಾಗುವ ವಿಷಯವನ್ನು ಹೇಳಲ್ಲ, ನನ್ನ ದುಃಖ ಸಾರ್ಥಕವಾಗಲಿ."

ಮೆಲ್ಲನೆ ಕೈಯನ್ನು ಬಿಡಿಸಿಕೊಂಡು ಷೋಡಶಿ ಶಾಂತವಾಗಿ ಕುಳಿತುಕೊಂಡಳು. ಕೊಂಚ ಹೊತ್ತು ಜೀವಾನಂದನೂ ಸ್ವಸ್ಥವಾಗಿ ಬಿದ್ದುಕೊಂಡಿದ್ದ.

" ಹೋಗಲಿ. ಇತರರಂತೆ ನಾನೂ ನಿನ್ನನ್ನು ಷೋಡಶಿಯೆಂದೇ ಕರೆಯುತ್ತೇನೆ. ನಿನ್ನೆಯಿಂದ ಈವರೆಗೂ ಈ ವೇದನೆ ಒಂದೇ ಸವನೆ

ಇದ್ದೇ ಇದೆ. ಆದರಲ್ಲಿಯೇ ಹಲವು ಯೋಚನೆಗಳು ಬರುತ್ತಿವೆ– ಅವುಗಳಲ್ಲಿ ನಿನ್ನ ವಿಷಯದವೇ ಹೆಚ್ಚು– ನಾನೇನೋ ಉಳಿದುಕೊಂಡೆ, ಆದರೆ ನೀನು—"

"ನನ್ನ ವಿಚಾರ ಬಿಟ್ಟುಬಿಡಿರಿ." ಷೋಡಶಿ ನಡುವೆಯೇ ನುಡಿದಳು.

ಅವಳ ಈ ಉದ್ಗಾರದ ಅರ್ಥವು ಜೀವಾನಂದನಿಗೆ ಆಯಿತು. ಸ್ವಲ್ಪ ಹೊತ್ತು ಸುಮ್ಮನಿದ್ದು ಮೆಲ್ಲಗೆ ಅವನೆಂದ: "ನನಗೆ ತಿಳಿಯುತ್ತದೆ ಷೋಡಶಿ. ನಿನ್ನ ಬಗ್ಗೆ ನಾನು ವಿಚಾರ ಮಾಡುವುದೂ ನಿನಗೆ ಸೇರುವುದಿಲ್ಲ. ನಿನಗೆ ಹಾಗೆ ಎನಿಸುವುದೆ!" ಎಂದು ನಿಡಿದಾಗಿ ಉಸಿರುಗರೆದು ಅವನು ಸುಮ್ಮನಾದ.

ಷೋಡಶಿ ಹಾಸಿಗೆಯನ್ನು ಬಿಟ್ಟು ಎದ್ದು ಪಕ್ಕಕ್ಕೆ ನಿಂತಳು. ಜೀವಾನಂದನು ಕಣ್ಣು ತೆರೆದು ಅವಳ ಕಡೆ ನೋಡಿ ಕೇಳಿದ: "ನೀನೂ ಹೊರಟೆಯಾ?"

"ಇಲ್ಲ. ಕೋಣೆಯೆಂಬುದು ತಿಪ್ಪೆಯಾಗಿದೆ. ಒಂದು ಸ್ವಲ್ಪ ಸ್ವಚ್ಛ ಮಾಡುತ್ತೇನೆ" ಎಂದು ನುಡಿದು ಷೋಡಶಿ ಅವನ ಅನುಮತಿಯನ್ನು ಅಪೇಕ್ಷಿಸದೆ ಕೆಲಸಕ್ಕೆ ತೊಡಗಿದಳು.

ಈವರೆಗೂ ಕೋಣೆಯ ಕಿಟಕಿ–ಬಾಗಿಲುಗಳನ್ನು ತೆರೆದಿರಲೇ ಇಲ್ಲ. ಎಷ್ಟೋ ದಿನ ತೆರೆಯದಿದ್ದುದರಿಂದ ಕದಗಳು ಗಟ್ಟಿ ಕೂತಿದ್ದವು. ತೆರೆಯುವುದಕ್ಕೆ ಬಹಳ ಪ್ರಯಾಸವಾಯಿತು. ತೆರೆದೊಡನೆಯೆ ಬಯಲಿನ ಗಾಳಿ ಬೆಳಕುಗಳು ಒಳಗೆ ಬಂದು ತುಂಬಿದವು. ನೆಲದ ಮೇಲೆ ಎಲ್ಲ ತೆರದ ಹೊಲಸೂ ಕೂಡಿಬಿದ್ದಿತ್ತು. ಎಲ್ಲಿಲ್ಲಿಯೋ ಹುಡುಕಿ ಒಂದು ಪೊರಕೆಯನ್ನು ತಂದು ಷೋಡಶಿ ಕಸ ಬಳಿದಳು. ಹಾಸುಗೆಯನ್ನು ಸೆರಗಿನಿಂದ ಜಾಡಿಸಿ, ಎರಡು ದಿಂಬುಗಳನ್ನು ವ್ಯವಸ್ಥಿತವಾಗಿ ಇಟ್ಟಳು. ಆದರೂ ಜೀವಾನಂದನು ಏನೂ ಮಾತನಾಡಲಿಲ್ಲ. ಅವನ ಇಳಿದ ಮೋರೆಯ ಮೇಲೆ ಮೆಲ್ಲಮೆಲ್ಲನೆ ಎಲ್ಲಿಯದೋ ಕಳೆ ಬಂದು ನೆಲಸತೊಡಗಿದಂತೆ ಎನಿಸುತ್ತಿತ್ತು.

ಷೋಡಶಿ ಕೆಲಸ ಮಾಡುತ್ತಲಿದ್ದಳು. ಅವನು ಕಣ್ಣು ಬಿಟ್ಟುಕೊಂಡು ಅವಳತ್ತ ಹೋದರತ್ತ ನೋಡುತ್ತಲಿದ್ದ. ಅವನ ಎಲ್ಲ ವೇದನೆಯೂ ಮರೆತುಹೋಗಿತ್ತು. ಜಳಜಳಿಕೆ ಓರಣ ಎಂದರೇನೆಂಬುದು ಇಡೀ ಜೀವನದಲ್ಲಿ ಇಂದೇ ಮೊದಲು ಅವನಿಗೆ ಗೊತ್ತಾಗಿರಬೇಕು.

ಲಿಲ್ಲ. ಹಾಗೆ ಮಾಡಿದರೆ ನಡುಬೀದಿಯಲ್ಲಿಯೇ ಆ ಜನ ಅವಳನ್ನು ಹಿಡಿ ದೆಳೆದಾಡುವ ಸಂಭವವಿತ್ತು. ಇಂತಹ ತುಂಬಿದ ಬೀದಿಯಲ್ಲಿ ಮಾನ ಕಳೆದುಕೊಳ್ಳುವುದಕ್ಕಿಂತ ಬಾಯಿ ಮುಚ್ಚಿಕೊಂಡು ಹೋಗುವುದೇ ಲೇಸು ಎಂದು ಅವಳು ಬಗೆದಳು. ಹಾಗೆಯೆ ಸುಮ್ಮನೆ ನಡೆದಳು.

ದನಗಾಹಿ ಹುಡುಗರು ದನಗಳನ್ನು ಹೊಡೆದುಕೊಂಡು ತಿರುಗಿ ಬರು ತ್ತಿದ್ದರು; ಒಕ್ಕಲಿಗರು ಹೊಲದ ಕೆಲಸ ಮುಗಿಸಿಕೊಂಡು ಮನೆಗೆ ಹೊರಟಿ ದ್ದರು; ಅವರೆಲ್ಲರೂ ಇವರ ಕಡೆ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು. ಷೋಡಶಿ ಮಾತ್ರ ಯಾರ ಕಡೆಗೂ ನೋಡಲಿಲ್ಲ, ಯಾರೊಡನೆಯೂ ಮಾತ ನಾಡಲಿಲ್ಲ. ಅವಳು ಮನಸಿನೊಳಗೇ ಎಂದುಕೊಳ್ಳುತ್ತಿದ್ದಳು. 'ತಾಯಿ ಭೂದೇವಿ, ಇಬ್ಭಾಗವಾಗು!'

ಸೂರ್ಯನು ಮುಳುಗಿದ. ಅತ್ತಿತ್ತ ಕತ್ತಲೆ ಬೀಳತೊಡಗಿತ್ತು. ಯಂತ್ರಚಾಲಿತ ಪುತ್ಥಳಿಯಂತೆ ಅವಳು ಶಾಂತಿಕುಂಜದ ಆವಾರವನು ಪ್ರವೇಶಿಸಿದಳು.

ಆ ದಿನ ಗಾಬರಿಗೊಂಡ ಏಕಕೌಡಿ ಹೋಗಿದ್ದ ಕೋಣೆಗೇ ಅವಳನ್ನು ಕರೆದೊಯ್ಯಲಾಯಿತು. ಅಲ್ಲಿ ಆಗಿನಂತೆಯೇ ಈಗಲೂ ರಂದಿ ಹರವಿತ್ತು. ಮದ್ಯದ ದರ್ಪ ಪಸರಿಸಿತ್ತು. ಬಿಳಿಯ ಕರಿಯ, ಉದ್ದನೆಯ ಗಿಡ್ಡನೆಯ ನಾನಾ ಪ್ರಕಾರದ ಬರಿಯ ಸೀಸೆಗಳು ನಾಲ್ಕೂ ಕಡೆಗೆ ಬಿದ್ದಿದ್ದವು. ತಿಕ್ಕಿ ಒರಸಿ ಜಳಜಳ ಮಾಡಿದ ಬಂದೂಕೊಂದು ಗೋಡೆಗಿಟ್ಟಿತ್ತು. ಕೈಗೆ ಹತ್ತಿರ ವಾಗಿ ಮುರಕ ಸ್ಟೂಲಿನ ಮೇಲೆ ಎರಡು ಪಿಸ್ತೂಲುಗಳಿದ್ದವು. ಹತ್ತಿರವೇ ವರಾಂಡದಲ್ಲಿ ಯಾವುದೋ ಕಾಡುಪ್ರಾಣಿಯ ಚರ್ಮವನ್ನು ಒಣಹಾಕಿತ್ತು; ಅದರ ಕೆಟ್ಟನಾತವು ಮೂಗಿಗೆ ನುಗ್ಗುತ್ತಿತ್ತು. ಅದೇ ಹೊಡೆದು ತಂದಿದ್ದ ನರಿಯೊಂದು ಅಲ್ಲಿಯೇ ಒಂದು ಕಡೆ ಬಿದ್ದಿದ್ದಿತು. ಅದರ ನೆತ್ತರಿಂದ ನೆಲ ತೊಯ್ದು ಕೆಂಪಾಗಿತ್ತು.

ಹಾಸಿಗೆಯ ಮೇಲೆ ಅಡ್ಡಾಗಿ ಜಮಾದಾರನು ಯಾವುದೋ ಪುಸ್ತಕ ವನ್ನು ಓದುತ್ತಿದ್ದ. ತಲೆಯ ಕಡೆ ಅತ್ಯಂತ ದಪ್ಪವಾದ ಪುಸ್ತಕದ ಮೇಲೆ ಮೇಣಬತ್ತಿಯನ್ನು ಹಚ್ಚಿ ಊರಿಡಲಾಗಿತ್ತು.

ಮಗ್ಗುಲು ಹಾಸಿಗೆ ಇಲ್ಲದುದಕ್ಕೆ ಹಾಸಿಗೆಯ ಮೇಲೆ ಬೆಲೆಯುಳ್ಳ

ಶಾಲನ್ನು ಹಾಸಲಾಗಿತ್ತು; ಅದರ ಬಹುಭಾಗವು ನೆಲದಮೇಲೆ ಹೊರಳಾಡು ತ್ತಿತ್ತು. ಬಹಳ ಬೆಲೆಯ ಬಂಗಾರದ ಕೈಗಡಿಯಾಳದ ಮೇಲೆ ಅರೆಸುಟ್ಟ ಚಿರೂಡು ಸಣ್ಣಾಗಿ ಹೊಗೆ ಬಿಡುತ್ತಲಿದ್ದಿತು. ಮಂಚದ ಕೆಳಗೆ ಬೆಳ್ಳಿಯ ತಟ್ಟೆಯಲ್ಲಿ, ಮುಂಜಾನೆಯೂಟದ ಕಾಲಕ್ಕೆ ತೆಗೆದೊಗೆದ ಎಲುವುಗಳು ಇನ್ನೂ ಅಲ್ಲಿಯೇ ಇದ್ದವು. ಬಳಿಯಲ್ಲಿ ಜರದಂಚಿನ ಉಪ್ಪರಣೆಯೊಂದು ಬಿದ್ದಿತ್ತು. ಕರವಸ್ತ್ರವಿಲ್ಲದುದಕ್ಕೆ ಅದರಿಂದ ಕೈಯೊರಸಿಕೊಳ್ಳಲಾಗುತ್ತಿತ್ತು.

ಪುಸ್ತಕವು ಅಡ್ಡವಿದ್ದುದರಿಂದ ಆ ವ್ಯಕ್ತಿಯ ಮುಖವು ಷೋಡಶಿಗೆ ಸರಿಯಾಗಿ ಕಾಣಲಿಲ್ಲ. ಆದರೂ ಅವನು ಯಾವ ತೆರದ ಮನುಷ್ಯನೆಂಬುದು ಕನ್ನಡಿಯಲ್ಲಿ ಕಂಡ ಹಾಗೆ ನಿಚ್ಚಳವಾಗಿ ಕಾಣಿಸಿತು. ಧರ್ಮವಿಲ್ಲ, ಪುಣ್ಯ ವಿಲ್ಲ, ಲಜ್ಜೆಯಿಲ್ಲ, ಸಂಕೋಚವಿಲ್ಲ – ಇದೊಂದು ನಿರ್ದಯ ಪಾಷಾಣ ವಾಗಿರಬೇಕೆಂದು ಅವಳಿಗೆನಿಸಿತು. ಗಳಿಗೆಯ ಅಗತ್ಯಕ್ಕಾಗಿ ಬೇಕಾದವರ ಮಾನವನ್ನು ಬೇಕಾದ ಹಾಗೆ ತೆಗೆದುಕೊಳ್ಳಬಲ್ಲ!

ಈ ಭೂತನಗರಿಯೊಳಗೆ ಇಂತಹ ಭಯಂಕರ ಮನುಷ್ಯನ ಕೈಯೊಳಗೆ ಸಿಕ್ಕುಬಿದ್ದಿರುವೆನೆಂಬ ಕಲ್ಪನೆ ಬರುತ್ತಲೇ ಭಯದಿಂದ ಅವಳ ಸರ್ವಾಂಗವೂ ಸ್ತಬ್ಧವಾಯಿತು.

ಸುಳಿವು ತಿಳಿದು ಆತನು ಕೇಳಿದ: "ಯಾರು?"

ಸರದಾರನು ಹೊರಗಿನಿಂದಲೇ ಎಲ್ಲವನ್ನೂ ಹೇಳಿ ಚೊಕ್ಕ ಬಯ್ಗು ಳೊಂದಿಗೆ ಚಕ್ರವರ್ತಿಯ ಹೆಸರನ್ನೆತ್ತಿ "ಅವನ ಮಗಳನ್ನು ಹಿಡಿದು ತಂದೆವು ಒಡೆಯಾ" ಎಂದ.

"ಯಾರನ್ನು? ಭೈರವಿಯನ್ನೇ?" ಎಂದೆನ್ನುತ್ತ ಜೀವಾನಂದನು ಗಡಿಬಿಡಿಸಿ ಎದ್ದು ಕುಳಿತ. ಅವನು ಹಾಗೆ ಅಪ್ಪಣೆ ಕೊಟ್ಟಿರಲಿಲ್ಲ. ಆದರೂ ಅವನೆಂದ: "ಒಳ್ಳೇದು, ಹೋಗು."

ಸರದಾರನು ಹೊರಟುಹೋದ ಬಳಿಕ ಜೀವಾನಂದನು ಷೋಡಶಿ ಗೆಂದ: "ಇಂದು ಹಣವನ್ನು ಕೊಡಬೇಕೆಂದು ಗೊತ್ತಾಗಿತ್ತು. ತಂದೆ ಯೇನು?"

ಷೋಡಶಿಯ ಗಂಟಲು ಒಣಗಿತ್ತು; ಶಬ್ದವು ಹೊರಡಲಿಲ್ಲ. ಕ್ಷಣ ಹೊತ್ತು ಕಾದು ಮತ್ತೆ ಅವನೇ ಕೇಳಿದ: "ತಂದಿಲ್ಲವೇ? ಏಕೆ ತರಲಿಲ್ಲ?"

ಈಸಲ ಷೋಡಶಿ ಗಟ್ಟಿಜೀನ ಮಾಡಿ ಉತ್ತರವಿತ್ತಳು. ಬಲು ಮೆತ್ತಗೆ ಅವಳು ಹೇಳಿದಳು: "ಇಲ್ಲ ನಮ್ಮ ಹತ್ತಿರ."

"ಇಲ್ಲದಿದ್ದರೆ ಇಡೀ ರಾತ್ರಿ ನಿನ್ನನ್ನು ಪೇದೆಗಳ ಕೋಣೆಯೊಳಗೆ ಸೆರೆ ಹಾಕಲಾಗುವುದು! ಆಗ ತಿಳಿಯುವುದು ಅದೇನೆಂಬುದು!"

ಎರಡು ಕೈಗಳಿಂದಲೂ ಚೌಕಟ್ಟನ್ನು ಗಟ್ಟಿಯಾಗಿ ಹಿಡಿದುಕೊಂಡು, ಷೋಡಶಿ ಕಣ್ಣುಮುಚ್ಚಿ ಸ್ತಬ್ಧವಾಗಿ ನಿಂತಿದ್ದಳು. ಅಲ್ಲಿ ಯಾವ ಪ್ರಸಂಗ ಒದಗುವುದೂ ಅಸಂಭವವೆಂದು ಅವಳಿಗೆ ತೋರಲಿಲ್ಲ.

ಬಿಳುಪೇರಿದ ಅವಳ ಮುಖವು ಜೀವಾನಂದನ ಗಮನವನ್ನು ಸೆಳೆಯಿತು. ಇನ್ನವಳು ಮೂರ್ಛೆಗೊಂಡು ಬೀಳುವಳೆಂದು ಅವನಿಗೆನಿಸಿತು. ಕ್ಷಣಹೊತ್ತು ಅವನೂ ಮಂಕು ಬಡಿದವನಂತೆ ಕುಳಿತುಕೊಂಡ.

ಬಳಿಕ ಅವನು ದೀಪವನ್ನು ಕೈಯೊಳಗೆ ತೆಗೆದುಕೊಂಡು, ನಿರ್ಜೀವಳಾಗಿ ನಿಂತಿದ್ದ ಅವಳೆದುರಿಗೆ ಹೋಗಿ ನಿಂತುಕೊಂಡ. ಪೂಜಾರಿ ಆರತಿಯ ಪೂರ್ವದಲ್ಲಿ ನೀರಾಜನವನ್ನು ಹಚ್ಚಿ ಮೂರ್ತಿಯ ಮುಖವನ್ನು ದಿಟ್ಟಿಸುವಂತೆ, ಸ್ತಬ್ಧಗಂಭೀರಳಾದ ಸಂನ್ಯಾಸಿನಿಯ ಮುಖವನ್ನೇ ಆ ಪಾಪಿ ನೋಡುತ್ತಲಿದ್ದ. ಮೈಮೇಲಿನ ಕಾವಿಬಟ್ಟೆ, ಬೆನ್ನಮೇಲೆ ಬಿದ್ದಿದ್ದ ಒಣಕಲು ಕೂದಲು, ಬೆಳ್ಳಗಾದ ತುಟಿಗಳು, ಸುದೃಢವಾದ ಮೈಕಟ್ಟುಗಳನ್ನು ಅವಳನ್ನು ಕಣ್ಣಿಂದ ನುಂಗಿಬಿಡುವನೋ ಎಂಬಂತೆ ನೋಡಿದ.

## ೩

ಯೌವನದ ಅಪರಪ್ರಾಂತವನ್ನು ತಲುಪಿದ ಹೊರತು ಕೆಲಕೆಲವು ಹೆಣ್ಣುಮಕ್ಕಳ ಸೌಂದರ್ಯವು ಪುರುಷರ ದೃಷ್ಟಿಯನ್ನು ಸೆಳೆಯುವುದಿಲ್ಲ. ಆ ಅದೃಷ್ಟಪೂರ್ವ ಅದ್ಭುತ ಸ್ತ್ರೀಜಾತಿಯ ಸೌಂದರ್ಯವು – ಎಣ್ಣೆಗಾಣದ ಕರಡು ಕೂದಲಿನ ಮೂಲಕ, ಉಪವಾಸಗಳಿಂದ ಕಠಿನವಾದ ದೇಹಯಷ್ಟಿಯ ಮೂಲಕ, ಅನಾದೃತ ಯೌವನದ ರುಕ್ಷತೆಯ ಮೂಲಕ, ಪರಿವರ್ತನೆಗೊಂಡ ಮನೋವೃತ್ತಿಯ ಶುಷ್ಕತೆಯ ಮೂಲಕ – ಷೋಡಶಿಯ ಅಂಗ ಪ್ರತ್ಯಂಗಗಳಲ್ಲಿಯೂ ಜೀವಾನಂದನಿಗೆ ಒಡೆದು ಕಾಣುತ್ತಲಿದ್ದಿತು.

ಕಳೆದ ಇಪ್ಪತ್ತು ವರ್ಷಗಳಲ್ಲಿ ಅವನು ರಮಣಿಯರ ದೇಹಗಳೊಡನೆ ಅತಿಶಯ ಬೀಭತ್ಸಲೀಲೆಗಳನ್ನಾಡಿದ್ದ. ಅದೆಷ್ಟು ಲಜ್ಜಾಶೀಲ ಮಧುರ ಶೋಭನೀಯ ಜೀವಗಳನ್ನು ಅವನು ನಾಶಮಾಡಿದ್ದನೋ! ಅದರ ಚಿಹ್ನದ ಲವಲೇಶವೂ ಅವನ ಪಾಷಂಡ ಹೃದಯದಲ್ಲಿ ನಿಂತಿರಲಿಲ್ಲ. ಆ ಲಾಲಸೆಯ ಕಿಚ್ಚಿನ ಜಳವು ಅವನಿಗೆ ಒಮ್ಮೆಲೆ ತಾಗಿತು. ಆದರೆ ಈಗಿನ ಅಪರಿಚಿತವಾದ ದೃಶ್ಯವನ್ನು ಕಂಡು ಅವನ ಮದೋನ್ಮತ್ತ ವಿಕೃತದೃಷ್ಟಿ ಕ್ಷಣಕಾಲ ಸ್ತಬ್ಧವಾಯಿತು, ಗಂಭೀರವಾಯಿತು. ತಲೆಯ ಮೇಲೆ ಸೆರಗು ಹೊರುವುದು ಭೈರವಿಗೆ ವರ್ಜ್ಯ. ಆದುದರಿಂದ ಅವಳು ಮೋರೆ ತಗ್ಗಿಸಿಕೊಂಡು ಹತಬುದ್ಧಳಂತೆ ನಿಂತಿದ್ದಳು. ಜೀವಾನಂದನು ಏನೂ ಮಾತನಾಡದೆ ದೀಪವನ್ನು ಬದಿಗಿಟ್ಟು ಗ್ಲಾಸಿಗೆ ಮದ್ಯವನ್ನು ಸುರಿಸುರಿದು ಕುಡಿಯತೊಡಗಿದ. ಹೀಗೆ ಸುಮಾರು ಹದಿನೈದು ನಿಮಿಷಗಳು ನೀರವವಾಗಿ ಕಳೆದವು. ಬಳಿಕ ಜೀವಾನಂದನು ನೀಟಾಗಿ ಕುಳಿತುಕೊಂಡ. ಇಷ್ಟುಹೊತ್ತೂ ಅವನು ತನ್ನ ಮೂರ್ಛಿತಪ್ರಾಯವಾದ ಪಶುವೃತ್ತಿಯನ್ನು ಬಾರುಕೋಲಿನಿಂದ ಹೊಡೆ ಹೊಡೆದು ಎಚ್ಚರುಗೊಳಿಸಿದನೇನೋ. ಕೊನೆಗೆ "ನಿನ್ನ ಹೆಸರು ಷೋಡಶಿಯೇನು?" ಎಂದು ಪ್ರಶ್ನಿಸಿದ.

ಅದಕ್ಕೆ ಉತ್ತರವು ದೊರೆಯಲಿಲ್ಲ.

"ನಿನ್ನ ವಯಸ್ಸೆಷ್ಟು" ಪುನಃ ಜೀವಾನಂದನು ಕೇಳಿದ.

ಅದಕ್ಕೂ ಉತ್ತರವಿಲ್ಲ. ಜೀವಾದಂದನ ಸ್ವರವು ಕಠೋರವಾಯಿತು. "ಸುಮ್ಮನೆ ನಿಂತರೆ ಪ್ರಯೋಜನವಿಲ್ಲ, ಮಾತನಾಡು" ಎಂದು ಅವನು ಗದ್ದರಿಸಿದ.

ಷೋಡಶಿ ಅತಿ ಕಷ್ಟದಿಂದ ಹೇಗೆ ಹೇಗೋ ಉತ್ತರವಿತ್ತಳು: "ನನಗೆ ಇಪ್ಪತ್ತೆಂಟು ವರುಷ."

"ಸರಿ ನಾನು ಕೇಳಿದ್ದು ನಿಜವಿದ್ದರೆ, ಈಗ ಹತ್ತೊಂಬತ್ತು ಇಪ್ಪತ್ತು ವರ್ಷಗಳಿಂದ ನೀನು ಭೈರವಿಯಾಗಿದ್ದೀ. ಈ ಅವಧಿಯೊಳಗೆ ಚೆಲೋ ಗಂಟು ಮಾಡಿದ್ದೀಯಾದೀತು. ಹಣ ಏಕೆ ಕೊಡುವುದಿಲ್ಲ?"

ಷೋಡಶಿ ಶಾಂತವಾಗಿ "ನಾನು ಮೊದಲೇ ಹೇಳಿದೆನಲ್ಲ—ನನ್ನ ಹತ್ತಿರ ಮೂರು ಕಾಸೂ ಇಲ್ಲ." ಎಂದು ಹೇಳಿದಳು.

ಅವಳ ಕಳವಳದ ಮಾತಿನಲ್ಲಿಯು ಸತ್ಯದ ಕಠೋರತೆ ಜಮೀದಾರನ ಕಿವಿಯೊಳಗೆ ಅಪ್ಪಳಿಸಿತು. ಈ ವಿಷಯದಲ್ಲಿ ಅವನು ಹೆಚ್ಚು ವಾದಿಸಲಿಲ್ಲ. "ಒಳ್ಳೇದು. ಹಾಗಾದರೆ ಮಿಕ್ಕ ನಾಲ್ಕು ಜನ ಮಾಡುವ ಹಾಗೆ ಮಾಡು. ಹೊಲ ಮನೆ ಒತ್ತೆ ಹಾಕಿ, ಮಾರಿ, ಏನು ಬೇಕಾದ್ದು ಮಾಡಿ ಹಣ ತಂದು ಕೊಡು" ಎಂದ. "ಅವರಿಗೆ ಹಾಗೆ ಮಾಡಲಿಕ್ಕೆ ಬರುತ್ತದೆ, ಮಾಡುತ್ತಾರೆ–ಅವರ ಸ್ವತ್ತು. ಆದರೆ ದೇವಿಯ ಆಸ್ತಿಯನ್ನು ಮಾರಲಿಕ್ಕೆ, ಒತ್ತೆ ಹಾಕಲಿಕ್ಕೆ, ಏನು ಮಾಡಲಿಕ್ಕೂ ನನಗೆ ಅಧಿಕಾರವಿಲ್ಲ.

ಕ್ಷಣ ಹೊತ್ತು ಸುಮ್ಮನಿದ್ದು ಒಮ್ಮೆಗೆಲೆ ನಕ್ಕು ಜೀವಾನಂದನೆಂದ; "ಹಣ ತೆಗೆದುಕೊಳ್ಳುವ ಅಧಿಕಾರ ನನಗಾದರೂ ಎಲ್ಲಿದೆ? ಒಂದು ಕವಡೆಯನ್ನೂ ಬೇಡುವ ಹಾಗಿಲ್ಲ. ಆದರೂ ವಸೂಲು ಮಾಡುತ್ತೇನೆ. ಏಕೆ? ನನಗೆ ಹಣ ಬೇಕಾಗಿದೆ ಎಂದು. 'ಬೇಕು' ಎಂಬುದೇ ಜಗತ್ತಿನಲ್ಲಿ ಸತ್ಯವಾದ ಅಧಿಕಾರ; ಆದ್ದರಿಂದ ನೀನು ಕೊಡಲೇಬೇಕು! ತಿಳಿಯಿತೇ?"

ಷೋಡಶಿ ಸುಮ್ಮನೆ ಕೇಳಿಕೊಳ್ಳುತ್ತಿದ್ದಳು. ಜೀವಾನಂದನು ಹೇಳುತ್ತಿದ್ದ: "ನೀನು ಸುಶಿಕ್ಷಿತಳೆಂದು ನನಗೆನಿಸುತ್ತಿದೆ. ನಿನಗೆಲ್ಲ ತಿಳಿಯುತ್ತದೆ. ಸುಮ್ಮನೆ ಜಮೀದಾರರ ಋಣವನ್ನು ಕೊಟ್ಟುಬಿಡು. ವ್ಯರ್ಥ ಗೊಂದಲ ಮಾಡಬೇಡ."

"ನೀವಿದಕ್ಕೆ ಜಮೀದರರ ಋಣ ಎನ್ನುವಿರೊ?" ಷೋಡಶಿ ಸಾಹಸದಿಂದ ಮೊಗವೆತ್ತಿ ಕೇಳಿದಳು.

"ಇಲ್ಲ. ಆದರೆ ನೀವಿದನ್ನು ಕೊಡಲೇಬೇಕೆಂದು ನಾನೆನ್ನುವುದು. ಇತರ ಜಮೀದಾರರು ಹೀಗೆ ಬೇಡುವುದಿಲ್ಲವೆಂದು ನಿನಗೆನಿಸೀತು. ಆದರೆ ಅವರು ನನ್ನ ಹಾಗೆ ಸರಳ ಮನಸಿನವರಿರುವುದಿಲ್ಲ. ಅವರು ಸ್ಪಷ್ಟವಾಗಿ ಹೇಳುವುದಿಲ್ಲ. ಮೆಲ್ಲಮೆಲ್ಲನೆ ಊರಿಗೂರನ್ನೇ ಗಂಟಲೊಳಗೆ ಇಳಿಸಿಕೊಳ್ಳುತ್ತಾರೆ. ಅವರ ರೀತಿ ಬೇರೆ, ನನ್ನದು ಬೇರೆ. ಹೋಗಲಿ. ಈ ರಾತ್ರಿ ನೀನೊಬ್ಬಳೇ ಮನೆಗೆ ಹೋಗುವೆಯಾ? ಬರುವಾಗ ನಿನ್ನೊಡನೆ ಇದ್ದವರನ್ನು ಈಗ ಜೊತೆಗೆ ಕಳುಹಿಸಲು ನನ್ನ ಮನಸು ಒಪ್ಪುವುದಿಲ್ಲ."

ಇಷ್ಟೊತ್ತು ಮಾತುಕತೆ ನಡೆದ ಬಳಿಕ ಷೋಡಶಿಯ ಭಯ ಬಿಡುತ್ತ ಬಂದಿತ್ತು. ನಮ್ರತೆಯಿಂದ ಅವಳೆಂದಳು: "ಅಪ್ಪಣೆಯಾದರೆ ಹೋಗುತ್ತೇನೆ."

ಆಶ್ಚರ್ಯವನ್ನು ಪ್ರಕಟಿಸುತ್ತ ಜೀವಾನಂದನು "ಒಬ್ಬಳೇ? ಈ ಕತ್ತಲೆಯೊಳಗೆ? ಅದು ಬಹಳ ಕಷ್ಟವಾದೀತು!" ಎಂದು ನುಡಿದು ನಗಲಾರಂಭಿಸಿದ. ಆ ಮಾತಿನ, ಆ ನಗೆಯ ಅರ್ಥವು ಅತ್ಯಂತ ಸ್ಪಷ್ಟವಾಗಿತ್ತು. ಷೋಡಶಿಯ ಮನಸಿನಿಂದ ತೊಲಗುತ್ತ ಬಂದಿದ್ದ ಸಂದೇಹವು ಪುನಃ ನಾಲ್ಮಡಿಯಾಯಿತು. ನಕಾರಾರ್ಥದಲ್ಲಿ ತಲೆಹಾಕಿ, ಇಲ್ಲ. ನಾನೀಗ ಹೋಗಲಿಕ್ಕೇ ಬೇಕು" ಎಂದು ಮೆಲ್ಲಗೆ ಅವಳೆಂದಳು.

ಅವಳು ಹೆಜ್ಜೆ ಮುಂದಿಡುವುದನ್ನು ಕಂಡು ಜೀವಾನಂದನು ಅಡ್ಡ ಬಂದು ಅದೇ ನಗೆಯಲ್ಲಿ ನುಡಿದ: "ಒಳ್ಳೇದು ಒಳ್ಳೇದು, ಹಣವಿಲ್ಲದಿದ್ದರೆ ಕೊಡಬೇಡ ಷೋಡಶಿ. ಅದರ ಹೊರತು ಬೇರೆ ಉಪಾಯವೂ ಇದೆ—"

ಅವನ ಬಾಯಲ್ಲಿ ತನ್ನ ಹೆಸರನ್ನು ಕೇಳಿ ಅವಳು ಬೆಚ್ಚಿದಳು. ಅವನ ಮಾತನ್ನು ಅವಳು ಪೂರ್ಣವಾಗಗೊಡಲಿಲ್ಲ. "ನಿಮ್ಮ ಹಣ, ನಿಮ್ಮ ಉಪಾಯ ನಿಮಗೇ ಇರಲಿ. ನನ್ನನ್ನಿನ್ನು ಹೋಗಗೊಡಿರಿ" ಎಂದು ಅವಳು ನಿಜವಾಗಿಯೂ ಹೆಜ್ಜೆ ಮುಂದಿಟ್ಟಳು. ಆದರೆ ಯಾವ ಜನರನ್ನು ಜೊತೆಗೆ ಕಳಿಸುವುದು ಯೋಗ್ಯವಲ್ಲವೆಂದು ಅವನೆಂದಿದ್ದನೋ ಅವರು ಅಲ್ಲಿಯೇ ಕುಳಿತಿದ್ದರು. ಅವಳು ಬೆದರಿ ತಟ್ಟನೆ ನಿಂತುಬಿಟ್ಟಳು.

ಜಮೀದಾರನು ಅವಳಿಗೆ ಯಾವ ಅಡ್ಡಿಯನ್ನೂ ಮಾಡಲಿಲ್ಲ. ಆದರೂ ಷೋಡಶಿಯ ಕಣ್ಣೆದುರಿಗೆ ಕತ್ತಲು ಕವಿಯಿತು.

ತುಸ ಸಮಯ ಸುಮ್ಮನಿದ್ದು ಅವನು ಕೇಳಿದ: "ನೀನು ಮದ್ಯ ಕುಡಿಯುತ್ತೀಯಾ?"

"ಇಲ್ಲ."

"ನಿನಗಿಬ್ಬರು ಮೂವರು ಜೀವದ ಗೆಳೆಯರಿದ್ದಾರಂತೆ; ನಿಜವೇ?"

"ಇಲ್ಲ. ಪೂರಾ ಸುಳ್ಳು."

"ನಿನ್ನ ಹಿಂದಿನ ಭೈರವಿಯರೆಲ್ಲ ಮದ್ಯ ಕುಡಿಯುತ್ತಿದ್ದದ್ದು ನಿಜವೆ?" ಸ್ವಲ್ಪ ಹೊತ್ತು ಸುಮ್ಮನಿದ್ದು ಜೀವಾನಂದನು ಮತ್ತೆ ಕೇಳಿದ.

"ನಿಜ."

"ಮಾತಂಗಿ ಭೈರವಿಯ ನಡತೆ ಚೆನ್ನಾಗಿರಲಿಲ್ಲ; ಅದಕ್ಕೆ ಪ್ರಮಾಣಗಳಿವೆ. ನಿಜವೋ ಸುಳ್ಳೋ?"

ಷೋಡಶಿ ಲಜ್ಜಿತೆಯಾಗಿ ಮೆಲ್ಲನೆಂದಳು: "ನಾನೂ ಕೇಳಿದ್ದೇನೆ, ನಿಜವಂತೆ."

"ಕೇಳಿದ್ದೀಯಾ? ಸರಿ. ಹಾಗಿದ್ದರೆ ಪೂರ್ವಪರಂಪರೆಯನ್ನು ಬಿಟ್ಟು ನೀನಾದರೂ 'ಏಕೆ ಸಜ್ಜನಳಾಗುತ್ತೀ?' "

ಸಜ್ಜನರಾಗುವ ಅಧಿಕಾರವು ಎಲ್ಲರಿಗೂ ಉಂಟೆಂದು ಉತ್ತರ ಕೊಡಬೇಕೆಂದು ಷೋಡಶಿಗೆನಿಸಿತು. ಆದರೆ ಅತ್ಯಂತ ಕಠೋರ ಸ್ವರವು ಕಿವಿಗೆ ಬೀಳಲು ಅವಳ ಅನಿಸಿಕೆ ಅಲ್ಲಿಯೇ ಉಳಿಯಿತು. ಜೀವಾನಂದನು ನೀಟಾಗಿ ಕುಳಿತು ನುಡಿದ: "ಹೆಂಗುಸರೊಡನೆ ವಾದಿಸುವುದಿಲ್ಲ ನಾನು. ಅವರ ಮತಾಮತ ಲೆಕ್ಕಿಸುವುದಿಲ್ಲ. ನೀನು ಸಜ್ಜನಳೋ ದುರ್ಜನಳೊ ಎಂಬುದನ್ನು ಕೂದಲೆಳೆ ಸೀಳಿ ಚರ್ಚಿಸುವುದಕ್ಕೆ ನನಗೆ ಸಮಯವಿಲ್ಲ. ನನ್ನ ಅಭಿಪ್ರಾಯವಿಷ್ಟೇ -- ಎಲ್ಲ ಭೈರವಿಯರಂತೆ ನೀನೂ ನಡೆದುಕೊಂಡರೆ ತೀರಿತು. ನೀನು ಈಪೊತ್ತು ಇಲ್ಲಿಯೇ ಇರಬೇಕು."

ಈ ಅಪ್ಪಣೆಯಿಂದ ಬಾರುಕೋಲಿನ ಹೊಡೆತ ಬಿದ್ದಂತಾಯಿತು ಷೋಡಶಿಗೆ. ಜೀವಾನಂದನು ಹೇಳುತ್ತಲಿದ್ದ: "ಇಷ್ಟೊತ್ತು ನಿನ್ನೊಂದಿಗೆ ವಾದಹಾಕುತ್ತ ನಾನೇಕೆ ಕಾಲ ಕಳೆದೆನೋ, ನನಗೇ ಆಶ್ಚರ್ಯವಾಗಿದೆ. ಮತ್ತೊಬ್ಬರು ಹೀಗೆ ನನ್ನ ಅವಮಾನ ಮಾಡಿದ್ದರೆ, ಅವರನ್ನು ಪೇದೆಗಳ ಕೋಣೆಯಲ್ಲಿ ಹಾಕುತ್ತಿದ್ದೆ. ಎಷ್ಟೋ ಮಂದಿಗೆ ಈ ಶಿಕ್ಷೆ ವಿಧಿಸಿದ್ದೇನೆ ನಾನು."

ಇದು ಬರೀ ಪೊಳ್ಳು ಬೆದರಿಕೆಯಲ್ಲವೆಂಬುದು ಅವನ ದರ್ಪದಿಂದಲೇ ತಿಳಿಯುತ್ತಿತ್ತು. ಷೋಡಶಿಗೆ ಒಮ್ಮೆಗಿಲೆ ಅಳು ಬಂದಿತು. ಅವಳು ಕೈಜೋಡಿಸಿ ಸೆರೆಗೊಡ್ಡಿ ಗೋಳಾಡಿದಳು: "ಇದ್ದದ್ದು ಬಿದ್ದದ್ದು ಎಲ್ಲವನ್ನೂ ತೆಗೆದುಕೊಂಡು ಬಿಡಿರಿ; ನನ್ನನ್ನು ಬಿಟ್ಟುಕೊಡಿರಿ."

ಕೊಂಚ ಹೊತ್ತು ಸುಮ್ಮನಿದ್ದು ಜೀವಾನಂದನೆಂದ: "ಅದೇಕೆ? ಇಂಥ ಅಳುವೇನೂ ನನಗೆ ಹೊಸದಲ್ಲ; ಇಂಥ ದೈನ್ಯವೂ ಹೊಸದಲ್ಲ. ಆದರೆ ಆ ಜನರಿಗೆಲ್ಲ ಗಂಡ ಇದ್ದ, ಮಕ್ಕಳು ಇದ್ದರು, ಅವರು ಅತ್ತದ್ದು - ದೈನಾಸಬಟ್ಟದ್ದು ಆಶ್ಚರ್ಯವಲ್ಲ— "

ಅವರಿಗೆ ಗಂಡನಿದ್ದ, ಮಕ್ಕಳಿದ್ದರು ಎಂಬುದನ್ನು ಕೇಳಿದೊಡನೆ ಷೋಡಶಿಯ ಮೈಮೇಲೆ ಮುಳ್ಳು ಬಂದವು.

ಜೀವಾನಂದನು ಹೇಳುತ್ತಲಿದ್ದ : "—ಆದರೆ ನಿನಗೆ ಆ ತೊಡಕಿಲ್ಲ. ಹದಿನೈದು ಹದಿನಾರು ವರ್ಷಗಳಲ್ಲಿ ನೀನು ನಿನ್ನ ಗಂಡನನ್ನು ಕಣ್ಣಿಂದ ಕೂಡ ನೋಡಿಲ್ಲ. ಅದರಿಂದ ನಿಮಗೆ ದೋಷವೂ ಇಲ್ಲ."

ಷೋಡಶಿ ಕೈಜೋಡಿಸಿಕೊಂಡು ನಿಂತಿದ್ದಳು. ಗದ್ಗದ ಸ್ವರದಿಂದ ಅವಳೆಂದಳು : "ನನ್ನ ಗಂಡನ ನೆನಪು ನನಗೆ ಸರಿಯಾಗಿಲ್ಲ, ನಿಜ. ಆದರೆ ಇದ್ದಾರಲ್ಲವೆ? ನಾನೀವರೆಗೆ ನಿಮ್ಮಲ್ಲಿ ಯಾವ ಅಪರಾಧವನ್ನೂ ಮಾಡಿಲ್ಲ. ದಯವಿಟ್ಟು ನನ್ನನ್ನು ಬಿಟ್ಟುಬಿಡಿರಿ."

"ಮಹಾವೀರ!" ಜೀವಾನಂದನು ಕೂಗಿದ. ಗಾಬರಿಯಿಂದ ನಡುಗುತ್ತ ಷೋಡಶಿ ನುಡಿದಳು : "ಬೇಕಾದರೆ ನನ್ನ ಜೀವ ತೆಗೆದುಕೊಳ್ಳಿರಿ. ಆದರೆ—"

"ಆಗಲಿ. ಅದೇನು ಶೌರ್ಯವೋ ಅಲ್ಲಿಯೇ ಅವನ ಕೋಣೆಯಲ್ಲಿ ತೋರಿಸು. ಮಹಾವೀರ!—"

ಷೋಡಶಿ ಒಮ್ಮೆಲೆ ನೆಲದಮೇಲೆ ಬಿದ್ದು ಅಳಲಾರಂಭಿಸಿದಳು : "ನನ್ನ ಜೀವ ಇರುವ ತನಕ ಯಾರು ನನ್ನನ್ನು ಒಯ್ಯುವರೋ ನೋಡುತ್ತೇನೆ. ಏನೇನು ವಿಡಂಬನೆಯಾಗುವುದುಂಟೋ ಇಲ್ಲಿಯೇ ಎದುರಿಗೇ ಆಗಲಿ. ಎಷ್ಟೆಂದರೂ ನೀವು ಬ್ರಾಹ್ಮಣರು, ಸಭ್ಯ ಗೃಹಸ್ಥರು—"

ಅವಳು ಎಷ್ಟು ದೈನ್ಯದಿಂದ ಅಂಗಲಾಚಿದರೂ ಜೀವಾನಂದನು ನಗುತ್ತಲೇ ಇದ್ದ. ಕಠೋರವಿದ್ದಷ್ಟು ನಿಷ್ಠುರವಾಗಿತ್ತು ಆ ನಗೆ. "ನಿನ್ನ ಮಾತು ಕೇಳಲಿಕ್ಕೆ ಒಳ್ಳೆಯವೇ ಆಗಿವೆ. ಆದರೆ ಅತ್ತು ಕರೆದು ಮಾಡಿದರೆ ನನಗೇನೂ ಕನಿಕರ ಹುಟ್ಟುವುದಿಲ್ಲ. ಇಂಥ ಸೋಗು ಬಹಳ ಬಲ್ಲೆ ನಾನು. ಹೆಂಗುಸರ ವಿಷಯದಲ್ಲಿ ನನಗೆ ಅಷ್ಟು ಆಸಕ್ತಿಯಿಲ್ಲ. ನನ್ನ ಮನಸಿಗೆ ಬಾರದವಳನ್ನು ಆಳುಗಳಿಗೆ ಕೊಟ್ಟು ಬಿಡುತ್ತೇನೆ. ನಿನ್ನನ್ನೂ ಕೊಟ್ಟುಬಿಡುತ್ತಿದ್ದೆ. ಆದರೆ ಏಕೋ ಎಂದೂ ಇಲ್ಲದೆ ಇಂದು ಮೋಹವುಂಟಾಗುತ್ತಿದೆ. ಮದ್ಯದ ಮತ್ತು ಇಳಿಯದೆ ಅದೇಕೆಂಬುದು ತಿಳಿಯುವುದಿಲ್ಲ." ಬಾಗಿಲಲ್ಲಿ ನಿಂತು ಮಹಾವೀರನು "ಜೀಯಾ" ಎಂದ. ಎದುರುಗಡೆಯ ಬಾಗಿಲನ್ನು ತೋರಿಸಿ ಜೀವಾನಂದನು ಹೇಳಿದ : "ಈವೊತ್ತು ಒಂದು ರಾತ್ರಿ ಇವಳನ್ನು ಈ ಕೋಣೆಯೊಳಗೆ ಹಾಕು. ನಾಳೆ ಏನೆಂಬುದನ್ನು ನೋಡುವ."

ಷೋಡಶಿಯ ಕಣ್ಣುಗಳಲ್ಲಿ ದಳದಳ ನೀರು ಇಳಿಯುತ್ತಿತ್ತು. ಅವಳೆಂದಳು: "ಈ ರೀತಿ ನನ್ನ ಸರ್ವನಾಶ ಮಾಡಬೇಡಿರಿ ಧನಿಯರೇ. ಕೊಂಚ ವಿಚಾರ ಮಾಡಿರಿ. ನಾಳೆ ನನ್ನಿಂದ ಜಗತ್ತಿನಲ್ಲಿ ಮೋರೆ ತೋರಿಸಲಿಕ್ಕಾಗುವುದಿಲ್ಲ."

"ಒಂದೆರಡು ದಿವಸ ಅಷ್ಟೆ. ಆಮೇಲೆ ಎಲ್ಲ ಸರಿಹೋಗುವುದು. ಈವೊತ್ತು ನನ್ನ ಲಿವರ್‌ಬೇನೆ ಬಹಳ ಹೆಚ್ಚಿದೆ. ಸುಮ್ಮನೆ ತೊಂದರೆಪಡಿಸಬೇಡ, ಹೋಗು."

ಮಹಾವೀರನು ಗದ್ದರಿಸಿದ: "ಏಳು ಏಳು, ರಂಡೇ ಏಳು!"

ಅವನ ಬಾಯಿಂದ ಆ ಶಬ್ದವು ಹೊರಡುತ್ತಲೇ ಜೀವಾನಂದನು ಗರ್ಜಿಸಿದ: "ಎಚ್ಚರ, ಹಂದಿಮಗನೆ. ಮನುಷ್ಯರಂತೆ ಮಾತಾಡು. ಇನ್ನು ಮೇಲೆ ನನ್ನ ಅಪ್ಪಣೆಯಿಲ್ಲದೆ ಯಾವ ಹೆಂಗುಸನ್ನಾದರೂ ಹಿಡಿದುಕೊಂಡು ಬಂದರೆ ನಿನಗೆ ಗುಂಡುಹಾಕುತ್ತೇನೆ." ಮಾತನಾಡುತ್ತಾಡುತ್ತ ಅವನು ದಿಂಬನ್ನು ಹೊಟ್ಟೆಯ ಬುಡಕ್ಕಿಟ್ಟುಕೊಂಡು ಬೋರಲಾಗಿ ಮಲಗಿದ. ಮಾತನಾಡುತ್ತಿದ್ದಾಗ ಅವನಿಗೆ ವೇದನೆಯಾಗುತ್ತಿತ್ತು. ಹಾಗೆಯೇ ವಿಹ್ವಲ ಸ್ವರದಲ್ಲಿ ಮಾತನಾಡಿದ: "ಈವೊತ್ತಿನ ಮಟ್ಟಿಗೆ ಇವಳನ್ನು ಕೋಣೆಯೊಳಗೆ ಸೆರೆ ಹಾಕು.—ನಾಳೆ ನಿನ್ನ ಸತೀತ್ವದ ಪರೀಕ್ಷೆಯಾಗುವುದು. ಹೋಗು ಹೋಗು.—ತಕ್ಕೊಂಡು ನಡೆ ಇವಳನ್ನು ನನ್ನೆದುರಿನಿಂದ."

"ನಡೆಯಿರಿ!" ವಿನಯದಿಂದ ಮಹಾವೀರನೆಂದ.

ಷೋಡಶಿ ಮರುಮಾತಾಡದೆ ಎದ್ದು ನಿಂತಳು. ಅಪ್ಪಣೆಯ ಮೇರೆಗೆ ಎದುರಿನ ಕತ್ತಲೆ ಕೋಣೆಯೊಳಗೆ ಅವಳು ಹೋಗುತ್ತಲಿದ್ದಳು. ಅಷ್ಟರಲ್ಲಿ ಅವಳನ್ನು ಹೆಸರುಗೊಂಡು ಕೂಗಿ ಜೀವಾನಂದನೆಂದ: "ಸ್ವಲ್ಪ ತಡೆ. ನಿನಗೆ ಓದಲಿಕ್ಕೆ ಬರುತ್ತದಲ್ಲವೆ?"

"ಬರುತ್ತದೆ" ಷೋಡಶಿ ಮೆಲ್ಲನುಸುರಿದಳು.

"ಹಾಗಾದರೆ ಒಂದು ಕೆಲಸ ಮಾಡು. ಈ ಪೆಟ್ಟಗೆಯಿದೆಯಲ್ಲ, ಅದರೊಳಗೊಂದು ಸಣ್ಣ ಕಾಗದದ ಪೆಟ್ಟಗೆಯಿದೆ. ಅದರಲ್ಲಿ ಸಣ್ಣದೊಡ್ಡ ಸೀಸೆಗಳಿವೆ. ಒಂದರಮೇಲೆ ಬಂಗಾಳಿಯಲ್ಲಿ 'ಮಾರ್ಫಿಯಾ' ಎಂದು ಬರೆದಿದೆ ನೋಡು. ಅದರೊಳಗಿನ ಸ್ವಲ್ಪ ಔಷಧ ಕೊಟ್ಟು ಹೋಗು. ಆದರೆ

ಒಳ್ಳೇ ಜತನದಿಂದ ಆಂ. ಭಯಯಂಕ ವಿಷ ಅದು. ಮಹಾವೀರ, ಅವಳಿಗೆ ದೀಪ ಹಿಡಿ."

ದೀಪದ ಬೆಳಕಿನಲ್ಲಿ ನಡುಗುವ ಕೈಯಿಂದ ಪೆಟ್ಟಿಗೆಯನ್ನು ತೆರೆದು, ಸೀಸೆಯನ್ನು ಹೊರಕ್ಕೆ ತೆಗೆದು, ಅಂಜುತ್ತಂಜುತ್ತ ಷೋಡಶಿ ಕೇಳಿದಳು: "ಇದರೊಳಗಿನದು ಎಷ್ಟು ಕೊಡಲಿ?"

ಹೊಟ್ಟೆಯೊಳಗಿನ ಭಯಂಕರ ವೇದನೆಯನ್ನು ಸೈರಿಸಿಕೊಂಡು ಜೀವಾನಂದನು ಹೇಳಿದ: "ಹೇಳಿದೆನಲ್ಲ, ಸ್ವ-ಲ್ಪ ಕೊಡು. ನನಗೆ ಹೇಳಲಿಕ್ಕಾಗುವುದಿಲ್ಲ. ನನ್ನ ಕೈ ನನ್ನ ಅಂಕೆಯಲ್ಲಿಲ್ಲ. ಕಣ್ಣೂ ವಶದಲ್ಲಿಲ್ಲ. ಅಳತೆಯ ಸಣ್ಣ ಕಾಜಿನ ಗ್ಲಾಸು ಇದೆ; ಅದರಲ್ಲಿ ಅರ್ಧಕ್ಕಿಂತಲೂ ಕಡಮೆ ಕೊಡು. ಕೊಂಚವೇ ಹೆಚ್ಚು ಕೊಟ್ಟರೆ ತೀರಿತು—ನಿನ್ನ ಚಂಡಿದೇವಿಯೆ ಅಪ್ಪ ಬಂದರೂ ನನ್ನನ್ನು ಹೆಚ್ಚರಿಸಲಾರ!"

ಷೋಡಶಿ ಅಳತೆಯ ಸೀಸೆಯನ್ನು ಹುಡುಕಿ ತೆಗೆದಳು. ಔಷಧವನ್ನು ಅದಕ್ಕೆ ಹಾಕುವಾಗ ಅವಳ ಕೈ ನಡುಗಿದವು. ಅವನು ಹೇಳಿದಂತೆ ಮಹಾ ಪ್ರಯಾಸದಿಂದ ಜತನದಿಂದ ಔಷಧವನ್ನು ಹಾಕಿ ಅವನ ಹತ್ತಿರ ತೆಗೆದುಕೊಂಡು ಹೋದಳು. ಜೀವಾನಂದನು ಕೊಂಚವೂ ಯೋಚನೆಯಿಲ್ಲದೆ ಆ ವಿಷವನ್ನು ಇಸಿದುಕೊಂಡು ಒಮ್ಮೆಲೆ ಗುಟುಕುರಿಸಿಬಿಟ್ಟ. ಪರೀಕ್ಷಿಸಿ ನೋಡಲಿಲ್ಲ, ಪ್ರಶ್ನಿಸಲಿಲ್ಲ, ಸುಮ್ಮನೆ ಕಣ್ಣೆರೆದು ಕೂಡ ನೋಡಲಿಲ್ಲ.

## ೪

ಷೋಡಶಿಯನ್ನು ಕತ್ತಲೆ ಕೋಣೆಯೊಳಗೆ ಹಾಕಿ ಬಾಗಿಲಿಕ್ಕಿ ಚಿಲಕ ಹಾಕಿಕೊಂಡು ಮಹಾವೀರನು ಹೋರಟುಹೋದ. ಬಾಗಿಲಿಗೆ ಒಳಚಿಲಕ ವಿರಲಿಲ್ಲ. ಅವಳು ಮುಚ್ಚಿದ ಬಾಗಿಲಿಗೆ ಆತು ಎಚ್ಚರದಿಂದ ಕುಳಿತುಕೊಂಡಳು. ಅವಳ ದೇಹ ಮನಗಳೆರಡೂ ದಣಿವಿನ ಕೊನೆಯ ಎಲ್ಲೆಗೆ ಮುಟ್ಟಿದ್ದವು. ರಾತ್ರಿಯ ಹೊತ್ತು ಯಾವ ವಿಪತ್ತಿನ ಸಂಭವವಿಲ್ಲದಿದ್ದರೂ ನಿದ್ದೆಮಾಡುವುದು ಅವಳಿಗೆ ಭೀತಿಪ್ರದವಾಗಿತ್ತು. ಕೊಂಚವೂ ಅಲಕ್ಷಿಸುವುದು ಇಷ್ಟವಾಗಿರಲಿಲ್ಲ.

ಇಡೀ ರಾತ್ರಿ ಹೇಗೂ ಹೋದೀತು: ಆದರೆ ನಾಳೆ ತನ್ನ ಸತೀತ್ವದ ಪರೀಕ್ಷೆಯಾಗುವುದೆಂದು ಅವಳು ಕಿವಿಯಾರೆ ಕೇಳಿದ್ದಳು. ಆ ಸಂಕಟದಿಂದ ಪಾರಾಗುವುದಕ್ಕೆ ಯಾವ ಉಪಾಯವೂ ಅವಳಿಗೆ ಕಾಣುತ್ತಿರಲಿಲ್ಲ.

ತಂದೆಯನ್ನು ಅವಲಂಬಿಸಿರುವುದು ಶಕ್ಯವಿರಲಿಲ್ಲ. ಅವನ ನೆನಪಾಗುತ್ತಲೆ ಷೋಡಶಿಗೆ ಮರಣಪ್ರಾಯ ದುಃಖವಾಯಿತು. ಅವನನ್ನು ಅವಳು ಚೆನ್ನಾಗಿ ಬಲ್ಲಳು. ಅವನು ಪುಕ್ಕಸಲ್ಲದೆ ಅಷ್ಟೇ ನೀಚ. ಮಧ್ಯರಾತ್ರಿಯಲ್ಲಿ ಮನೆಗೆ ತಿರುಗಿ ಬಂದ ಬಳಿಕ ಈ ಸುದ್ದಿ ತಿಳಿದರೂ ಅವನು ಏನನ್ನೂ ಮಾಡಲಾರ. ಊರೊಳಗೆ ಬೊಬ್ಬಾಟವಾಗಬಾರದೆಂದು ಆದಷ್ಟು ಮುಚ್ಚಿಕೊಳ್ಳುವುದಕ್ಕೇ ಪ್ರಯತ್ನಿಸುವವ. ಒಂದಿಲ್ಲೊಂದು ದಿನ ಜಮೀದಾರನು ಷೋಡಶಿಯನ್ನು ಬಿಟ್ಟೇ ಬಿಡುತ್ತಾನೆ, ಸುಮ್ಮನೆ ವಿರೋಧವನ್ನು ಬೆಳೆಸಿದರೆ ದತ್ತಿ ಭೂಮಿಗಳು ಕೈ ಬಿಟ್ಟು ಹೋಗಿ ಲಾಭಕ್ಕಿಂತ ಹಾನಿಯೇ ಹೆಚ್ಚಾಗುವುದು ಎಂದು ಯೋಚಿಸಿ ಅವನು ಸ್ವಸ್ಥನಾಗಿ ಕುಳಿತುಕೊಳ್ಳುವವ. ಧನಿಗೆ ಸಲ್ಲಿಸುವ ಕಾಣಿಕೆಯ ವಿಚಾರದಲ್ಲಿ ತಾರಾದಾಸನ ತೀಕ್ಷ್ಣದೃಷ್ಟಿ ಎಲ್ಲಿಯವರೆಗೆ ಹರಿಯಬಹುದೆಂಬುದು ಷೋಡಶಿಗೆ ಸ್ಪಷ್ಟವಾಗಿ ಕಾಣುತ್ತಲಿತ್ತು.

ಅಲ್ಲದೆ ಇಂತಹ ಅಡಮುಟ್ಟ ಜಮೀದಾರನ ವಿರುದ್ಧವಾಗಿ ಅವನು ಮಾಡುವುದಾದರೂ ಏನು? ಆರೇಳು ಹರದಾರಿಗಳೊಳಗೆ ಠಾಣ್ಯವೂ ಇಲ್ಲ, ಚಾವಡಿಯೂ ಇಲ್ಲ. ಪೋಲೀಸರ ಕಡೆ ದೂರು ಒಯ್ಯಬೇಕೆಂದರೆ, ತಾರಾದಾಸನಿಗೆ ಜನಬಲ ಧನಬಲ ಯಾವುದೂ ಇರಲಿಲ್ಲ. ಅತ್ಯಾಚಾರವು ಎಂತಹ ದೊಡ್ಡದೇ ಇರಲಿ, ಈ ಪ್ರಬಲ ಶಕ್ತಿಯ ಎದರು ತಲೆಬಗ್ಗಿಸಿಕೊಂಡಿರದೆ ಗತ್ಯಂತರವಿಲ್ಲವೆಂಬುದು ಷೋಡಶಿಗೆ ನಿಚ್ಚಳವಾಗಿ ಗೋಚರಿಸುತ್ತಿತ್ತು.

ಈ ಎಲ್ಲ ಸಂಕಟಗಳಲ್ಲಿ ಇನ್ನೊಂದು ಯೋಚನೆ ಅವಳ ಮನಸ್ಸಿನಲ್ಲಿ ಮತ್ತೆ ಮತ್ತೆ ಬರುತ್ತಲಿದ್ದಿತು—ತಾನು ಚಿಕ್ಕಂದಿನಿಂದಲೂ ಮನಃಪೂರ್ವಕವಾಗಿ ಪೂಜಿಸುತ್ತ ಬಂದಿದ್ದ ಚಂಡೀಮಾತೆಯದು!—ಆದರೆ ಪಕ್ಕದ ಕೋಣೆಯಲ್ಲಿ ಮಲಗಿದ್ದ ಮನುಷ್ಯನ ಗೊರಕೆ ಷೋಡಶಿಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅವನಿಗೆ ಧರ್ಮ ಅಧರ್ಮ, ಒಳ್ಳೆಯದು ಕೆಟ್ಟದು, ತನ್ನದು ಪರರದು ಎಂಬುದಾವುದೂ ಲೆಕ್ಕದಲ್ಲಿಲ್ಲ. ಸ್ತ್ರೀ ಜಾತಿಯ ಕಣ್ಣೀರು ಅವನ ಹೃದಯವನ್ನು ಕರಗಿಸಲಾರದು. ರಮಣಿಯರ ರೂಪ ಯೌವನಗಳಲ್ಲಿಯೂ ಅವನಿಗೆ

ಮೋಹವಿಲ್ಲ, ಆಕರ್ಷಣವಿಲ್ಲ. ಗಂಡ ಮಕ್ಕಳು ಇದ್ದ ನಾರಿಯರ ಸತೀತ್ವ ವನ್ನು ನಿರರ್ಥಕವಾಗಿ ಹಾಳುಮಾಡಲು ಅವನು ಹಿಂಜರಿದವನಲ್ಲ. ಅವರ ನೆತ್ತರಲ್ಲಿ ಅಡಿಯಿಟ್ಟು ನಡೆಯುವುದಕ್ಕೂ ಅವನು ಹಿಂದು ಮುಂದು ನೋಡಿದವನಲ್ಲ. ತನ್ನ ಪ್ರಾಣವನ್ನು ಕೂಡ ಎರಡನೆಯವರ ಕೈಯಲ್ಲಿ ಕೊಟ್ಟು, ಘೋರ ವಿಷವನ್ನು ನಿಸ್ಸಂಕೋಚವಾಗಿ ಕಣ್ಣುಮುಚ್ಚಿಕೊಂಡು ಕುಡಿದುಬಿಟ್ಟ, ಸ್ವಲ್ಪವೂ ಅನುಮಾನಿಸಲಿಲ್ಲ. ಇಂಥ ಅಶ್ರದ್ಧ-ಅನಾಸಕ್ತಿಗಳ ಮೂರ್ತಿಯಾದ ಬಂಡೆಯನ್ನು ದೂರ ಸರಿಸಿ, ತಾಯಿ ಚಂಡಿಯೇ ತನಗೆ ರಕ್ಷಣೆಯ ಹಾದಿಯನ್ನು ತೋರಿಸಿದರೆ--!

ಎತ್ತನೋಡಿದತ್ತ ಕತ್ತಲೆಯ ಹೊರತೇನೂ ಷೋಡಶಿಗೆ ಕಾಣಿಸುತ್ತಿರ ಲಿಲ್ಲ. ಬೆಳಕಿನ ಸಣ್ಣ ಕಿರಣ ಕೂಡ ಅವಳ ಕಣ್ಣೆದುರಿಗೆ ಬರುತ್ತಿರಲಿಲ್ಲ. ಹೀಗೆ ಪೂರಾ ನಿರಾಧಾರಳಾದುದರಿಂದ ಅವಳು ಕಲ್ಪನಾರಾಜ್ಯದಲ್ಲಿ ಗುಡಿ ಯೊಳಗಿನ ವ್ಯವಹಾರಗಳ ಜಾಲವನ್ನು ಹೆಣೆಯುತ್ತ ಕುಳಿತಳು.

ಪ್ರಾತಃಕಾಲದ ಸುಮಾರಿಗೆ ಅವಳ ಕಣ್ಣು ಕೊಂಚ ಮುಚ್ಚಿದವು. ಬೆನ್ನಿಗೆ ಪೆಟ್ಟು ಬಿದ್ದಂತಾಗಲು ಥಟ್ಟನೆ ಎಚ್ಚರಾಗಿ ಅವಳು ಎದ್ದು ಕುಳಿ ತಳು. ಆಗಲೇ ಸೂರ್ಯಪ್ರಕಾಶವು ಕಿಟಕಿಯಿಂದ ಒಳಗೆ ಪ್ರವೇಶಿಸಿತ್ತು.

"ಹೊರಗೆ ಬರ್‍ರಿ. ನಾನು ಏಕಕಾಡಿ" ಹೊರಗಿನಿಂದ ಬಾಗಿಲನ್ನು ತಳ್ಳುತ್ತಿದ್ದವನು ನುಡಿದ.

ಬಟ್ಟೆಗಳನ್ನು ನೇವರಿಸಿಕೊಂಡು ಷೋಡಶಿ ಎದ್ದು ನಿಂತಳು. ಬಾಗಿ ಲನ್ನು ತೆರೆದು ನೋಡಿದಳು. ಎದುರಿನಲ್ಲಿ ಕಳೆದ ರಾತ್ರಿಯಂತೆಯೇ ಜೀವಾ ನಂದನು ತನ್ನ ಹಾಸಿಗೆಯ ಮೇಲೆ ತಕ್ಕೆಗಾತು ಕುಳಿತುಕೊಂಡಿದ್ದ. ರಾತ್ರಿ ಮುಖಾಳವಾದ ದೀಪದ ಬೆಳಕಿನಲ್ಲಿ ಅವನ ಮುಖಮುದ್ರೆ ಅವಳಿಗೆ ಸರಿ ಯಾಗಿ ಕಂಡಿರಲಿಲ್ಲ. ಈಗ ನೋಡಿದಳು. ಅತ್ಯಾಚಾರದ ಎಲ್ಲ ಬಗೆಯ ಪರಿಣಾಮಗಳೂ ಅವನ ಶರೀರದಲ್ಲಿ ಎಲ್ಲೆಲ್ಲಿಯೂ ಕಂಡುಬಂದವು. ಅವನ ವಯಸ್ಸನ್ನು ಕಲ್ಪಿಸಿಕೊಳ್ಳುವುದು ಅವಳಿಗೆ ಅಸಾಧ್ಯವಾಯಿತು. ನಾಲ್ವ ತ್ತಿರಬಹುದು, ಒಂದು ವೇಳೆ ಹೆಚ್ಚೂ ಇರಬಹುದು. ಹಣೆಯ ಮೇಲಿನ ಎರಡೂ ಬದಿಯ ಕೂದಲು ಕೊಂಚ ಕೊಂಚ ಹಣ್ಣಾಗಿವೆ. ಹರವಾದ ಹಣೆಯಲ್ಲಿ ಗೆರೆಗಳ ಜಾಳಿಗೆ. ಅದರ ಮೇಲೆ ಅಲ್ಲಲ್ಲಿ ಕಪ್ಪು ಕಲೆಗಳು.

ಅವನ ದೃಷ್ಟಿ ಕ್ಷಯರೋಗಿಗಳಂತೆ ಅಸ್ವಾಭಾವಿಕ ತೀಕ್ಷ್ಣವಾಗಿ ಕಾಣು ತ್ತಿವೆ. ಆ ಕಣ್ಣುಗಳ ಕೆಳಗೆ ಉದ್ದ ಮೂಗು ಎದ್ದು ನಿಂತಿದೆ. ಮೊದಲೇ ಹಂಚುವಡೆದಿದ್ದ ಅವನ ಮುಖದಲ್ಲಿ ಹೊಟ್ಟೆಯೊಳಗಿನ ವೇದನೆಯ ಕಪ್ಪು-ಕಾಡಿಗೆ ದಟ್ಟವಾಗಿ ಹರಡಿದೆ.

"ಎಷ್ಟೂ ಹೆದರಬೇಡ, ಈಕಡೆ ಬಾ" ಕೈಸನ್ನೆ ಮಾಡುತ್ತ ತೀಕ್ಷ್ಣ ಸ್ವರದಿಂದ ಜೀವಾನಂದನೆಂದ.

ಅಂಜುತ್ತಂಜುತ್ತ ಕೆಲಹೆಜ್ಜೆ ಮುಂದೆ ಹೋಗಿ ಷೋಡಶಿ ದೃಷ್ಟಿ ಯನ್ನು ಕೆಳಗಿಟ್ಟು ನಿಂತುಕೊಂಡಳು. ಜೀವಾನಂದನು ಹೇಳಿದ: "ಪೋಲಿ ಸರು ಮನೆಯನ್ನು ಮುತ್ತಿದ್ದಾರೆ. ಮ್ಯಾಜಿಸ್ಟ್ರೇಟರು ಒಳಂಗಳದೊಳಗೇ ಬಂದಿರುವರಂತೆ. ಇಷ್ಟರಲ್ಲಿಯೇ ಅವರು ಮನೆಯೊಳಗೆ ಬಂದು ಬಿಡ ಬಹುದು—"

ಷೋಡಶಿಗೆ ಮನಸಿನೊಳಗೇ ಭಯವಾಯಿತು. ಅವಳು ಮಾತ ನಾಡಲಿಲ್ಲ. ಜೀವಾನಂದನು ಹೇಳುತ್ತಲಿದ್ದ: "ಜಿಲ್ಲೆಯ ಮ್ಯಾಜಿಸ್ಟ್ರೇಟರು ಸಂಚಾರಕ್ಕೆ ಹೊರಟಿದ್ದರು. ಹರದಾರಿ ದೂರದಲ್ಲಿ ಅವರು ಬೀಡು ಬಿಟ್ಟಿ ದ್ದಾರೆ. ನಿನ್ನೆ ರಾತ್ರಿ ನಿಮ್ಮಪ್ಪ ಹೋಗಿ ಅವರಿಗೆ ಎಲ್ಲವನ್ನೂ ಹೇಳಿಬಿಟ್ಟ. ಅಷ್ಟಕ್ಕೇ ಅವರು ಬರುತ್ತಿರಲಿಲ್ಲ. ಈ ಕೆ ಸಾಹೇಬರಿಗೆ ನನ್ನ ಮೇಲೆ ಬಹಳ ದಿವಸದ ಕುನಸು ಇದೆ. ಹೋದ ವರ್ಷ ನನ್ನನ್ನು ಹಿಡಿಯುವುದ ಕ್ಕಾಗಿ ಎರಡು ಸಲ ಬಲೆ ಬೀಸಿದ್ದರು; ಸಾಧಿಸಿರಲಿಲ್ಲ. ಈಗ ಅವರು ನನ್ನನ್ನು ಹಿಡಿದಿದ್ದಾರೆ—" ಎಂದು ಅವನು ಸ್ವಲ್ಪ ನಕ್ಕ.

ಮೋರೆ ತಿರುವಿಕೊಂಡು ಏಕಕೌಡಿ ಅಲ್ಲಿಯೇ ನಿಂತಿದ್ದ. "ಧನಿ ಯರೇ, ಈಗ ನನ್ನ ಪುಣ್ಯ ಕೂಡ ತೀರಿದಂತೆ ಕಾಣುತ್ತದೆ" ಎಂದು ಅವ ನೆಂದ.

ಜೀವಾನಂದನು ತಲೆಹಾಕಿ, "ಶಕ್ಯವಿದೆ" ಎಂದು ಷೋಡಶಿಗೆ ನುಡಿದ: "ಸೇಡು ತೀರಿಸಿಕೊಳ್ಳುವುದಕ್ಕೆ ಇದೇ ಹೊತ್ತು. ಈಗ ನನ್ನನ್ನು ಸೆರೆಮನೆಗೆ ಅಟ್ಟುವುದೂ ಸಾಧ್ಯವಿದೆ!"

ಮೊಗವೆತ್ತಿ ನೋಡಿದಳು ಷೋಡಶಿ; ಜೀವಾನಂದನು ನಟ್ಟ ನೋಟ ದಿಂದ ಅವಳನ್ನೇ ನೋಡುತ್ತಿದ್ದ. ತಿರುಗಿ ತನ್ನ ನೋಟವನ್ನು ಕೆಳಗಿಳಿಸಿ

ಶಾಂತವಾಗಿ ಅವಳು ಕೇಳಿದಳು: "ಇಷ್ಟಕ್ಕೇ ಸೆರೆಮನೆ ಸೇರಬೇಕಾಗುವುದೆ?"

ಜೀವಾನಂದನೆಂದ: "ಕಾಯದೆ! ಅಲ್ಲದೆ ಕೆ ಸಾಹೇಬರ ಕೈಯೊಳಗೆ ಸಿಕ್ಕಿದ್ದೇನೆ, ಬಹಾದೂರಬಾಗಿನ ಹೋಟೆಲಿನಲ್ಲಿದ್ದಾಗ ಇವರ ಕೈಯೊಳಗೆ ಸಿಕ್ಕುಬಿದ್ದು ಇಪ್ಪತ್ತು ದಿನ ಸೆರೆಮನೆಯಲ್ಲಿ ಬಿದ್ದಿದ್ದೆ. ಮಗ ಜಾಮೀನು ತೆಗೆದುಕೊಳ್ಳಲಿಲ್ಲ – ಅಲ್ಲದೆ ಜಾಮೀನು ಕೊಡಲಿಕ್ಕೆ ಅಲ್ಲಿ ಯಾರಿದ್ದರು?"

"ಬಹಾದೂರಬಾಗಿನ ಹೊಟೆಲಿನಲ್ಲಿ ನೀವಿದ್ದಿರೇನು?" ಉತ್ಸುಕತೆಯಿಂದ ಷೋಡಶಿ ಕೇಳಿದಳು.

"ಹೌದು. ಒಂದು ಪ್ರೇಮಜಾಲದಲ್ಲಿ ಸಿಲುಕಿದ್ದೆ ಆಗ ನಾನು. ಆ ಮಗ ಘೋಷಬಾಬು ಕೇಳಲಿಲ್ಲ; ಪೋಲಿಸರಿಗೆ ಒಪ್ಪಿಸಿದ. ಹೋಗಲಿ ಬಿಡು – ಅದೊಂದು ರಾಮಾಯಣವೇ. ಯಾರೂ ಮರೆತಿಲ್ಲ, ಎಲ್ಲರೂ ನನ್ನನ್ನು ಚೆನ್ನಾಗಿಯೇ ನೆನಪಿಟ್ಟಿದ್ದಾರೆ. ಈವೊತ್ತೂ ಓಡಿಹೋಗುತ್ತಿದ್ದೆ. ಆದರೆ ಬೇನೆಯಿಂದ ಬಳಲಿ ಬೆಂಡಾಗಿದ್ದೇನೆ. ಮಿಸುಕಾಡಲೂ ತ್ರಾಣವಿಲ್ಲ."

"ನಿನ್ನೆಯ ವೇದನೆ ಇನ್ನೂ ನಿಂತಿಲ್ಲವೆ?" ಷೋಡಶಿ ಮೆಲ್ಲನೆ ಪ್ರಶ್ನಿಸಿದಳು.

"ಇಲ್ಲ, ಭಯಂಕರ ಹೆಚ್ಚಾಗಿದೆ. ಇಷ್ಟು ಥಟ್ಟನೆ ಕಡಿಮೆಯಾಗುವ ಬೇನೆಯಲ್ಲ ಇದು."

ಷೋಡಶಿ ಕ್ಷಣಹೊತ್ತು ಸ್ತಬ್ಧವಾಗಿದ್ದು ಬಳಿಕೆಂದಳು: "ಹಾಗಾದರೆ ನಾನೇನು ಮಾಡಬೇಕು?"

"ನೀನು ಇಷ್ಟೇ ಹೇಳಬೇಕು – 'ನಾನಿಲ್ಲಿಗೆ ಸ್ವೇಚ್ಛೆಯಿಂದಲೇ ಇಲ್ಲಿ ಉಳಿದುಕೊಂಡೆ.' ಇಷ್ಟು ಹೇಳಿದರೆ ಎಲ್ಲಾ ದತ್ತಿಭೂಮಿಗಳನ್ನು ಬಿಟ್ಟು ಬಿಡುತ್ತೇನೆ, ನಗದು ಸಾವಿರ ರೂಪಾಯಿಗಳನ್ನು ಕೊಡುತ್ತೇನೆ, ಕಾಣಿಕೆಯ ಮಾತನ್ನೇ ತೆಗೆಯುವುದಿಲ್ಲ."

ಏಕಕೌಡಿ ಒಡೆಯನ ಮಾತನ್ನು ಪಡಿನುಡಿಯುವುದಕ್ಕಾಗಿ ಹಾತೊರೆದು, ಷೋಡಶಿಯ ಮುಖವನ್ನು ನೋಡಿದವನೇ ಸುಮ್ಮನಾಗಿ ಬಿಟ್ಟ. ಜೀವಾನಂದನನ್ನು ದಿಟ್ಟಿಸುತ್ತ ಷೋಡಶಿಯೆಂದಳು: "ನಾನು ಹೀಗೆ ಒಪ್ಪಿಕೊಳ್ಳುವುದೆಂದರೆ ಏನೆಂಬುದು ನಿಮಗೆ ತಿಳಿಯುವುದಷ್ಟೆ?

ಅಷ್ಟಾದ ಬಳಿಕ, ಭೂಮಿ ಕಾಣಿ ಹಣಕಾಸುಗಳನ್ನು ತೆಗೆದುಕೊಂಡರೆ ನಷ್ಟವಾದ ಮಾನವು ತುಂಬಿಕೊಳ್ಳುವುದೆಂದು ನಿನಗೆನಿಸುವುದೆ?"

ಜೀವಾನಂದನ ಮುಖವು ಒಮ್ಮೆಲೆ ಬಿಳುಪಿಟ್ಟಿತು. ಅವನ ಕಣ್ಣುಗಳಲ್ಲಿ ಕಳೆದ ರಾತ್ರಿಯಂತೆಯೇ ಸ್ನಿಗ್ಧದೃಷ್ಟಿ ಎಲ್ಲಿಂದಲೋ ಮೆಲ್ಲಗೆ ಬಂದು ನಿಂತಿತು. ಕೆಲಹೊತ್ತು ಅವನು ಒಂದು ಶಬ್ದವನ್ನೂ ಉಚ್ಚರಿಸಲಿಲ್ಲ. ಆ ಬಳಿಕ ನಾವಕಾಶವಾಗಿ ತಲೆಯಾಡಿಸುತ್ತ ಮಾತನಾಡಿದ: "ಅದು ನಿಜ, ಷೋಡಶಿ ಅದು ನಿಜ. ಈವರೆಗೆ ನೀನು ಪಾಪ ಮಾಡಿಲ್ಲ. ಇನ್ನು ಮುಂದೆಯೂ ಮಾಡುವುದಿಲ್ಲ! ಅದು ನಿಜ!"

ನಸುನಕ್ಕು ಮತ್ತೆ ಅವನೆಂದ: "ಮಾನವನ್ನು ಹಣಕ್ಕೆ ಮಾರಲಾಗುವುದಿಲ್ಲವೆಂಬುದನ್ನು ಈ ಕ್ಷಣ ಮರೆತಿದ್ದೆ. ಇರಲಿ ಬಿಡು. ಸತ್ಯವಿದ್ದದ್ದು ಹೇಳಿ ಬಿಡು. ಇನ್ನೂ ಮೇಲೆ ಜಮೀದಾರನಿಂದ ನಿನಗೆ ಯಾವ ಕಾಟವೂ ಆಗಲಾರದು."

ಕನಿಕರಪಟ್ಟು ಏಕಕೌಡಿ ಏನೋ ಹೇಳಲಿಕ್ಕೆ ಮತ್ತೆ ಹಾತೊರೆದ. ಅಷ್ಟರಲ್ಲಿ ಯಾರೋ ಬಾಗಿಲನ್ನು ತಟ್ಟಿದರು. ಅವನ ಬಾಯೊಳಗಿನ ಮಾತು ಬಾಯೊಳಗೇ ಉಳಿಯಿತು. ಅವನ ಮೋರೆ ಕಳೆಗುಂದಿತು.

"ಚಿಲಕ ಹಾಕಿಲ್ಲ, ತೆರೆದುಕೊಂಡು ಒಳಗೆ ಬರ್‍ರಿ" ಜೀವಾನಂದನೆಂದ.

ಬಾಗಿಲು ತೆರೆಯಿತು. ಎದುರಿಗೆ ಸಣ್ಣ ದೊಡ್ಡ ಪೋಲಿಸ್ ಅಧಿಕಾರಿಗಳು ಕಣ್ಣಿಗೆ ಬಿದ್ದರು. ಎಲ್ಲರ ಮುಂದುಗಡೆ ಜಿಲ್ಲಾ ಮ್ಯಾಜಿಸ್ಟ್ರೇಟರು. ಅವರ ಹಿಂದುಗಡೆಯಿಂದ ತಾರಾದಾಸನು ಮೆಲ್ಲಗೆ ಹಣಿಕಿ ನೋಡುತ್ತಿದ್ದ. ಅವನು ಒಮ್ಮೆಲೆ ಒಳಗೆ ಬಂದು ಅಳುತ್ತಳುತ್ತ ನುಡಿದ: "ಧರ್ಮಾವತಾರರೇ, ಈಕೆ ನನ್ನ ಮಗಳು ಮಹಾಶಯ. ಚಂಡೀದೇವಿಯ ಭೈರವಿ. ಈವೊತ್ತು ನೀವು ದಯಮಾಡದಿದ್ದರೆ ದುಡ್ಡಿಗಾಗಿ ಇವರು ಇವಳ ಕೊಲೆ ಮಾಡುತ್ತಿದ್ದರು, ಧರ್ಮಾವತಾರ!"

ಷೋಡಶಿಯನ್ನು ಅಡಿಯಿಂದ ಮುಡಿಯವರೆಗೂ ನೋಡಿ ಶುದ್ಧ ಬಂಗಾಲಿಯಲ್ಲಿ ಕೆ ಸಾಹೇಬರು ಪ್ರಶ್ನಿಸಿದರು: "ನಿನ್ನ ಹೆಸರು ಷೋಡಶಿಯೇನು? ನಿಮ್ಮ ಮನೆಯಿಂದ ನಿನ್ನನ್ನು ಹಿಡಿತರಿಸಿ ಇಲ್ಲಿ ಇವರು ಸೆರೆ ಇಟ್ಟಿದ್ದರೇನು?"

"ಇಲ್ಲ, ನಾನು ಸ್ವೇಚ್ಛೆಯಿಂದಲೇ ಬಂದೆ. ನನ್ನ ಮೈಗೆ ಯಾರೂ ಕೈಹಚ್ಚಲಿಲ್ಲ."

ಚೀರಾಡುತ್ತ ಚಕ್ರವರ್ತಿ ಹೇಳಿದ: "ಇಲ್ಲ ಜೀಯಾ, ಇವಳು ಸುಳ್ಳು ಹೇಳುತ್ತಾಳೆ. ಇಡೀ ಊರೇ ಸಾಕ್ಷಿ. ನನ್ನ ಮಗಳು ಅಡಿಗೆ ಮಾಡುತ್ತಿದ್ದಳು. ಎಂಟು ಜನ ಪೇದೆಗಳು ಬಂದು, ಇವಳನ್ನು ಹೊಡೆಯುತ್ತ ಎಳೆದುಕೊಂಡು ಬಂದರು."

ಜೀವಾನಂದನ ಕಡೆಗೊಮ್ಮೆ ನೋಟವನ್ನು ಬೀರಿ ಮ್ಯಾಜಿಸ್ಟ್ರೇಟರು ಷೋಡಶಿಗೆಂದರು: "ಏನೇನೂ ಹೆದರಬೇಡ. ಇದ್ದದ್ದನ್ನು ಹೇಳು. ನಿನ್ನನ್ನು ಮನೆಯಿಂದ ಹಿಡಿದು ಎಳೆದುಕೊಂಡು ಬಂದರೇನು?"

"ಇಲ್ಲ, ನ್ನಾನೇ ಬಂದೆ."

"ಏಕೆ ಬಂದೆ?"

"ಕೆಲಸವಿತ್ತು!"

"ಇಡೀ ರಾತ್ರಿ ಕೆಲಸವೆ?" ಸಾಹೇಬರು ಮುಗುಳ್ನಗುತ್ತ ಪ್ರಶ್ನಿಸಿದರು.

"ಹೌದು, ಇಡೀ ರಾತ್ರಿ ಇಲ್ಲಿ ನನ್ನ ಕೆಲಸವಿತ್ತು. ಒಮ್ಮೆಲೆ ಇವರ ಪ್ರಕೃತಿ ಕೆಟ್ಟದ್ದರಿಂದ ಮನೆಗೆ ಹೋಗಲಿಕ್ಕಾಗಲಿಲ್ಲ." ಷೋಡಶಿ ಅತ್ಯಂತ ಶಾಂತವಾಗಿ ಉತ್ತರವಿತ್ತಳು.

ತಾರಾದಾಸನು ದೊಡ್ಡ ದನಿ ತೆಗೆದು ಒದರಾಡತೊಡಗಿದ: "ಇವಳನ್ನೇನು ಕೇಳುತ್ತೀರಿ ಮಹಾಶಯ, ಸುಳ್ಳು–ಸಂಪೂರ್ಣ ಸುಳ್ಳು–ಎಲ್ಲಾ ಕೃತಕ. ಕಲಿಸಿಕೊಟ್ಟದ್ದು."

ಅವನ ಮಾತಿನ ಕಡೆ ಲಕ್ಷ್ಯಕೊಡದೆ ಸಾಹೇಬರು ಕೆನ್ನೆಯೊಳಗೇ ನಕ್ಕರು. ಸಿಳ್ಳುಹಾಕುತ್ತ ಅವರು ಬಂದೂಕು ಪಿಸ್ತೂಲುಗಳನ್ನು ಸೂಕ್ಷ್ಮವಾಗಿ ನಿರುಕಿಸಿದರು. ಬಳಿಕ ಜೀವಾನಂದನನ್ನು ಕುರಿತು ಸಹಜವಾಗಿ ನುಡಿದರು: "ಈ ವಸ್ತುಗಳ ಲೈಸನ್ಸ್ ಇದ್ದೇ ಇರಬೇಕು ನಿಮ್ಮ ಕಡೆ!"

ಇಷ್ಟೆಂದು ಸಾಹೇಬರು ಮೆಲ್ಲಮೆಲ್ಲನೆ ಹೊರಬಿದ್ದರು.

ಹುಚ್ಚಿ?” ಎಂದು ನುಡಿದು ಶಿರೋಮಣಿ ಗಹಗಹಿಸಿ ನಕ್ಕು ಸುತ್ತಲೂ ನೋಡಿ ಸಭೆಯನ್ನು ಕಾಯಿಸಿದ.

ಅವನ ನಗೆಯ ಭರ ಕಡಿಮೆಯಾದ ಬಳಿಕ ಹೈಮವತಿ ಮಾತನಾಡಿದಳು. “ನೀವು ಸ್ವತಃ ಶಿರೋಮಣಿ ಇದ್ದೀರಿ, ಅಜ್ಜಯ್ಯ! ನೀವೇ ಗುಡಿಯೊಳಗೆ ನಿಂತುಕೊಂಡು ಸುಳ್ಳನ್ನು ಹರಡುತ್ತಿದ್ದೀರಿ. ಇವಳ ಕೈಯಿಂದ ಪೂಜೆ ಮಾಡಿಸಿದರೆ ಕಾರ್ಯಸಿದ್ಧಿಯಾಗುವುದಿಲ್ಲವೆಂದು ಹೇಳುವುದರಲ್ಲಿ ತಿಲಾಂಶವೂ ಸತ್ಯವಿಲ್ಲ.”

ಶಿರೋಮಣಿಗೆ ಚೆನ್ನಾಗಿ ಏಟು ಬಿದ್ದಂತಾಯಿತು. ರಾಯಮಹಾಶಯನು ಒಳಗೊಳಗೆ ಕ್ರುದ್ಧನಾಗಿದ್ದ. “ಇದು ನಿಜವಲ್ಲವೆಂದು ಯಾರು ಹೇಳುವರು ಹೈಮ? ಹೇಳು ನೋಡುವ” ನಿಷ್ಠುರ ಸ್ವರದಲ್ಲಿ ಅವನೆಂದ.

ಹೈಮವತಿ ನಸುನಕ್ಕು ನುಡಿದಳು. “ನಾನೇ ಹೇಳುತ್ತೇನೆ ಅಪ್ಪ, ಇದು ನಿಜವಲ್ಲ. ಹೀಗೆ ಮಾತನಾಡುವುದು ಒತ್ತಟ್ಟಿಗಿರಲಿ, ಇಂಥ ವಿಷಯ ನನ್ನ ಮನಸಿನೊಳಗೂ ಬರುವುದಿಲ್ಲ. ಇದೇ ಅದರ ಪ್ರಮಾಣ! ನಾನು ಅವಳ ಕೈಯಿಂದಲೇ ಪೂಜೆ ಮಾಡಿಸುವವಳು. ಅದರಿಂದ ನನ್ನ ಮಗನ ಕಲ್ಯಾಣವಾಗಲಿ, ಬೇಕಾದರೆ ಅಕಲ್ಯಾಣವಾಗಲಿ! ನೋಡತಿಯ ಕಡೆ ನೋಡಿ ಅವಳೆಂದಳು: “ನನ್ನನ್ನು ನೀನು ಗುರುತಿಸಿರಲಿಕ್ಕಿಲ್ಲ. ನನಗೆ ನಿನ್ನ ನೆನಪು ಮಾತ್ರ ನಿಚ್ಚಳವಾಗಿದೆ. ನಡೆ ಗುಡಿಯೊಳಗೆ ಸುಮ್ಮನೆ ಇಲ್ಲದ್ದು ಬೇಡ.” ಎಂದು ಅವಳು ಗುಡಿಯೊಳಗೆ ಹೋಗುವುದಕ್ಕೆ ಒಂದಡಿ ಮುಂದಿಟ್ಟಳು.

ಮಗಳಿಂದಲೇ ಅಪಮಾನವಾದುದಕ್ಕೆ ರಾಯಮಹಾಶಯನಿಗೆ ಬಲವಾದ ಆಘಾತವಾಯಿತು. ಅವನು ಮತ್ತನಂತೆ ಒಮ್ಮೆಲೆ ಮುಂಬರಿದು ಕೂಗಾಡತೊಡಗಿದ. “ಹೂ.. ಸಾಧ್ಯವಿಲ್ಲ. ನನ್ನ ಜೀವದಲ್ಲಿ ಜೀವ ಇರುವ ತನಕ ಇವಳನ್ನು ಗುಡಿಯೊಳಗೆ ಕಾಲಿಡಗೊಡುವುದಿಲ್ಲ. ತಾರಾದಾಸ, ಮುಂದಾಗು. ಹೇಳು ಇವಳ ತಾಯಿಯ ಕಥೆ; ಎಲ್ಲರೂ ಕೇಳಲಿ. ಇಂಥ ವಿಷಯ ಬಯಲಿಗೆಳೆಯಬಾರದೆಂದು ಕಾದಿದ್ದೆ. ಆದರಿನ್ನು ವಿಧಿಯಿಲ್ಲ.”

ಹಾಗೆಯೆ ಮುಂಬಂದು ಶಿರೋಮಣಿಯೆಂದ: “ಬೇಡ ತಾರಾದಾಸ,

ತಡೆ. ರಾಯಮಹಾಶಯ, ನಿಮ್ಮ ಮಗಳು ಇವನ ಮಾತನ್ನು ನಂಬ ಲಿಕ್ಕಿಲ್ಲ; ಅವಳೇ ಹೇಳಲಿ. ದೇವಿಯ ಕಡೆ ಮುಖ ಮಾಡಿ ನಿಂತು ತನ್ನ ತಾಯಿಯ ಕರ್ತೃತ್ವವನ್ನು ಅವಳಿಗೇ ಹೇಳಿನ್ನಬೇಕು. ಹೇಗೆ ಚೌಧರಿ ಮಹಾಶಯ? ನೀನೇನೆನ್ನುತ್ತೀ ಯೋಗೇನ ಭಟ್ಟಾಚಾರಿ? ಹೇಗೆ? ಅವಳಿಗೆ ಹೇಳಿನ್ನಿರಿ!"

ಈ ಖಂಡುತುಂಡಾದ ಆಹ್ವಾನದಿಂದ ಕೂಡಿದ್ದ ಊರಿನ ದಿಕ್ಪಾಲರಲ್ಲಿ ಒಳ್ಳೇ ಗಜಿಬಿಜಿಯುಂಟಾಯಿತು. ಷೋಡಶಿಯ ಬೆಳ್ಳನೆಯ ತುಟಿಗಳು ಮಾತನಾಡುವುದಕ್ಕಾಗಿ ಕಂಪಿಸತೊಡಗಿದವು. ಇನ್ನು ಮಾತನಾಡು ವವಳು. ಅಷ್ಟರಲ್ಲಿ ಹೈಮವತಿ ಉಗುಬಗೆಯಿಂದ ಮುಂದೆ ಬಂದು ಷೋಡಶಿಯ ಕೈಹಿಡಿದು ದಿಟ್ಟತನದಿಂದ ನುಡಿದಳು: "ಬೇಡ, ನೀನು ಏನೂ ಮಾತನಾಡುವ ಅಗತ್ಯವಿಲ್ಲ!" ತನ್ನ ತಂದೆಯ ಕಡೆ ತೀಪ್ರ ದೃಷ್ಟಿ ಯಿಂದ ನೋಡುತ್ತ ಅವಳೆಂದಳು: "ಇವಳ ಬಗ್ಗೆ ಏನು ಬೇಕಾದರೂ ನೀವು ತೀರ್ಮಾನಿಸಿಕೊಳ್ಳಿರಿ. ಇವಳ ತಾಯಿಯ ಸಂಗತಿಯನ್ನು ಇವಳ ಬಾಯಿಂದಲೇ ಆಡಿಸುವುದು ನನಗೆ ಸೇರುವುದಿಲ್ಲ. — ಯಾರೇನು ಮಾಡು ವುದು ಮಾಡಲಿ. ನನ್ನ ಸಂಗಡ ಗುಡಿಯೊಳಗೆ ಬಾ ನೀನು!" ಎಂದು ಎಲ್ಲರನ್ನೂ ದುರ್ಲಕ್ಷಿಸಿ ಷೋಡಶಿಯನ್ನು ಎಳೆದುಕೊಂಡು ಮುನ್ನಡೆದಳು.

೮

ಷೋಡಶಿ ಗುಡಿಯೊಳಗೆ ಹೋಗಿ ಒತ್ತಟ್ಟಿಗೆ ನಿಶ್ಚಲಳಾಗಿ ನಿಂತು ಕೊಂಡಳು.

"ಒಲ್ಲೆ ಅಕ್ಕ, ನಾನು ಪೂಜೆ ಮಾಡುವುದಿಲ್ಲ."

"ಏಕೆ?"

ಹೈಮವತಿ ಷೋಡಶಿಯನ್ನು ಆಶ್ಚರ್ಯದಿಂದ ನೋಡತೊಡಗಿದಳು. ಅವಳ ಮುಖ ಇಳಿದಿತ್ತು. ಅಲ್ಲಿ ಆನಂದದ ಅಥವಾ ಉತ್ಸಾಹದ ಚಿಹ್ನವು ಎಷ್ಟೆಷ್ಟೂ ಇರಲಿಲ್ಲ. ಈ ಪ್ರಶ್ನೆಗೆ ಅವಳು ಸ್ವಲ್ಪ ಆಲೋಚಿಸಿ ಉತ್ತರ ವಿತ್ತಳು: "ಕಾರಣವನ್ನು ತಿಳಿಯಲೇ ಬೇಕಾಗಿದ್ದರೆ ನಿನಗೆ ಹೇಳುತ್ತೇನೆ.

ಆದರೆ ಈಗಲ್ಲ. ವಾಸ್ತವವಾಗಿ ನಾನು ಕೈಯಾರೆ ಹೆಚ್ಚಾಗಿ ಪೂಜೆಮಾಡುತ್ತಿರುವುದಿಲ್ಲ. ಈ ಕೆಲಸಕ್ಕೆ ನಿಯಮಿತರಾದವರಿಂದಲೇ ಪೂಜೆಮಾಡಿಸು. ನಾನಿಲ್ಲಿ ನಿಂತುಕೊಂಡು ನಿನ್ನ ಮಗನನ್ನು ಹರಸುತ್ತೇನೆ. ಅವನು ದೀರ್ಘಾಯುಷಿಯಾಗಲಿ, ನಿರೋಗಿಯಾಗಲಿ, ದೊಡ್ಡವನಾಗಲಿ!"

ಭೈರವಿಯ ಹೃತ್ಪೂರ್ವಕವಾದ ಆಶೀರ್ವಾದದಿಂದ ಹೈಮವತಿಯ ಮನಸಿನ ಅಪ್ರಸನ್ನತೆ ಹಿಂಗಲಿಲ್ಲ. ಅವಳು ಕೊಂಚ ಸಂಕೋಚದಿಂದ, "ಆದರೆ ಈಪೊತ್ತಿನ ದಿನ ಒಂದಿಷ್ಟು ಮಹತ್ವದ್ದಕ್ಕಾ. ನೀನು ಪೂಜೆ ಮಾಡದಿದ್ದರೆ ಈ ಜನರೆದುರಿಗೆ ನಾನು ತಲೆ ತಗ್ಗಿಸಬೇಕಾಗುವುದು." ಎಂದು ಹೊರಗಡೆ ಗಜಬಜಿಸುತ್ತಿದ್ದ ಜನಸಮುದಾಯದ ಕಡೆ ನೋಡಿದಳು.

ಷೋಡಶಿಯ ದೃಷ್ಟಿಯೂ ಆ ಕಡೆ ಹೋಗದಿರಲಿಲ್ಲ. ಜನರೆಲ್ಲರೂ ಈ ಕಡೆಗೇ ನೋಡುತ್ತಿದ್ದರು. ಅವರು ಜಗಳಕ್ಕೆ ಹುರಿಕಟ್ಟ್ಯಾಗಿರುವಂತೆ ಅವರ ಮುಖಲಕ್ಷಣ ಹೇಳುತ್ತಿತ್ತು. ಅವರು ಕ್ಷುಬ್ಧರಾಗಿದ್ದರು. ಸೈನಿಕರು ಸೇನಾಪತಿಯ ಅಪ್ಪಣೆಯನ್ನು ತವಕದಿಂದ ನಿರೀಕ್ಷಿಸುತ್ತ ತಮ್ಮ ಯುದ್ಧದ ಆವೇಶವನ್ನು ತಡೆಹಿಡಿದು ನಿಂತಿರುವಂತೆ ಅವರು ನಿಂತಿದ್ದರು.

ಆದರೆ ರಾಯಮಹಾಶಯನು ಹಾಗೆ ಅಪ್ಪಣೆ ವಿಧಿಸಲಿಲ್ಲ. ಆತನು ಒಳ್ಳೇ ಜಾಣಾಕ್ಷ ಮನುಷ್ಯ. ಸಿರಿವಂತರಾದ ಮಗಳು ಅಳಿಯಂದಿರಿಗೆ ವಿರೋಧಿಯಾಗಿ ನಿಲ್ಲುವುದು ಒಳಿತಲ್ಲವೆಂದು ಅವನಿಗೆ ತಿಳಿಯುತ್ತಿತ್ತು. ಅವನ ಕಣ್ಣು ಕೆಂಪು ಸಾವಕಾಶವಾಗಿ ಕಡಿಮೆಯಾಯಿತು. ಯಾರಿಗೇನೂ ಹೇಳದೆ ಅವನು ಸಭಾಮಂಟಪದಿಂದ ಜಾರಿಕೊಂಡ.

ಮುದುಕ ಶಿರೋಮಣಿ ಮಹಾಶಯನು ಅಲ್ಲಿಯೇ ನಿಂತಿದ್ದ. ಈ ಪ್ರಕರಣವು ಎಲ್ಲಿಗೆ ಕೊನೆ ಮುಟ್ಟುವುದೆಂಬುದನ್ನು ನೋಡುವುದಕ್ಕಾಗಿ ಅನೇಕ ಜನರು ಹಾಗೆಯೇ ನಿಂತಿದ್ದರು.

ಹೈಮವತಿ ಕಕುಲಾತಿಯಿಂದ ನುಡಿದಳು: "ತಾಯಿ ಭೈರವಿಯ ಆಶೀರ್ವಾದ ತಾಯಿ ಮಕ್ಕಳಿಗೆ ಶಿರೋಧಾರ್ಯವಾದದ್ದು. ಆದರೆ ನೀನು ನಿನ್ನನ್ನು ಪೃಥಕಪಡಿಸಿಕೊಂಡು ಆಶೀರ್ವದಿಸಬೇಡ. —ಒಳ್ಳೇದು. ಕಲಕಾಲ ನಿರೀಕ್ಷಿಸಲು ನಾನು ಸಿದ್ಧಳಿದ್ದೇನೆ. ಈಪೊತ್ತು ಪೂಜೆಯನ್ನು ನಿಲ್ಲಿಸುತ್ತೇನೆ. ನಿನ್ನ ಅಪ್ಪಣೆ ಎಂದಾಗುವುದೋ ಅಂದು ಪೂಜೆ ಮಾಡಿಸುವ."

ಆ ದಿವಸ ಎಂದಾದರೂ ಬರುವುದೋ ಇಲ್ಲವೋ ನಾನೀಗ ಖಂಡಿತವಾಗಿ ಹೇಳಲಾರೆ. ” ಎಂದಳು ಷೋಡಶಿ.

“ ಎಂದರೇನು ? ಮುಂದೆ ನೀನು ಭೈರವಿಯಾಗಿ ಇರುವುದಿಲ್ಲವೆ ? ” ಆಶ್ಚರ್ಯ ಚಕಿತಳಾಗಿ ಹೈಮವತಿ ಕೇಳಿದಳು.

“ ಈವೊತ್ತಂತೂ ಇದ್ದೇನೆ! ”

“ ಎಂದಮೇಲೆ ? — ”

ಹೈಮವತಿ ಮಾತನ್ನಾಡುತ್ತಿದ್ದಾಗ ಶಿರೋಮಣಿ ಚೌಕಟ್ಟನ್ನು ಹಿಡಿದುಕೊಂಡು ನಿಂತಿದ್ದಾನೆಂಬುದು ಅವಳ ಗಮನಕ್ಕೆ ಬಂದಿತು. ಇಬ್ಬರ ನೋಟಗಳೂ ಕೂಡುತ್ತಲೇ ಅವನು ಜಂಭದಿಂದ ಮುಂದೆ ಬಂದು ನುಡಿದ: “ ನಿಮ್ಮ ತಂದೆ ಮತ್ತು ನಾನು ಇಷ್ಟೊತ್ತನಕ ಇದನ್ನೇ ಗಂಟಲು ಹರಿದುಕೊಂಡು ಹೇಳಿದೆವಲ್ಲವೆ? ಸರಿ. ನಾನು ಹಿಂದೆ ಸರಿಯುತ್ತೇನೆ. ಈವೊತ್ತು, ನಾಳೆ, ನಾಡದು, ನಾಲ್ಕು ದಿವಸಗಳ ಮೇಲೆ, ಹತ್ತು ದಿವಸಗಳ ಮೇಲೆ. ಈ ಪೂಜೆ ನಡೆಯಲಿ! ಇದಕ್ಕೆ ಕೊಡಲಿ ಉತ್ತರ! ”

ಹೈಮವತಿ ಷೋಡಶಿಯ ಮೋರೆ ನೋಡಿದಳು. ನಟ್ಟ ನೋಟದಿಂದ ನೋಡುತ್ತಲೇ ಇದ್ದಳು. ಷೋಡಶಿ ಉತ್ತರ ಕೊಡಲಿಲ್ಲ.

ಭೈರವಿಯ ಬಾಡಿದ ಮುಖದ ಕಡೆ ನೋಡುತ್ತ ಶಿರೋಮಣಿ ನಗುನಗುತ್ತ ಮಾತನಾಡಿದ: “ ಹೈಮ, ಮಗೂ, ಈ ಸಮಸ್ಯೆ ಅಷ್ಟು ಸುಲಭವಾದದ್ದಲ್ಲ. ಇದು ಪೀಠಸ್ಥಾನ, ಇದು ಜಾಗ್ರತ-ದೈವತ. ದೇವಿಯ ಭೈರವಿಯ ಹೊರತು ಮಿಕ್ಕ ಯಾರಿಗೂ ಧೈರ್ಯವಾಗದು, ದೇವಿಯನ್ನು ಮುಟ್ಟುವುದಕ್ಕೆ. ಇವಳ ಮೈಯಲ್ಲಿ ಅಷ್ಟು ನೀರಿದ್ದರೆ ಇರಲಿ ಭೈರವಿಯಾಗಿ, ನಮ್ಮದೇನೂ ಅಡ್ಡಿಯಿಲ್ಲ. ಆದರೆ ನಾನು ಹೇಳುತ್ತೇನೆ, ಇವಳಲ್ಲಿ ಆ ಧೈರ್ಯವಿಲ್ಲ. ”

ಅವನ ಮಾತಿನ ಇಂಗಿತವು ಸ್ಪಷ್ಟವಾಗಿತ್ತು. ಹೈಮವತಿಯೂ ಲಜ್ಜೆಯಿಂದ ಮುಖ ತಗ್ಗಿಸಿದಳು. ಷೋಡಶಿ ಕ್ಷಣ ಹೊತ್ತು ಮುಂಗಾಣದವಳಂತೆ ನಿಂತಿದ್ದಳು. ಆದರೆ ಮರುಕ್ಷಣವೇ ಅರಿವು ಹುಟ್ಟಿತು. ಅವಳು ಶಿರೋಮಣಿಗೆ ಉತ್ತರ ಕೊಡಲಿಲ್ಲ; ಮುದಕ ಪೂಜಾರಿಗೆ ಗದ್ದರಿಸಿ ಹೇಳಿ

ವಳು. "ಠಾಕೂರ ಮಹಾಶಯ, ಏಕೆ ನೋಡುತ್ತ ನಿಂತಿರಿ? ನಾನು ಹೇಳುತ್ತೇನೆ, ಯಥಾರೀತಿಯಾಗಿ ದೇವಿಯ ಪೂಜೆ ಮಾಡಿರಿ, ನಿಮ್ಮ ಬಾಬು ನೀವು ತೆಗೆದುಕೊಳ್ಳಿರಿ. ಉಳಿದದ್ದನ್ನು ದೇವಸ್ಥಾನದ ಉಗ್ರಾಣ ದಲ್ಲಿಟ್ಟು ಕೀಲಿ ಹಾಕಿ. ಕೀಲಿಕೈ ನನ್ನ ಕಡೆ ಕೊಡಿರಿ' ಎಂದು ಪ್ರೇಮವತಿಯ ಕಡೆ ನೋಡಿ, 'ಇಷ್ಟೆಲ್ಲ ಸಿದ್ಧ ಮಾಡಿ ಅಣಿಮಾಡಿದ್ದೇನೆ. ಇದನ್ನು ವ್ಯರ್ಥ ಮಾಡುವುದು ಸರಿಯಲ್ಲ ಅಕ್ಕಾ. ನಾನು ಆಶೀರ್ವಾದ ಕೊಟ್ಟು ಹೋಗು ತ್ತೇನೆ- ನಿನ್ನ ಮಗನಿಗೆ ಸರ್ವಮಂಗಳವಾಗಲಿ. ನನ್ನ ನಿತ್ಯದ ಪೂಜಾ ಆಹ್ನಿಕಗಳು ಇನ್ನೂ ಆಗಿಲ್ಲ. ನದಿಗೆ ಹೋಗುತ್ತೇನೆ. ಪ್ರಸನ್ನತ್ತಾದರೆ ಮತ್ತೆ ಬರುತ್ತೇನೆ" ಎಂದು ನುಡಿದು ಹೆಚ್ಚು ವಾದವಿವಾದ ಬೆಳೆಯಿಸದೆ ಅವಳು ಹೊರಟು ಹೋದಳು.

ಎಷ್ಟೋ ಹೊತ್ತು ಎಲ್ಲ ಕಡೆಗೂ ಸ್ತಬ್ಧತೆ ನೆಲಸಿತ್ತು. ಒಮ್ಮೆ ಡೊಮ್ಮ್ರಲಿ ಶಾಂತತೆ ಭಗ್ನವಾಯಿತು. ಶಿರೋಮಣಿಗೆ ಅಪಮಾನವಾಗಿತ್ತು. ಅದರಿಂದ ಅವನಿಗೆ ರೇಗಿಹೋಗಿತ್ತು. ತನ್ನ ಬಿಳಿಯ ಕೂದಲಿನ ಮರ್ಯಾದೆಯೂ ಅವನಿಗುಳಿಯಲಿಲ್ಲ. ಅವನ ಮುತ್ಸದ್ದಿತನವು ಎಲ್ಲಿಯೋ ಮಾಯವಾಯಿತು. ನೋಟದ ಎಲ್ಲೆಯನ್ನು ಮೀರಿ ಹೋಗುತ್ತಲಿದ್ದ ಷೋಡಶಿಯ ಬಗ್ಗೆ ಅಸಭ್ಯ ಶಬ್ದಗಳನ್ನುಚ್ಚರಿಸಿ ಅವನು ಒದರಿ ಹೇಳಿದ: "ಇನ್ನೊಂದೇ ಗುಡಿಯ ಮೆಟ್ಟಲು ಹತ್ತಲಿ. ಹೊಡೆಯಿಸಿಕೊಂಡು ಸಾಯು ತ್ತಾಳೆ. ಚಾಂಡಾಲಿಯನ್ನು ತಂದು! ಊರೊಳಗೆ ಮಂದಿಯೇ ಇಲ್ಲ ವೆಂದು ತಿಳಿದಳೆ? ಇನ್ನೂ ಜನಾರ್ದನರಾಯ ಸತ್ತಿಲ್ಲ, ಅಮೃತ ಸರ್ವೇಶ್ವರ ಸತ್ತಿಲ್ಲ, ಬಲ್ಲೆಯಾ?"

ಅವನ ಅವಾಸ್ತವವಾದ ಬಡಬಡಿಕೆಯನ್ನು ಕೇಳಿಕೊಳ್ಳಲಿಕ್ಕೆ, ಅದಕ್ಕೆ ಉತ್ತರ ಕೊಡಲಿಕ್ಕೆ ಅಲ್ಲಿ ಯಾರೂ ಇರಲಿಲ್ಲ. ಅವನನ್ನು ಅನುಮೋದಿಸು ವುದಕ್ಕಾಗಿ ವಯಸ್ಸಾದ ಹೆಂಗುಸೊಬ್ಬಳು ಮುಂದೆ ಬಂದು ಮಾತನಾಡಿ ದಳು: "ಕೆಟ್ಟ ರಂಡೆ! ಅವಳನ್ನು ಹೊಡೆದೋಡಿಸಿರಿ ಶಿರೋಮಣಿ ಮಹಾ ಶಯ! ಮತ್ತೆ ಅವಳ ಜಂಬ ನೋಡಿರಿ! ಜಮೀನದಾರರ ರಂಗಮಹಲಿನಲ್ಲಿ ಒಂದು ರಾತ್ರಿ ಇದ್ದು ಬಂದಿದ್ದಾಳೆ; ಮತ್ತೆ ಹೇಳುತ್ತಾಳೆ - ಬಾಬುಗಳಿಗೆ ಕಾಯಿಲೆಯಾಗಿತ್ತಂತೆ! ಆಗಿರಬಹುದು ಕಾಯಿಲೆ! ಇವಳಿಗೇನು

ಸಂಬಂಧ?—" ಅಷ್ಟರಲ್ಲಿ ಅವಳ ದೃಷ್ಟಿ ದೇವಿಯ ಕಡೆ ಹೋಯಿತು. ಕೂಡಲೆ ಸಿಟ್ಟಿನಿಂದ ಸಡಿಲಾಗಿದ್ದ ಅವಳ ನಾಲಗೆ ಸೇದಿತು. ಕಿವಿಗಳ ಮೇಲೆ ಕೈಯಿಟ್ಟುಕೊಂಡು ದೇವಿಗೆ ಕೈ ಮುಗಿದು ದನಿಯನ್ನು ಸಣ್ಣದುಮಾಡಿ ಅವ ಳೆಂದಳು: "ದೇವಿಯು ಭೈರವಿ, ಅವಳನ್ನು ನಿಂದಿಸುವುದಿಲ್ಲ. ಆದರೆ ನಾನೆನ್ನುವುದು ಇಷ್ಟೇ – ಇದು ಸರಿಯೆ? ಪಾಪ, ಸಾಹೇಬರು ಒಳ್ಳೇ ಮನುಷ್ಯರೆಂತಲೇ ಸುಮ್ಮನೆ ಬಿಟ್ಟರು. ಇಲ್ಲದಿದ್ದರೆ ಇವಳ ಸುಳ್ಳುಮಾತಿ ನಿಂದ ತಂದೆಯ ಕೈಗಳಿಗೆ ಬೇಡಿ ಬೀಳುತ್ತಿರಲಿಲ್ಲವೆ?—" ಅವಳ ಈ ಮಾತಿಗೆ ಮತ್ತೊಬ್ಬರು ಯಾರೂ ಬೆಂಬಲ ಕೊಡಲಿಲ್ಲ.

ಷೋಡಶಿ ಏನೇ ಮಾಡಲಿ, ಅವಳು ದೇವಿಯ ಭೈರವಿ. ಈ ಸಂಗತಿ ಅವಳ ಗಮನಕ್ಕೆ ಬರದೆ ಹೋಗಿದ್ದರೆ ಅವಳ ನಿಂದೆಯ ರಾಮಾಯಣವು ಇಷ್ಟಕ್ಕೇ ಮುಗಿಯುತ್ತಿರಲಿಲ್ಲ.

ಆದರೂ ಶಿರೋಮಣಿ ಮಹಾಶಯನ ಸಿಟ್ಟಿನ ಪಾರಜ ಇನ್ನೂ ಇಳಿ ದಿರಲಿಲ್ಲ. ಅವನು ಮತ್ತೆ ಏನಾದರೂ ಮಾತನಾಡಲು ತೊಡಗುವವನು— ಅಷ್ಟರೊಳಗೆ ಹೈಮವತಿ ದೈನ್ಯಮುದ್ರೆಯಿಂದ ಅವನ ಕಡೆ ನೋಡುತ್ತ ಮೆಲ್ಲ ನೆಂದಳು: "ಈಗಿದೆಲ್ಲಾ ಇರಲಿ ಶಿರೋಮಣಿ ಮಹಾಶಯ, ಈಗೇನು ಅವಸರ ವಿಲ್ಲ. ನನ್ನ ಮಗನಿಗಾಗಿ ಹಮ್ಮಿದ ಪೂಜೆಯನ್ನು ಪೂರ್ಣವಾಗಗೊಡಿರಿ."

"ಒಳ್ಳೇದೊಳ್ಳೇದು. ಪೂರ್ಣವಾಗಲಿ" ಎಂದು ಶಿರೋಮಣಿ ತನ್ನ ಭುಗಿಲೆಂಬ ಸಿಟ್ಟನ್ನು ಸಂಯಮಿಸಿಕೊಂಡು ಅಲ್ಲಿಂದ ಕಾಲ್ತೆಗೆದ.

ಹೈಮವತಿ ನಿರ್ಜೀವ ಪುತ್ಥಳಿಯಂತೆ ಹತ್ತಿರವೇ ನಿಂತಿದ್ದಳು. ಅತ್ಯಂತ ಲಜ್ಜಾಸ್ಪದವಾದ ಅಪ್ರಿಯ ಪ್ರಸಂಗವನ್ನು ಒಳ್ಳೇ ಹಂಚಿಕೆಯಿಂದ ಅವಳು ತಪ್ಪಿಸಿದಳೇನೋ ನಿಜ, ಪೂಜಾರಿ ದೇವಿಯ ಪೂಜೆಯನ್ನು ಸಡಗರದಿಂದ ನಡೆಸಿದುದೂ ನಿಜ, ಆದರೆ ಹೈಮವತಿಯ ಅಂತಃಕರಣದಲ್ಲಿ ಆನಂದ ಉತ್ಸಾಹಗಳ ಲವಲೇಶವೂ ಇರಲಿಲ್ಲ. ಎಲ್ಲಾ ಜನರೊಂದಿಗೆ ಅವಳ ತಂದೆ ನಡೆಸಿದ ದುರ್ವ್ಯವಹಾರದ ಬಗ್ಗೆ – ಹೆಚ್ಚಾಗಿ ಈ ಮುದುಕ ಬ್ರಾಹ್ಮಣನ ಹೇಸಿ ಕೀಳು ನಡತೆಯ ಬಗ್ಗೆ – ಅವಳಲ್ಲಿ ತಿರಸ್ಕಾರ ಹುಟ್ಟಿದ್ದಿತು. ಆದರೆ ಷೋಡಶಿಯ ಅದ್ಭುತ ಆಚರಣೆಯಿಂದ ಅವಳ ಮನಸಿನಲ್ಲಿ ಸಂಶಯ ದೊಡನೆ ಗ್ಲಾನಿಯೂ ತಲೆದೋರಿತ್ತು.

ಪೂಜಾರಿ ಯಂತ್ರದಂತೆ ಕೆಲಸವನ್ನು ನಡೆಯಿಸಿದ್ದ. ಜಾಗೃತ ದೇವತೆಯ ಪೂಜೆ, ಬಲಿದಾನ, ಹೋಮ ಮೊದಲಾದವು ಯಥಾರೀತಿಯಾಗಿ ಸಾಂಗವಾದವು. ಮಗನ ನೆಮ್ಮದಿಗಾಗಿ ಹೂಡಿದ ಶುಭಕಾರ್ಯದಲ್ಲಿ ಯಾವ ತೊಂದರೆಯೂ ಉಂಟಾಗಲಿಲ್ಲ.

ಆದರೆ ಷೋಡಶಿ ಮಾತ್ರ ಮರಳಲಿಲ್ಲ.

ತೊತ್ತಿನ ಕಂಕುಳಲ್ಲಿ ಮಗುವನ್ನು ಕೊಟ್ಟು, ಹೈಮವತಿ ಮನೆಗೆ ಹೋದಾಗ ಹೊತ್ತು ಮೂರು ಪ್ರಹರವಾಗಿತ್ತು. ತನ್ನ ತಂದೆಯಾಗಲಿ, ಶಿರೋಮಣಿಯಾಗಲಿ ಹೊತ್ತನ್ನು ವ್ಯರ್ಥವಾಗಿ ಕಳೆದಿಲ್ಲವೆಂಬುದು ಹೊಸತಿಲೊಳಗೆ ಕಾಲಿಟ್ಟೊಡನೆಯೆ ಅವಳಿಗೆ ತಿಳಿದು ಬಂದಿತು. ಹೊರಗಿನ ದಿವಾಣಖಾನೆಯಲ್ಲಿ ಎಲ್ಲರವೂ ಗಡಿಬಿಡಿ ನಡೆದಿತ್ತು. ಪ್ರತಿಯೊಬ್ಬನು ತನ್ನ ಮಾತನ್ನೇ ಆಡುವುದಕ್ಕಾಗಿ ಹಾತೊರೆದುದರಿಂದ ಎಲ್ಲರ ಮಾತುಗಳೂ ಕಲೆತು ಏಕಾಕಾರವಾಗಿ ಗಲಭೆಯಾಗಿತ್ತು.

ಯಾರ ಕಣ್ಣಿಗೂ ಬೀಳದೆ ಸರಕ್ಕನೆ ಒಳಗೆ ಹೋಗಬೇಕೆಂದು ಹೈಮವತಿ ನಿರ್ಧರಿಸಿಕೊಂಡಿದ್ದಳು. ಆದರೆ ತಂದೆಯ ಕಣ್ಣು ಅವಳನ್ನು ಹಿಡಿಯದೆ ಬಿಡಲಿಲ್ಲ. ಕೈಯಿಂದ ಸನ್ನೆಮಾಡಿ ಅವಳನ್ನು ಕರೆದು, "ಹೈಮು, ಇಲ್ಲಿ ಸ್ವಲ್ಪ ಬಂದು ನಮ್ಮ ಮಾತು ಕೇಳು, ನೋಡುವ" ಎಂದು ಅವನೆಂದ.

ಅವಳು ದಣಿದಿದ್ದಳು. ಅವಳ ಮೋರೆ ಇಳಿದಿತ್ತು. ಆದರೂ ಅವಳು ಅವರೆದುರಿಗೆ ಹೋಗಿ ನಿಂತಳು. ಎಲ್ಲರೂ ಮಾತನಾಡುತ್ತಿದ್ದರು. ಆ ಗದ್ದಲದಲ್ಲಿ ಮಾತನಾಡದೆ ಬರೀ ಶ್ರೋತೃವಾಗಿದ್ದವನು ಒಬ್ಬನೇ ಒಬ್ಬ; ಆಕೆಯ ಗಂಡ ಮಿಸ್ಟರ್ ಎನ್. ಬಸು, ಬ್ಯಾರಿಸ್ಟರ್. ಗಂಡನನ್ನು ಕಂಡು ಅವಳು ತಲೆಯ ಮೇಲಿನ ಸೆರಗನ್ನು ಇನ್ನಷ್ಟು ಮುಂದಕ್ಕೆಳೆದುಕೊಂಡು ಬಾಗಿಲ ಮರೆಯಲ್ಲಿ ನಿಂತುಕೊಂಡಳು.

ಅತ್ಯಂತ ವಾತ್ಸಲ್ಯದಿಂದ ಅವಳ ತಂದೆಯೆಂದ: 'ಎಲ್ಲವನ್ನೂ ಪೂರಾ ತಿಳಿದುಕೊಳ್ಳದೆ ನನ್ನ ಮೇಲೆ ಸಿಟ್ಟಾಗಿದ್ದೀ ತಂಗೀ. ಈಗ ಎಲ್ಲವನ್ನೂ ಕಿವಿಯಾರೆ ಕೇಳಿದೆಯಲ್ಲವೆ? ಏನೆಂಬುದು ಗೊತ್ತಾಯಿತಲ್ಲವೆ? ಈಗ ನೀನೇ ಹೇಳು, ಇಂಥ ಹೆಂಗುಸನ್ನು ದೇವಿಯ ಭೈರವೀ ಸ್ಥಾನದಲ್ಲಿ ಇಡುವುದು ಯೋಗ್ಯವೆ? ಅದೇನು ಹುಡುಗಾಟವಲ್ಲ!"

ಹೈಮವತಿ ಶಾಂತವಾಗಿ ಉತ್ತರವಿತ್ತಳು: "ನಿಮಗೆ ಯೋಗ್ಯವೆನಿಸಿದಂತೆ ಮಾಡಿರಿ."

ತಂದೆ ನಕ್ಕು ನುಡಿದ: "ಅದನ್ನೇ ನಡೆಸಿದ್ದೇವೆ ಮಗೂ, ಯೋಗ್ಯವೆನಿಸಿದ್ದನ್ನೇ ಮಾಡುತ್ತೇವೆ. ನಿರ್ಮಲ ಬಂದಿದ್ದಾನೆ. ನೆಟ್ಟಗೇ ಆಯಿತು. ಕಾಯದೆ ಕಟ್ಟಳೆಯ ಪ್ರಶ್ನೆ ಬಂದರೆ ಸಲಹೆ ತೆಗೆದುಕೊಳ್ಳಲು- ಅನುಕೂಲವಾಗುವುದು."

ಪ್ರತಿಪಕ್ಷಕ್ಕೆ ಜಮಾದಾರನ ಸಹಾಯ ಸಿಕ್ಕುವುದು ಸಂದೇಹವಾಗಿದ್ದಿತು. ಆದರೆ ಶಿರೋಮಣಿ ಸುಮ್ಮನೆ ಅಕಾಂಡತಾಂಡವ ಮಾಡಿದ. ಅವನೆಂದ: "ಚಂಡು ಹಿಡಿದು ದಬ್ಬತಕ್ಕದ್ದು. ಕಟ್ಟಳೆಯ ಮಾತೇಕೆ ಇದರಲ್ಲಿ? ಅಳಿಯ ದೇವರು ಹೇಗೂ ಬಂದಿದ್ದಾರೆ: ಇವರೇ ಏನೆಂಬುದನ್ನು ನಿರ್ಣಯಿಸಲಿ. ಇವರೇ ನಮ್ಮ ಜಡ್ಜಿ, ಮ್ಯಾಜಿಸ್ಟ್ರೇಟ. ಬೇರೆ ಜಡ್ಜಿ ಮ್ಯಾಜಿಸ್ಟ್ರೇಟರು ನಮಗೆ ಮಾನ್ಯವಿಲ್ಲ. ಏನೆನ್ನುತ್ತೀ ಯೋಗೇನಣ್ಣಾ? ನಿನ್ನ ವಿಚಾರ ಏನು ಮಿತ್ರಣ್ಣಾ?--" ಎಂದು ಅವನು ಅನೇಕರ ಮುಖದ ಮೇಲೆ ಕಣ್ಣಾಡಿಸಿ, ತನ್ನ ಮುಖದಲ್ಲಿ ನಗೆಯ ಭಾವವನ್ನು ತಂದುಕೊಂಡ

ಈ ವಿಷಯದಲ್ಲಿ ಯೋಗೇನಣ್ಣ ಮಿತ್ರಣ್ಣರ ಒಪ್ಪಿಗೆಯನ್ನು ಪಡೆಯುವ ಉದ್ದೇಶವೇನೋ ಸರಿಯಾಗಿ ತಿಳಿಯಲಿಲ್ಲ. ಆದರೆ ಈ ವಿಷಯದಲ್ಲಿ ದಾನಶೂರನಾದ ದೊಡ್ಡ ಮನುಷ್ಯನಾದ ಅಳಿಯ ದೇವನು ಏನಾದರೂ ನಿರ್ಣಯ ಕೊಟ್ಟುಕೊಳ್ಳಲಿ ಅಥವಾ ಬಿಡಲಿ, ಭವಿಷ್ಯತ್ ಕಾಲದಲ್ಲಿ ಅವನ ಅನುಗ್ರಹದ ಲಾಭವನ್ನು ಸಂಪಾದಿಸುವುದಕ್ಕೆ ಶಿರೋಮಣಿ ತನ್ನ ಹಾದಿಯನ್ನು ಪರಿಷ್ಕಾರವಾಗಿ ಸರಳವಾಗಿ ಮಾಡಿಕೊಂಡ.

ಅಳಿಯ ದೇವರು ಟೊಪ್ಪಿಗೆಯಿಂದ ಬೂಟಿನ ತನಕ ಅಖಂಡ ಸಾಹೇಬೀ ಮಾದರಿಯ ಮನುಷ್ಯ. ಉತ್ತರ ರೂಪವಾಗಿ ಅವನು ಸರಸನಾದ ನಗೆ ನಕ್ಕ. ಅವನು ಆಡಿದ ಉತ್ತರವೂ ಸಾಹೇಬೀ ರೀತಿಯದು. ಅವನೆಂದ: "ಈ ಎಲ್ಲ ಸಂನ್ಯಾಸಿ ಸಂನ್ಯಾಸಿನಿಯರ ಕಾರಭಾರ ಎಲ್ಲರಿಗೂ ಗೊತ್ತಿದ್ದದ್ದೇ. ಅವರು ಬಾಯ್ಬಡಕರಿರುತ್ತಾರೆ, ಅಷ್ಟೇ ದುರಾಚಾರಿಗಳಾಗಿರುತ್ತಾರೆ. ಅವರು ಬೇಕಾದ್ದು ಮಾಡುತ್ತಾರೆ. ಈ ಜನರ ವಿಷಯದಲ್ಲಿ ಸ್ವಲ್ಪವೂ ಸಡಿಲು ಬಿಡಬಾರದು. ಆದರೂ ನಿಮ್ಮ ಈ ಭೈರವಿ ಏನು ಮಾಡಿ

ದ್ದಾಳೆ ಏನು ಬಿಟ್ಟಿದ್ದಾಳೆ ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು."

"ತಮ್ಮಾ ನಿರ್ಮಲ, ತಿಳಿದುಕೊಳ್ಳಬೇಕಾದ್ದು ಏನೂ ಉಳಿದಿಲ್ಲ ಇನ್ನು! ಏನು ತಂಗೀ, ನಿನಗಿನ್ನೂ ಸಂಶಯವಿದೆಯೇನು? ಅಲ್ಲದೆ ಅವಳ ತಾಯಿ! - ಅದೊಂದು ದೊಡ್ಡ ಭಾಗವತ ಪುರಾಣವೇ!" ಎಂದು ಶಿರೋಮಣಿ ಅರ್ಥಪೂರ್ಣ ದೃಷ್ಟಿಯಿಂದ ಪ್ರೇಮವತಿಯ ಕಡೆ ನೋಡಿದ.

ಪ್ರೇಮವತಿ ಮುಖ ತಗ್ಗಿಸಿಕೊಂಡು ಸುಮ್ಮನೆ ನಿಂತಿದ್ದಳು. ಈ ಮೌನವನ್ನು ಜನ ವಿಪರೀತವಾಗಿ ತಿಳಿದುಕೊಳ್ಳತೊಡಗಿದರು. ಭೈರವಿಗೆ ವಿರುದ್ಧವಾಗಿ ಪ್ರಕಟವಾಗಿ ಮಾತನಾಡಲು ಅವಳಿಗೆ ಸಂಕೋಚವಾಗುತ್ತಿದೆ, ಭೈರವಿಯನ್ನು ಎತ್ತಿ ಹಿಡಿಯುವುದಕ್ಕೆ ಪ್ರಮಾಣಗಳಿಲ್ಲವೆಂದು ಅವಳಿಗೆ ಎನಿಸುತ್ತಿರಬೇಕು ಎಂದೆಲ್ಲರೂ ಬಗೆದರು.

ಜನಾರ್ದನನು ಮಗಳಿಗೆಂದ: "ಇನ್ನು ಒಳಗೆ ಹೋಗು ತಂಗೀ. ಇಡೀ ದಿವಸದ ಉಪವಾಸದಿಂದ ಮೋರೆ ಹೇಗ ಬತ್ತಿಹೋಗಿದೆ! ಭೈರವಿಯನ್ನು ಕರೆಯಲಿಕ್ಕೆ ಆಳು ಕಳಿಸಿದ್ದೇನೆ. ಅವಳು ಬಂದಕೂಡಲೆ ನಿನಗೆ ತಿಳಿಸುತ್ತೇನೆ."

ಪ್ರೇಮವತಿ ಒಳಗೆ ಹೊರಟಿದ್ದಳು. ಅಷ್ಟರಲ್ಲಿ ಭೈರವಿಯ ಕಡೆ ಹೋಗಿದ್ದ ಆಳು ತಿರುಗಿ ಬಂದ. ಅವನು ಅರುಹಿದ ಸುದ್ದಿಯ ಭಾವಾರ್ಥ ಇಷ್ಟು: ಭೈರವಿ ತನ್ನ ಕುಳಗಳಾದ ದಿಗಂಬರ ಪಿಸಿನರ ಸಹಾಯದಿಂದ ಕೀಲಿ ಮುರಿದು ಎಲ್ಲ ಕೋಣೆಗಳನ್ನೂ ವಶಪಡಿಸಿಕೊಂಡಿದ್ದಾಳೆ. ಇಷ್ಟೇ ಅಲ್ಲ, ರಾಯಮಹಾಶಯನ ಅಪ್ಪಣೆಯನ್ನು ಮನ್ನಿಸದೆ ಬರುವುದಿಲ್ಲವೆಂದು ಹೇಳಿದ್ದಳು; ಆದರೆ ಫಕೀರ ಸಾಹೇಬನು ಹೇಳಿದುದರಿಂದ ಕೊನೆಗೆ ಬರಲೊಪ್ಪಿದಳು. ಬಹುಶಃ ಇನ್ನು ಹತ್ತು ಹದಿನೈದು ನಿಮಿಷಗಳಲ್ಲಿ ಬರಬಹುದು.

'ಬಹುಶಃ ಬರಬಹುದು!' ನಿಜ! ಉರಿಯೊಳಗೆ ತುಪ್ಪವನ್ನು ಸುರಿದಂತಾಯಿತು. ಕ್ಷುದ್ರ ಸ್ತ್ರೀಯೊಬ್ಬಳ ಈ ಗರ್ವದ ಬಗ್ಗೆ ಶಿಷ್ಟರಾದ ಕೂಡಿದ ಪುರುಷರ ಬಾಯಿಂದ ಹೊರಟ ಮಾತುಗಳನ್ನು ಯಥಾತಥ್ಯವಾಗಿ ಉಲ್ಲೇಖಿಸದಿರುವುದೇ ಲೇಸು. ಒಟ್ಟಾರೆ, ಈ ಭ್ರಷ್ಟ ಸ್ತ್ರೀಯನ್ನು ನಿಂತ ಕಾಲ

ಮೇಲೆ ಊರಿಂದ ಓಡಿಸಬೇಕು ಮಾತ್ರವಲ್ಲ, ಕೀಲಿ ಮುರಿದು ಮನೆಯೊಳಗೆ ಅನಧಿಕಾರ ಪ್ರವೇಶ ಮಾಡಿದುದಕ್ಕಾಗಿ ಪೋಲಿಸರಿಗೊಪ್ಪಿಸಿ ಸೆರೆಮನೆಗೆ ಅಟ್ಟಬೇಕು ಎಂದು ಎಲ್ಲರೂ ಅಭಿಪ್ರಾಯಪಟ್ಟರೆಂಬುದನ್ನು ಹೇಳುವುದು ಅಗತ್ಯ.

ಈ ಬೊಗುಳಾಟದಲ್ಲಿ ಬಾಯಿ ಹಾಕದವನೆಂದರೆ ಅಳಿಯ ದೇವ ರೊಬ್ಬ. ತನ್ನ ಸಾಹೇಬೀ ಬ್ಯಾರಿಸ್ಟರೀ ಅಂತಸ್ತಿನ ಮರ್ಯಾದೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಅವನು ಗಂಭೀರವಾಗಿ ಕುಳಿತಿರಬೇಕು.

ಗಲಭೆ ಕೊಂಚ ತಗ್ಗಿದಬಳಿಕ ಅಳಿಯ ದೇವರು ಕೇಳಿದ: "ಈ ಫಕೀರ ಸಾಹೇಬ ಯಾರು? ಅವನು ಒಮ್ಮಿಂದೊಮ್ಮೆಲೆ ಎಲ್ಲಿಂದ ಬಂದ?"

ಫಕೀರನ ವಿಷಯದಲ್ಲಿಯೂ ಬೇರೆ ಬೇರೆ ಜನರು ಬೇರೆ ಬೇರೆ ಅಭಿ ಪ್ರಾಯಗಳನ್ನು ವ್ಯಕ್ತಗೊಳಿಸಿದರು. ಅವನ ನಾಲ್ವತ್ತೆರಡು ಪೂರ್ವಜರನ್ನು ಉದ್ಧರಿಸುತ್ತ ಶಿರೋಮಣಿ ಮಾತನಾಡಿದ: "ಅವ ನೋಡಿದರೆ ಮುಸ ಲ್ಮಾನ – ಸಿದ್ಧಪುರುಷನಂತೆ! ಅದರೊಳಗೇನೂ ಅರ್ಥವಿಲ್ಲ. ಆದರೆ ಇಷ್ಟು ಮಾತ್ರ ನಿಜ, ಅವನು ಪಾಪ, ಯಾರಿಗೂ ಕೇಡು ಮಾಡುವವನಲ್ಲ. ಘಾಟಿನ ಹತ್ತಿರ ದೊಡ್ಡ ಆಲದ ಮರದಡಿಯಲ್ಲಿ ಅವನ ವಾಸಸ್ಥಾನವಿದೆ, ಬಹಳ ದಿವಸದಿಂದ. ನಡನಡುವೆ ಎಲ್ಲಿಗೋ ಹೋಗಿರುತ್ತಾನೆ, ಮತ್ತೆ ಬರುತ್ತಾನೆ. ಕಳೆದ ಎರಡು ವರುಷ ಅವನ ಪತ್ತೆಯೇ ಇರಲಿಲ್ಲ. ಐದಾರು ದಿವಸವಾಯಿತು, ಅವನು ಬಂದಿದ್ದಾನೆಂದು ಕೇಳಿದೆ. ಅವನ ಸಲಹೆ ಯಿಂದಲೇ ಷೋಡಶಿ ಕೀಲಿ ಮುರಿದಿರಬಹುದು. ಯಾರು ಹೇಳಬೇಕು. ಎಷ್ಟೆಂದರೂ ಮ್ಲೇಚ್ಛಜಾತಿ!"

"ಆದರೆ ಈಗ ಎಲ್ಲಿಂದ ಬಂದ?" ಅಳಿಯ ಕೇಳಿದ.

ಈವರೆಗೆ ತಾರಾದಾಸನು ಮೌನದಿಂದಿದ್ದ. ಈಗ ಮಾತನಾಡಿದ: "ಆಚೆ ದಂಡೆಯ ಆಲದ ಮರದ ಸುತ್ತುಮುತ್ತಲಿನ ಸ್ಥಳ ಗುಡಿಯದು. ಆದ್ದರಿಂದ ಆತನ ಸಂಬಂಧವುಂಟಾಯಿತು. ಫಕೀರ ಸಾಹೇಬನಿಗೆ ಷೋಡ ಶಿಯ ಮೇಲೆ ಬಹಳ ಪ್ರೀತಿ. ಅವನು ಇಲ್ಲಿದ್ದಾಗ ಷೋಡಶಿ ಆಗಾಗ ಅಲ್ಲಿಗೆ ಹೋಗುತ್ತಿರುತ್ತಾಳೆ. ಅವನ ಹತ್ತಿರ ಓದೋದು ಬರೆಯೋದು ಮಾಡುತ್ತಾಳೆಂದು ಕಾಣುತ್ತದೆ."

ಅಳಿಯನು ಮಾತನ್ನು ವಿನೋದದ ಕಡೆ ತಿರುಗಿಸಿದ. ಅವನೆಂದ: "ಪ್ರೀತಿ? ಓದುವುದು ಬರೆಯುವುದು ಮಾಡುತ್ತಾಳೆಯೆ? ಎಷ್ಟಿದ್ದಾನೆ ಫಕೀರ ಸಾಹೇಬ?"

ನಾಚಿಕೊಂಡು ತಾರಾದಾಸನೆಂದ: "ಮುದುಕ ಮನುಷ್ಯ ಸ್ವಾಮಿ. ಅರುವತ್ತು ಅರುವತ್ತೆರಡು ವರ್ಷ ವಯಸ್ಸಿರಬಹುದು. ಅವಳನ್ನು ಮಗೂ ಎಂದು ಕರೆಯುತ್ತಾನೆ. ಒಮ್ಮೆ ಹೋಡಶಿಗೆ ಬಹಳ ಜಡ್ಡಾಗಿತ್ತು; ಸಾಯುಲಿಕ್ಕಾಗಿದ್ದಳು; ಅವನೇ ಉಳಿಸಿದ."

"ಭಲೆ, ಹೀಗೇನು? ಯಾರಿಗೆ ಗೊತ್ತು ಮಹಾರಾಯರೇ, ಈ ಕಡೆ ಈ ಸಾಧು ಫಕೀರರು, ಆಕಡೆ ಆ ಡಾಕಿನಿ ಯೋಗಿನಿಯರು! ಈ ಎಲ್ಲ ಭೈರವ ಭೈರವಿಯರ ತಂಡದಲ್ಲಿ—" ಅಳಿಯನ ಮಾತು ಪೂರ್ಣವಾಗಲಿಲ್ಲ. ಹೆಂಡತಿಯ ಮುಖದ ಕಡೆ ನೋಟ ಹೋದುದರಿಂದ ಮಾತು ಅಲ್ಲಿಂದಲ್ಲಿಯೆ ನಿಂತಿತು.

ಈ ವಿಷಯದಲ್ಲಿ ಮತ್ತೆ ಯಾರೂ ಮಾತನಾಡಲು ಮುಂದಾಗಲಿಲ್ಲ. ನಿರ್ಭೀತ ಬೃಹಸ್ಪತಿ ಶಿರೋಮಣಿ ಮಾತ್ರ ಹಿಂಜರಿಯಲಿಲ್ಲ. ಅವಳ ಮೇಲಿನ ಉಳಿದ ಆರೋಪಗಳನ್ನು ಪೂರ್ಣಗೊಳಿಸಲು ಆವೇಶದಿಂದ ನುಡಿದ: "ಶತಶಃ ನಿಜ ಬಾಬೂ, ಶತಶಃ ನಿಜ! ಈ ಲಂಡಭಂಡ ಮಕ್ಕಳು ನಷ್ಟರು ದುಷ್ಟರು!" ಎಂದು ನುಡಿದು ಯೋಗೇಶಣ್ಣ ಮಿತ್ರಣ್ಣರು ತಲೆದೂಗಲೆಂಬ ಅಪೇಕ್ಷೆಯಿಂದ ಎಡಬಲ ನೋಡಿದ.

ಆದರೆ ಅವರಿಬ್ಬರೂ ಸುಮ್ಮನೆ ಇದ್ದರು. ಬಾಗಿಲ ಮರೆಯಲ್ಲಿದ್ದ ಹೈಮವತಿಯ ಕಳೆಗುಂದಿದ ಮುಖವು ಒಮ್ಮೆಲೆ ಕೆಂಪಾಯಿತು.

ಅದೇ ಸಮಯಕ್ಕೆ ಆ ಭಂಡ ಮುಸಲ್ಮಾನ ಫಕೀರನು ಶಾಂತವಾಗಿ ಹೆಜ್ಜೆಯಿಡುತ್ತ ಹೋಡಶಿಯೊಡನೆ ಅಂಗಳವನ್ನು ಪ್ರವೇಶಿಸಿದ. ಶಿರೋಮಣಿಯ ಘೋಷಣೆ ಅವನ ಕಿವಿಗೆ ಬಿದ್ದಿರಬೇಕೆಂಬುದರಲ್ಲಿ ಯಾರಿಗೂ ಸಂಶಯವುಳಿಯಲಿಲ್ಲ.

ಅವರಿಬ್ಬರೂ ಇದಿರಿಗೆ ಬಂದು ನಿಂತಾಕ್ಷಣ ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಅವರನ್ನು ಯಾರೂ ಸ್ವಾಗತಿಸಲಿಲ್ಲ; ಸಾಮಾನ್ಯ ಗೃಹಸ್ಥಿಕೆಗೆ ಅನುಸಾರವಾಗಿ ಬರ್ರಿ, ಕೂಡಿರಿ ಎಂದು ಕೂಡ ಎನ್ನಲಿಲ್ಲ.

ಎಲ್ಲರ ಮನಸೂ ಒಂದು ಬಗೆಯಿಂದ ಅಸ್ವಸ್ಥವಾಗಿದ್ದಿತು. ಇದು ಸರಿಯಾಗಲಿಲ್ಲವೆಂದು ಶಿರೋಮಣಿಗೂ ಎನಿಸಿರಬೇಕು - ಏನೋ ದೊಡ್ಡ ಪ್ರಮಾದವಾಯಿತೆಂದು ಎಲ್ಲರಿಗೂ ಎನಿಸಿತು ಅರ್ಥಾತ್ ಎಲ್ಲರೂ ಕುಳಿತಂತೆ ಕುಳಿತಿದ್ದರು

ಬಂದವರಿಗೆ ಮಿ. ಬಸು ತೀರ ಅಪರಿಚಿತ. ಅವನು ಇಬ್ಬರನ್ನೂ ಒಂದು ಕ್ಷಣ ತೀಕ್ಷ್ಣದೃಷ್ಟಿಯಿಂದ ನೋಡಿದ. ಫಕೀರನ ತಲೆಗೂದಲು, ಗಡ್ಡಮೀಸೆ ಎಲ್ಲವೂ ಹಣ್ಣಾಗಿ ಸ್ವಚ್ಛ ಬಿಳಿದಾಗಿದ್ದುವು. ಸರ್ವಸಾಧಾರಣ ಮುಸಲ್ಮಾನ ಸಾಧುಗಳ ಉಡಿಗೆತೊಡಿಗೆ ಆದರೆ ಅವನ ಧೃಷ್ಟಪುಷ್ಟ ಶರೀರಯಷ್ಟಿಯನ್ನು, ಮುಖಮುದ್ರೆಯನ್ನು ನೋಡಿದರೆ, ಅವನು ಸಾಮಾನ್ಯತೆಯ ಗಡಿಯ ಆಚೆಯವನೆಂದು ಎನಿಸುತ್ತಿತ್ತು. ಮಳೆಯಲ್ಲಿ ತೊಯ್ದು, ಬಿಸಿಲಲ್ಲಿ ಸುಟ್ಟು ಅವನ ಮೈದೊಗಲು ವಿಚಿತ್ರವೇ ಆಗಿತ್ತು. ಅವರ ಮೂಲ ಬಣ್ಣವನ್ನು ಗುರುತಿಸಲಾಗುತ್ತಿರಲಿಲ್ಲ.

ಫಕೀರನ ಮುಖದಲ್ಲಿ ಕೊಂಚ ಉತ್ಕಂಠೆಯ ಲಕ್ಷಣವು ಕಾಣುತ್ತಿದ್ದಿತು. ಆದರೂ ಸ್ವಲ್ಪ ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಅವನ ಅಂತರಂಗವು ಶಾಂತವಾದುದು, ಉದ್ವೇಗ ರಹಿತವಾದುದು, ನಿರ್ಭಯವಾದುದು ಇರಬೇಕೆಂದು ಕಂಡು ಬರುತ್ತಿದ್ದಿತು.

ಅವನ ಹಿಂಬದಿಯಲ್ಲಿ ಷೋಡಶಿ ನಿಂತಿದ್ದಳು. ಅವಳ ಕಾಷಾಯ ವೇಷ, ಸುಂದರವಾದ ದೇಹಯಷ್ಟಿ, ಸೆರಗು ಹೊರದ ತಲೆಯ ಮೇಲಿಂದ ಬೆನ್ನಮೇಲೆ ಅಲೆಯುತ್ತಿದ್ದ ಕರಡಾದ ವಿಪುಲ ಕೇಶಕಲಾಪ, ಉಪವಾಸಗಳಿಂದ ಕಠಿನವಾದ ಯೌವನೋನ್ಮುಖ ಅಂಗದ ಅತಿರೇಕವಿಲ್ಲದ ವಿಲಕ್ಷಣ ಶೋಭೆ, ಇವೆಲ್ಲಕ್ಕೂ ಮಿಗಿಲಾಗಿ ಅವಳ ಆನತವಾದ ನಯನಗಳಲ್ಲಿ ಕಂಡು ಬರುತ್ತಿದ್ದ ನೀರವ ಇತಿಹಾಸ- ಎಲ್ಲವೂ ಒಟ್ಟಾಗಿ ಪರಿಣಮಿಸಿ ಬ್ಯಾರಿಸ್ಟರ್ ಸಾಹೇಬನನ್ನು ಕ್ಷಣಹೊತ್ತು ಮೈಮರೆಯುವಂತೆ ಮಾಡಿದ್ದುವು.

ಫಕೀರನ ಮಾತಿನಿಂದ ನಿರ್ಮಲ ಬಾಬುವಿನ ತಲ್ಲೀನತೆ ಭಗ್ನವಾಯಿತು. ತನ್ನ ದುರ್ಬಲತೆಯ ಅರಿವಾದುದರಿಂದ ಅವನು ಕಾರಣವಿಲ್ಲದೆ ನಾಚಿಕೊಂಡ. ಅದರಿಂದ ಅವನ ಮಾತು ಸುಮ್ಮಸುಮ್ಮನೆ ಕಠೋರವಾಯಿತು.

"ಬಾಬೂ ಮಹಾಶಯ, ನೀವೇ ಕರೆದಿದ್ದಿರೇನು?" ರೀತಿಯಂತೆ ಅಭಿವಂದಿಸಿ ಫಕೀರನು ಕೇಳಿದ.

"ನಿಮ್ಮನ್ನು ಕರೆದಿದ್ದಿಲ್ಲ. ನೀವು ಹೋಗಬಹುದು!" ಬಾಬೂ ಮಹಾಶಯನು ಉತ್ತರವಿತ್ತ.

ಫಕೀರನು ಸಿಟ್ಟಿಗೇಳಲಿಲ್ಲ. ನಸುನಗುತ್ತ ಷೋಡಶಿಯನ್ನು ತೋರಿಸಿ ಶಾಂತವಾಗಿ ಮಾತನಾಡಿದ. "ಆರೋಪಿಯನ್ನು ನಾನೇ ಹಿಡಿದು ತಂದು ನಿಲ್ಲಿಸುತ್ತಿದ್ದೇನೆ ಬಾಬೂ. ಇವಳು ಬರಲಿಕ್ಕೆ ಒಲೆನ್ನುತ್ತಿದ್ದಳು. ಆ ಬಗ್ಗೆ ಇವಳಿಗೆ ದೋಷ ಕೊಡುವುದು ಉಚಿತವಲ್ಲ; ಏಕೆಂದರೆ ಎಲ್ಲರೂ ಒಟ್ಟಾಗಿ ಆಘಾತಿಸುತ್ತಿರುವುದರಿಂದ ನ್ಯಾಯಕ್ಕಿಂತ ಅನ್ಯಾಯವಾಗುವ ಸಂಭವವೇ ಹೆಚ್ಚು. ಏನಾಗುವುದು ಬೆಳಗ್ಗೇ ಆಗಿಹೋಗಿದೆ. ಆದರೆ ನೀವು ಬಂದದ್ದು ಕೇಳಿ ನಾನೇ ಹೇಳಿದೆ. 'ನಡೆ ಮಗೂ, ಹೋಗಿ ಬರುವ. ಅವರು ಕಾಯಿದೆ ಬಲ್ಲವರು. ಮೇಲಾಗಿ ಹೊರಗಿನವರು: ಈ ಪ್ರಕರಣದ ವಿಚಾರಣೆ ಸರಿಯಾಗಿ ಆಗುವ ಸಂಭವವಿದೆ' ಎಂದು ಹೇಳಿ ಕರೆದುಕೊಂಡು ಬಂದೆ."

ಕಂಡೊಡನೆಯೇ ಫಕೀರನ ಬಗ್ಗೆ ತಾನು ಕಟ್ಟಿದ ಅನುಮಾನವು ತಪ್ಪಿಲ್ಲವೆಂದು ಬ್ಯಾರಿಸ್ಟರನಿಗೆನಿಸಿತು. ಯಾವನೇ ಇರಲೊಲ್ಲ, ಇವನು ಸಾಧಾರಣ ಭಿಕ್ಷುಕನಲ್ಲ. ಆದುದರಿಂದ ಉತ್ತರ ಕೊಡುವಾಗ ಸಭ್ಯತೆಯನ್ನು ಅವನು ಅನುಸರಿಸಬೇಕಾಯಿತು. "ಈ ಜನರೆಲ್ಲ ಇವಳನ್ನು ಕೀಲಿ ಮುರಿದು ಮನೆಯೊಳಗೆ ಅನಧಿಕಾರಪ್ರವೇಶ ಮಾಡಿದ್ದಕ್ಕಾಗಿ ಪೋಲಿಸರ ವಶಕ್ಕೆ ಕೊಡಬೇಕೆನ್ನುತ್ತಾರೆ. ಮತ್ತೆ ಕೀಲಿ ಮುರಿಯಲು ಪ್ರಚೋದಿಸಿದವರು ನೀವೆಂದು ಕೇಳಿದ್ದೇನೆ" ಎಂದು ಅವನೆಂದ.

ಫಕೀರನು ನಕ್ಕು ಹೇಳಿದ: "ಅಬ್ಬಬ್ಬಾ! ಆರೋಪಿ ಒಬ್ಬಳೇ ಅಲ್ಲ, ಅವಳಿಗೊಬ್ಬ ಸಹಾಯಕ ಬೇರೆ! ಆದರೆ ಬಾಬು ಮಹಾಶಯ, ನಾನು ಅವಳಿಗೆ ಕೀಲಿ ಮುರಿಯಲಿಕ್ಕೆ ಹೇಳಿದೆನೇ ವಿನಾ ಕಾಯಿದೆ ಮುರಿಯಲಿಕ್ಕೆ ಹೇಳಲಿಲ್ಲ. ಆ ಮನೆ ದೇವರ ಸೊತ್ತು; ಈ ಭೈರವಿ ಆ ಸೊತ್ತಿನ ವಿಶ್ವಸ್ತಳು. ತಾರಾದಾಸರು ಕೀಲಿ ಹಾಕದಿದ್ದರೆ ಅಂಥ ಉತ್ತಮ ಕೀಲಿಗಳನ್ನು ಮುರಿದು ಕೆಡಿಸುವ ಪ್ರಸಂಗವೇ ಬರುತ್ತಿರಲಿಲ್ಲ—" ಎಂದು ತಾರಾದಾಸನ ಕಡೆ ನೋಡಿ ಅವನೆಂದ: "ತಾರಾದಾಸರೇ, ಈ ಬುದ್ಧಿಯನ್ನು ನಿಮಗೆ

ಯಾರು ಕಲಿಸಿದರಪ್ಪ? ಯಾರೇ ಕಲಿಸಿರಲಿ, ಅದು ಖಂಡಿತ ತಪ್ಪು ಹಾದಿ."

ಇದಕ್ಕೆ ಉತ್ತರ ಕೊಡುವುದು ತಾರಾದಾಸನಿಂದಾಗಲಿಲ್ಲ. ಅವನು ಮುಂದುಗಾಣದೆ ಕುಳಿತನೆಂಬುದನ್ನರಿತು ಶಿರೋಮಣಿ ಒಳ್ಳೆಯ ರೀತಿಯಿಂದ ಎದ್ದು ನಿಂತು ನುಡಿದ: "ಇವಳನ್ನು ಭೈರವಿಯಾಗಿ ಮಾಡಿದ್ದು ಯಾರು ನಿಮಗೆ ಗೊತ್ತಿದೆಯೆ ಫಕೀರಸಾಹೇಬ? ಈ ತಾರಾದಾಸನೆ. ಈಗವನಿಗೆ ಇವಳು ಬೇಡಾಗಿದ್ದಾಳೆ. ಇವಳನ್ನು ಭೈರವಿಯಾಗಿ ಇಡಬಾರದೆಂದು ಅವನಿಗೆನಿಸಿದರೆ, ತೆಗೆಯುವುದು ಅವನ ಇಷ್ಟ. ಇದು ನನ್ನ ಅಭಿಪ್ರಾಯ!"

ಫಕೀರನೆಂದ: "ಶಿರೋಮಣಿ ಮಹಾಶಯ, ಇದು ನಿಮ್ಮ ಅಭಿಪ್ರಾಯ, ಇದು ತಾರಾದಾಸರ ಇಷ್ಟ, ಹೌದು, ಆದರೆ ಸಂಪತ್ತಿ ಬೇರೆಯವರದು! ಆ ಬೇರೆಯವರಿಗೆ ನಿಮ್ಮಿಬ್ಬರ ಮತವೂ ಸಮ್ಮತವಲ್ಲ; ಅದಕ್ಕೇನು ಮಾಡಬೇಕೆನ್ನುವಿರಿ?"

ಅವನ ಉತ್ತರವನ್ನು ಕೇಳಿ, ಅವನ ಮಾತಿನ ರೀತಿಯನ್ನು ನೋಡಿ ಬ್ಯಾರಿಸ್ಟರ್ ಸಾಹೇಬನು ನಗತೊಡಗಿದ. ಅವನೆಂದ: "ಈಗಿದ್ದ ಭೈರವಿ ಮಾಡಿದ ಅಪರಾಧದ ಮೂಲಕ ಅವಳು ದೇವಿಯ ಸೇವೆಗ ಸಂಪೂರ್ಣ ಅಯೋಗ್ಯಳೆಂದು ಇವರೆಲ್ಲರ ಮೂರು ಈ ಬಗ್ಗೆ ಅವಳಿಗೇನಾದರೂ ಹೇಳುವುದಿದೆಯೆ?" ಎಂದೆನ್ನುತ್ತ ಆನತಳಾಗಿ ನಿಂತಿದ್ದ ಷೋಡಶಿಯ ಕಡೆ ನೋಟವನ್ನು ಬೀರಿದ.

ಫಕೀರನೆಂದ: "ಇವಳನ್ನು ನಿಮ್ಮೆದುರಿಗೆ ಆರೋಪಿಯೆಂದು ನಿಲ್ಲಿಸಲಾಗಿದೆ. ಇವಳ ತಪ್ಪು ಅಸತ್ಯವೆಂದು ಸಿದ್ಧಪಡಿಸುವ ಭಾರವನ್ನು ಇವಳ ಮೇಲೆಯೆ ಹೇರುವುದು ಅನ್ಯಾಯವೆಂದು ನಿಮಗೆನಿಸುವುದಿಲ್ಲವೆ, ಬಾಬೂ ಸಾಹೇಬ?"

ಬ್ಯಾರಿಸ್ಟರ್ ಸಾಹೇಬನು ಒಳಗೊಳಗೆ ಲಜ್ಜಿತನಾದ. ಅವನೇನೂ ಮಾತನಾಡಲಿಲ್ಲ. ಶಿರೋಮಣಿ ಒದರಾಡುತ್ತ ಎದ್ದು ನಿಂತು ಪ್ರಶ್ನಿಸಿದ: "ಜಮೀದಾರ ಜೀವಾನಂದ ಚೌಧರಿಯವರು ಆಳುಗಳಿಂದ ಭೈರವಿಯನ್ನು ಹಿಡಿತರಿಸಿ ಇಡೀ ರಾತ್ರಿ ಬಂಧನದಲ್ಲಿಟ್ಟಿದ್ದು ಎಲ್ಲರಿಗೂ ಗೊತ್ತಿದೆ.

ಹೀಗಿದ್ದೂ ಮರುದಿನ ಮುಂಜಾನೆ ಮ್ಯಾಜಿಸ್ಟ್ರೇಟರು ಬಂದಾಗ, ಇವಳು ತನ್ನಿಚ್ಛೆಯಿಂದಲೇ ಅಲ್ಲಿಗೆ ಹೋಗಿದ್ದಳೆಂದೂ ಜಮೀನದಾರರಿಗೆ ಜಡ್ಡಾದದ್ದರಿಂದ ಸ್ವೇಚ್ಛೆಯಿಂದಲೇ ಅಲ್ಲಿ ಉಳಿದಳೆಂದೂ ಸುಳ್ಳೇ ಹೇಳಿದಳೇನು? ಇವಳು ನಿರ್ದೋಷಿಯೆ? ಇದಕ್ಕೆ ಉತ್ತರ ಹೇಳಿನ್ನಿರಿ!"

ಫಕೀರನೇ ಅದಕ್ಕೆ ಉತ್ತರವಿತ್ತ: "ಜಮೀನದಾರರ ಅತ್ಯಾಚಾರ ಅನಾಚಾರಗಳಿಂದ ರೋಗಿ ಸಿಟ್ಟಿನ ಭರದಲ್ಲಿ ಇವಳು ತಾನಾಗಿಯೇ ಅಲ್ಲಿಗೆ ಹೋದದ್ದು ಸುಳ್ಳಲ್ಲ, ಶಿರೋಮಣಿ ಮಹಾಶಯ ಮತ್ತೆ ಜಮೀನದಾರರೂ ಒಮ್ಮಿಂದೊಮ್ಮೆಲೆ ಜೇನೆ ಬಿದ್ದದ್ದೂ ನಿಜ."

ಈವರೆಗೂ ಜನಾರ್ದನ ರಾಯನು ವಾದವಿವಾದವನ್ನು ಮೌನವಾಗಿ ಆಲಿಸುತ್ತಿದ್ದ. ಇನ್ನು ತಾಳಿಕೊಂಡಿರಲಾರದೆ ಬಾಯಿಬಿಟ್ಟ: "ಇದು ನಿಜವಿದ್ದರೆ, ಫಕೀರ ಸಾಹೇಬ, ಆ ಅತ್ಯಾಚಾರಿಯನ್ನು ಉಳಿಸಲಿಕ್ಕೆ ಅವಳು ತಂದೆಗೆ ವಿರೋಧಿಯಾಗಿ ಮಾತನಾಡಿದ್ದೇಕೆ? ಅನಂಗೆ ಜಡ್ಡಾದರೆ ಇವಳಿಗೇನು? ಶುಶ್ರೂಷೆ ಮಾಡಲಿಕ್ಕೆ ಜಮೀನದಾರರೇನು ಇವನನ್ನು ಪಲ್ಲಕ್ಕಿ ಕಳಿಸಿ ಕರೆಯಿಸಿರಲಿಲ್ಲ! ತಾತ್ಪರ್ಯವಿಷ್ಟೆ --ಇನ್ನೇನನ್ನು ನಾವಿಡಲಾರೆವು; ಒಳಗೊಂದಲ ನಮಗೆಲ್ಲ ತಿಳಿದಿದೆ. ಅಲ್ಲದೆ, ಏನಾದರೂ ದೋಷವುಳ್ಳದ್ದರೆ ಇವಳೇ ಹೇಳಲಿ. ನೀವು ಮುಸಲ್ಮಾನರು, ಪರದೇಶದವರು, ಹಿಂದೂ ಧರ್ಮದ ತೊಡಕಿನಲ್ಲಿ ಮಧ್ಯಸ್ಥಿಕೆ ನಡೆಸುವ ಅಧಿಕಾರ ನಿಮಗಿಲ್ಲ."

ಶಿರೋಮಣಿಯ ಮಾತಿನ ಮರ್ಮ, ಉಪದೇಶದ ತೀವ್ರತೆ ಕುಳಿತವರಿಗೆಲ್ಲ ಝುಣಝುಣಾರನೆ ಹೊಳೆಯಿತು. ಬ್ಯಾರಿಸ್ಟರ್ ಸಾಹೇಬನೂ ಒಂದು ತರದ ವಿಚಲಿತನಾದ.

ಭೈರವಿ ಇಷ್ಟೊತ್ತಿನಕ ಮಾತಾಡಿರಲಿಲ್ಲ. ಆದರೀಗ ಅವಳ ಹೃದಯದಲ್ಲಿ ಉತ್ತರಕೊಡುವ ಪ್ರವೃತ್ತಿ ಉಕ್ಕೇರತೊಡಗಿತು. ಅದನ್ನರಿತು ಫಕೀರ ಸಾಹೇಬನು ಅವಳ ಕಡೆ ಕಿಂಚಿತ್ ನೋಡಿ, ಸುಮ್ಮನೆ ಕಿಂಚಿತ್ ನಕ್ಕು, ಬಳಿಕ ಜನಾರ್ದನ ರಾಯನ ಕಡೆ ಹೊರಳಿ ಪ್ರಸನ್ನಮುಖದಿಂದ ಉತ್ತರ ಕೊಡಲಾರಂಭಿಸಿದ: "ರಾಯ ಮಹಾಶಯ, ಬಹಳ ಹಿಂದಿನ ಸಂಗತಿ—ನಿಮ್ಮ ನೆನಪಿನಲ್ಲಿರಲಿಕ್ಕಿಲ್ಲ ಒಂದು ವೇಳೆ ಗುಡಿಯ ಬಲಗಡೆಯಿದ್ದ ಹಳೆಯ ಬೇವಿನ ಮರದ ಕೆಳಗೆ ನಾನು ಕೂಡುತ್ತಿದ್ದೆ. ಷೋಡಶಿಯಾಗ ಸಣ್ಣ ಹುಡುಗಿ.

ಆಗಿನಿಂದಲೂ ನಾನಿವಳನ್ನು 'ಮಗೂ' ಎಂದು ಕರೆಯುತ್ತಿದ್ದೇನ. ಮುಸಲ್ಮಾನನಾಗಿಯೂ ನಾನು ಆಗ ಈ ತಪ್ಪು ಮಾಡಿದೆ, ಕ್ಷಮಿಸಿರಿ. ಈ ಮಗಳ ಸಂಕಟ ಕಾಲದಲ್ಲಿ ನಾನು ಧಾವಿಸಿ ಬರಬಾರದೊ? ಮಗಳೆಂದರೆ ಅಷ್ಟು ತ್ಯಾಜ್ಯವೆ? ಕಃಪದಾರ್ಥವೆ? ಇಂದು ಮುಂಜಾನೆ ಇವಳ ಬಾಯಿಂದಲೇ ಇವಳ ತಾಯಿಯ ಲಜ್ಜಾಸ್ಪದ ಚರಿತ್ರೆಯನ್ನು ಹೇಳಿಸಲಿಕ್ಕೆ ನೀವು ಪ್ರಯತ್ನಿಸಿದಿರಿ. ಆಗ ನಿಮ್ಮ ಮಗಳೇ ನಿಮ್ಮನ್ನು ಜಬರಿಸಲಿಲ್ಲವೆ? ಆಗ ನೀವು ಹಿಂದಡಿಯಿಟ್ಟದ್ದು ಈ ಮಗಳ ದೆಸೆಯಿಂದಲೇ ಅಲ್ಲವೆ?—" ಎಂದು ಫಕೀರನು ಹೈಮವತಿಯ ಕಡೆ ಬೆರಳು ತೋರಿಸಿದ.

ಹತಬುದ್ಧಿಯಾದ ರಾಯನಿಗೆ ತಕ್ಕ ಉತ್ತರವು ಹೊಳೆಯದೆ "ಇದು ವ್ಯರ್ಥ ವಾದ" ಎಂದು ಮಾತ್ರ ನುಡಿದ.

ಫಕೀರನು ಮೊದಲಿನಂತೆಯೇ ನಗುತ್ತ ಹೇಳಿದ: "ಕಲ್ಲ ಮೇಲೆ ಬಿದ್ದರೆ ಚೆಲೋ ಬೀಜವೂ ನಿಷ್ಫಲವಾಗುವುದೆಂಬುದು ನನಗೀ ವಯಸ್ಸಿನಲ್ಲಿಯೂ ತಿಳಿಯುತ್ತದೆ. ನಾನು ಮುಖ್ಯಮಾತು ಆಡುತ್ತಿದ್ದೇನೆ. ಆ ಮಹಾಪಾಪಿ ಜಮೀದಾರನನ್ನು ಇವಳೇಕೆ ಉಳಿಸಲಿಕ್ಕೆ ಹೋದಳೋ ನನಗೆ ತಿಳಿಯದು: ಕೇಳಿದರೂ ಈಕೆ ಹೇಳುವುದಿಲ್ಲ. ಏನಾದರೂ ಕಾರಣವಿರಬೇಕೆಂದು ನನಗೆನಿಸುತ್ತದೆ. ಆದರೆ ಆ ಕಾರಣದ ಹಿಂದೆ ಅಡಗಿರುವ ಉದ್ದೇಶ ಕೆಟ್ಟದೆಂದು ನಿಮಗೆನಿಸುತ್ತದೆ. ಈ ಸಂದರ್ಭದಲ್ಲಿ ಮಾತಂಗಿ ಭೈರವಿಯ ವಿಷಯವನ್ನು ಎತ್ತಬಹುದಿತ್ತು. ಆದರೆ ಒಬ್ಬರನ್ನು ಒಳ್ಳೆಯವರನ್ನಾಗಿ ಮಾಡಲಿಕ್ಕೆ ಇನ್ನೊಬ್ಬರನ್ನು ಹಳಿಯುವುದು ನಮ್ಮ ಧರ್ಮದಲ್ಲಿ ನಿಷಿದ್ಧ; ಆದ್ದರಿಂದ ಅದನ್ನು ಬಿಟ್ಟುಬಿಡುತ್ತೇನೆ. ರಾಯಮಹಾಶಯರೇ, ನಿಮಗೆ ಎಷ್ಟೋ ಹೇಳುವುದಿದೆ. ಇದು ತಾರಾದಾಸರ ಮನೆಯಾಗಿದ್ದರೆ ನಾನು ನಡುವೆ ಬರುತ್ತಿದ್ದಿಲ್ಲ. ಪಾಪ, ಅವರು ತಮ್ಮ ಸದಸದ್ವಿವೇಕ ಬುದ್ಧಿಯಂತೆ ಏನಾದರೂ ಮಾಡುತ್ತಿರುತ್ತಾರೆ. ಆದರೆ ನೀವೆಲ್ಲರೂ, ವಿಶೇಷತಃ ನೀವು, ಈ ರೀತಿ ನಡುಕಟ್ಟಿಕೊಂಡು ನಿಂತದ್ದೇಕೆ? ಷೋಡಶಿ ಒಬ್ಬಳೇ ಅಲ್ಲ, ಇಂಥ ಹುಡುಗಿಯರು ಅನೇಕರಿದ್ದಾರೆ. ಈ ತುಂಬಿದ ಊರೊಳಗೆ ಪ್ರತಿ ರಾತ್ರಿಯೂ ಇಂಥ ಹುಡುಗಿಯರ ಮಾನಭಂಗವನ್ನು ಯಾರಾದರೂ ಮಾಡುತ್ತಿರುವಾಗ ಈ ಶಿರೋಮಣಿಗಳು ಎಲ್ಲಿರುತ್ತಾರೆ? ಎಲ್ಲಿರುತ್ತಾರೆ

ಜನಾರ್ದನ ರಾಯರು? ಬಡವರ ಸರ್ವಸ್ವವನ್ನೂ ಹಿಂಡಿ ಐದಾರು ಸಾವಿರ ರೂಪಾಯಿ ಸುಲಿದುಕೊಂಡು ಅವರು ಹೋದರು, ಹೊಲ ಮನೆಗಳನ್ನು ಒತ್ತೆಹಾಕಿ ಸಾಲ ತಂದು ಜನರು ಹಣ ತೆತ್ತರು, ಆಗ ನೀವು ನಿಮ್ಮ ಎದೆಯ ರಕ್ತವನ್ನು ಎಷ್ಟು ಬತ್ತಿಸಿದಿರಿ ಅವರಿಗಾಗಿ? ಹೋಗಲಿ ರಾಯಮಹಾಶಯ, ನಿಮ್ಮ ಮಗಳು ಅಳಿಯ ಇದ್ದಾರೆ, ಅವರೆದುರಿಗೆ ನಿಮ್ಮ ಮಹಾಪಾತಕಗಳನ್ನು ಅಳೆದು ತೋರಿಸುವುದಿಲ್ಲ." ಎಂದು ಮುಸಲ್ಮಾನ ಫಕೀರನು ಸುಮ್ಮನಾದ.

ಅವನ ಭಾಷಣದಲ್ಲಿಯ ಆರೋಪಗಳ ಕೊನೆಯ ವಾಕ್ಯವು ಪೂರ್ಣವಾಗಿದ್ದರೂ ಪೂರ್ಣವಾಗಲಿಲ್ಲವೆಂದು ಎಲ್ಲರಿಗೂ ಎನಿಸಿತು. ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಎಲ್ಲೆಲ್ಲಿಯೂ ನಿಃಸ್ತಬ್ಧತೆ. ನಾಲ್ಕು ಗೋಡೆಗಳಿಂದಲೂ ಅಸ್ಫುಟವಾದ ಧಿಕ್ಕಾರಧ್ವನಿ ಪ್ರತಿಧ್ವನಿತವಾಗುತಿತ್ತು.

ಹೈಮವತಿ ಯಾರನ್ನೂ ಕಣ್ಣೆತ್ತಿ ನೋಡಲಿಲ್ಲ. ಮೋರೆ ಕೆಳಗೆ ಹಾಕಿಕೊಂಡು ನೀರವವಾಗಿ ಮೆಲ್ಲನೆ ಒಳಕ್ಕೆ ಹೋದಳು. ಬ್ಯಾರಿಸ್ಟರ್ ಸಾಹೇಬನು ಕುಳಿತಲ್ಲಿ ಕುಳಿತಂತೆಯೇ ಸ್ತಬ್ಧವಾಗಿ ಕುಳಿತುಬಿಟ್ಟ.

"ನಡೆ ಮಗೂ, ನಾವು ಹೋಗುವ" ಎಂದು ಮತ್ತೊಂದು ಶಬ್ದವನ್ನು ಕೂಡ ಆಡದೆ ಫಕೀರನು ಷೋಡಶಿಯನ್ನು ಕರೆದುಕೊಂಡು ಹೊರಟುಹೋದ.

ಅಂಗಳದ ಬಾಗಿಲ ಬಳಿ ಹೈಮವತಿ ನಿಂತಿದ್ದಳು. ಅವಳ ಎರಡು ಕಣ್ಣುಗಳಲ್ಲೂ ನೀರು ತುಂಬಿದ್ದಿತು. ಕರುಣಾದೃಷ್ಟಿಯಿಂದ ಫಕೀರನ ಕಡೆ ನೋಡುತ್ತ ಅವಳೆಂದಳು: "ಬಾಬಾಜಿ, ನನ್ನ ಪತಿಯನ್ನು ಕ್ಷಮಿಸಿರಿ."

"ಏತರ ಸಲುವಾಗಿ ಮಗೂ?" ಆಶ್ಚರ್ಯ ಚಕಿತನಾಗಿ ಫಕೀರನು ಕೇಳಿದ.

ಈ ಪ್ರಶ್ನೆಗೆ ಉತ್ತರವೀಯದೆ ಹೈಮವತಿ ಕೇಳಿದಳು: "ಅವರೊಂದಿಗೆ ಆಶ್ರಮಕ್ಕೆ ಬಂದರೆ ನಿಮ್ಮ ದರ್ಶನವಾಗುವುದೆ?"

ಫಕೀರನು ನಕ್ಕು ಸ್ನೇಹದಿಂದ ಹೇಳಿದ: "ದರ್ಶನವಾಗುವುದು ಹಾಗೇ. ನಿಮ್ಮಿಬ್ಬರಿಗೂ ನಾನೇ ಆಮಂತ್ರಣ ಕೊಡುತ್ತೇನೆ. ಪುರಸತ್ತಾದಾಗ ಅಗತ್ಯವಾಗಿ ಬರ್ರಿ."

೯

ದೇವಸ್ಥಾನ ಸಂಬಂಧದ ಅಧ್ಯಾಯವು ಇಲ್ಲಿಗೇ ಮುಗಿಯುವುದಿಲ್ಲ ವೆಂದು ಷೋಡಶಿ ಅರಿತಿದ್ದಳು. ಆದರೆ ಕನಸು ಮನಸಿನಲ್ಲಿಲ್ಲದ ನಿಟ್ಟನಿಂದ ಅವಳಿಗೊಂದು ಸಂಕಟವೊದಗಿತು.

ಫಕೀರಸಾಹೇಬನು ಇಲ್ಲಿದ್ದನೆಂದರೆ ಆಗಾಗ ಅವಳಲ್ಲಿಗೆ ಬರುತ್ತಿದ್ದ. ನಿನ್ನೆ ಸಂಜೆಗೇ ಅವನು ಬಂದು ಹೋಗಿದ್ದ. ಆಮೇಲೆ ಒಂದು ರಾತ್ರಿ ಮಾತ್ರ ಕಳೆದಿದೆ. ಇನ್ನು ಇಂದೇ ಅವನು ಮತ್ತೆ ಬರುವನೆಂಬುದು ಖಂಡಿತ ವಿರಲಿಲ್ಲ. ಷೋಡಶಿ ಮೈತೊಳೆದುಕೊಂಡು ಮನೆಗೆ ಬಂದಳು: ಅಷ್ಟರೊಳ ಗೇ ಅವನು ಬಂದುಬಿಟ್ಟಿದ್ದ. ಅವಳು ಲಗುಬಗೆಯಿಂದ ನಮಸ್ಕರಿಸಿ ಆಸನವನ್ನಿತ್ತು ಉದ್ವಿಗ್ನತೆಯಿಂದ ಪ್ರಶ್ನಿಸಿದಳು: "ಇಷ್ಟು ನಸುಕಿನಲ್ಲಿಯೇ ಎಲ್ಲಿಗೇ?"

ಕುಳಿತುಕೊಂಡು ಕೊಂಚ ನಗಲು ಪ್ರಯತ್ನಿಸಿ ಫಕೀರನೆಂದ: "ನಾನು ಫಕೀರ. ಸುಖದುಃಖಗಳ ಪರಿವೆ ನನಗೆ ಅಷ್ಟೊಂದಿಲ್ಲ, ಮಗೂ. ಆದರೂ ನಿನ್ನೆರಾತ್ರಿ ನನಗೆ ಚೆನ್ನಾಗಿ ನಿದ್ದೆ ಹತ್ತಲಿಲ್ಲ. ದೇಹಧಾರಣೆಯ ಮೂಲಕ ಇಷ್ಟೊಂದು ತೊಂದರೆ! ಎಂದು ಈ ದೇಹ ಮಣ್ಣಾಗುವುದೊ!"

ಏನಾದರೂ ದೇಹಾಲಸ್ಯವುಂಟಾಗಿರಬಹುದೆಂದು ಷೋಡಶಿ ಭಾವಿ ಸಿದಳು. "ಪ್ರಕೃತಿ ಸ್ವಸ್ಥವಾಗಿರಲಿಲ್ಲವೇನು?" ಎಂದು ಪ್ರಶ್ನಿಸಿದಳು.

ಫಕೀರನು ಅಡ್ಡವಾಗಿ ತಲೆ ಅಲ್ಲಾಡಿಸಿದ. "ಇಲ್ಲ. ನನ್ನ ಪ್ರಕೃತಿ ಚೆನ್ನಾಗಿಯೇ ಇದೆ. ನಿನ್ನೆ ಸಂಜೆಯು ಮುಂದೆ ಈ ಜನ ನನ್ನ ಗುಡಿಸಲಲ್ಲಿ ಪಾದಧೂಳಿ ಕೆಡಹಲು ಬಂದಿದ್ದರು. ಸಂಗಡ ಅಳಿಯ ದೇವರೂ ಇದ್ದರು, ಏಕಕೌಡಿಯೂ ಇದ್ದ. ಅವನ ಗುರುತು ನನಗಿದೆ—ಹಾಗೆ ಅವನು ಎಷ್ಟೋ ಮಾತನಾಡಿದ. ಆದರೂ ಆ ವಿಷಯದಲ್ಲಿ ನಿನ್ನನ್ನು ಒಂದೆರಡು ಮಾತು ಕೇಳದಿರುವುದು ನನಗೆ ಅಸಹ್ಯವಾಯಿತು, ಮಗೂ."

"ಕೇಳಿರಿ."

"ಇಲ್ಲಿ ನೋಡು, ನಾನು ಮುಸಲ್ಮಾನ: ನಿಮ್ಮ ದೇವ ದೇವತೆಗಳ ವಿಷಯವನ್ನು ನಾನು ಚರ್ಚಿಸುವುದು ಸರಿಯಾಗಲಾರದು. ಆದರೆ ನಿನ್ನನ್ನು

ನಾನು ಮಗಳೆಂದು ಭಾವಿಸಿರುವುದರಿಂದ ಕೇಳುತ್ತೇನೆ— ಚಂಡಿಯ ಪೂಜೆಯನ್ನು ಮಾಡುವುದು ನಿನ್ನ ಕೈಯಿಂದಾಗದೆಂದು ನಿನಗೇ ಎನಿಸೀತೇನು ?"

ಷೋಡಶಿ ಗೋಣುಹಾಕಿ ಹೌದೆಂದು ಸೂಚಿಸಿದಳು.

"ಆದರೆ ಈಪ್ರೊತ್ತಿನವರೆಗೆ ಈ ಸಮಸ್ಯೆ ಉದ್ಭವಿಸಿದ್ದಿಲ್ಲ—"

ಇದಕ್ಕೆ ಷೋಡಶಿ ಸುಮ್ಮನಿದ್ದುದನ್ನು ಕಂಡು ಫಕೀರನೆಂದ: "ಈ ಮಂದಿಗೆ ನೀನು ಮೊದಲೇ ಬರ್ಷಣ. ನೀನೇ ಕೂತು ಹೀಗೆ ಮಾಡಿದರೆ ಅವರಿಗೆ ಏನುತ್ತರ ಹೇಳಬೇಕು ?"

ಈಗಲೂ ಷೋಡಶಿ ಬಾಯಿಬಿಡದಿರಲು ಫಕೀರನ ಮುಖ ಮುದ್ರೆ ಅತ್ಯಂತ ಗಂಭೀರವಾಯಿತು. ಅವನು ಕೆಲಹೊತ್ತು ಯೋಚಿಸಿ ಬಳಿಕ ಮಾತನಾಡಿದ: "ಇದರ ಕಾರಣವನ್ನು ಹೇಳಲು ಬರುವಂತಿದ್ದರೆ ನೀನು ನನಗೆ ಖಂಡಿತ ಹೇಳುತ್ತಿದ್ದೆ. ಇವರ ಹೊರತು ಏಕಕೌಡಿ ಇನ್ನೂ ಒಂದು ಮಾತು ಹೇಳಿದ. ನಿನ್ನನ್ನು ಸಂಗಡ ಕರೆದುಕೊಂಡು ಹೋಗಬೇಕೆಂದು ಜಮೀದಾರರ ಇಚ್ಛೆಯಿತ್ತಂತೆ, ಇನ್ನೊಂದು ಪಲ್ಲಕ್ಕಿಯನ್ನು ಸಿದ್ಧಪಡಿಸಲಿಕ್ಕೆ ಅವರು ಅಪ್ಪಣೆ ಕೊಟ್ಟಿದ್ದರಂತೆ, ಹೊರಡುವವರೆಗೂ ನಿನ್ನ ಹಾದಿ ನೋಡಿದರಂತೆ."

ಷೋಡಶಿ ಈಗ ಮಾತನಾಡಿದಳು: "ಅವರಿಗೆ ಹಾಗೆನಿಸಿದ್ದು ನನ್ನ ತಪ್ಪೆ ?"

"ಅಲ್ಲ, ನಿಜಕ್ಕೂ ಅಲ್ಲ. ಆದರೆ ಆ ಸಂಗತಿ ಕೇಳಲಿಕ್ಕೇ ಅಷ್ಟು ಹೇಸಿಕೆಯೆನಿಸಿದ್ದರಿಂದ ನಾನು ಸುಮ್ಮನೆ ಉಲ್ಲೇಖಿಸಿದೆ. ಒಳ್ಳೇದು ಮಗೂ, ಈ ಪ್ರಕರಣದ ಬಗ್ಗೆ ಅಲ್ಲದ ಸಲ್ಲದ ಸಂಗತಿಗಳು ಹಬ್ಬಿವೆಯಲ್ಲ, ಅವುಗಳ ತಳದಲ್ಲಿ ಏನಿದೆಯೆಂಬುದನ್ನು ನನಗೆ ಹೇಳುವೆಯಾ ? ಆ ಮನುಷ್ಯ ನನ್ನು ಉಳಿಸುದಕ್ಕೆ ನೀನು ನಿನ್ನ ಮೈಮೇಲೆ ಏಕೆ ಸಂಕಟ ತಂದುಕೊಂಡೆ ಯೆಂಬುದೇ ನನಗೆ ತಿಳಿಯಲೊಲ್ಲದು—"

ಈ ಪ್ರಶ್ನೆಗೆ ಉತ್ತರ ಕೊಡಬಾರದೆಂದು ಮೊದಲು ಷೋಡಶಿಗೆನಿಸಿತು. ಮುದುಕನ ಉದ್ವಿಗ್ನ ಮುಖಮುದ್ರೆಯ ಕಡೆಗೆ, ಕಕ್ಕುಲತೆಯ ದೃಷ್ಟಿಯ ಕಡೆಗೆ ನೋಡಿದಾಗ ಅವಳಿಗೆ ಸುಮ್ಮನಿರುವುದಾಗಲಿಲ್ಲ. "ಫಕೀರ ಸಾಹೇಬ,

ಬೇನೆಯಿಂದ ಬಳಲುತ್ತಿದ್ದ ಮನುಷ್ಯನನ್ನು ಸೆರೆಮನೆಗೆ ಕಳಿಸಿದ್ದರೆ ಉಚಿತ ವಾಗುತ್ತಿತ್ತೇನು?" ಎಂದು ಅವಳು ಕೇಳಿದಳು.

ಫಕೀರನಿಗೆ ಆಶ್ಚರ್ಯವಾಯಿತು. ಅವನಿಗೆ ಮನಸಿನಲ್ಲಿ ಸಿಟ್ಟೂ ಬಂದಿರಬೇಕು. ಅವನೆಂದ: "ಅದರ ಸಂಚೇತಿ ನಿನಗೇತಕ್ಕೆ? ಸರಕಾರ ಅದನ್ನು ನೋಡಿಕೊಳ್ಳುತ್ತಿತ್ತು. ಸೆರೆ ಮನೆಯಲ್ಲಿಯೂ ಆಸ್ಪತ್ರಿಯುಂಟು. ಅಲ್ಲಿ ಉಪಚಾರ ನಡೆಯುತ್ತಿತ್ತು. ಇಷ್ಟಕ್ಕಾಗಿಯೇ ನೀನು ಹಾಗೆ ಮಾಡಿದ್ದರೆ ನಿನ್ನದು ತಪ್ಪೆಂದು ನನ್ನ ಮತ."

ಷೋಡಶಿ ಅವನ ಕಡೆ ನೋಡುತ್ತಲಿದ್ದಳು ಮಾತ್ರ.

ಫಕೀರನೆಂದ: "ಆಗುವುದು ಆಗಿ ಹೋಗಿದೆ. ಇನ್ನು ಆ ತಪ್ಪನ್ನು ತಿದ್ದಿಕೊಳ್ಳಬೇಕು."

"ಎಂದರೆ?"

"ಆ ಮನುಷ್ಯನು ಮಾಡಿದ ಅಪರಾಧ ಅತ್ಯಾಚಾರಗಳು ಅನಂತ ವಾಗಿವೆ. ಅವನಿಗೆ ಶಿಕ್ಷೆಯಾಗಲೇಬೇಕು."

ಷೋಡಶಿ ಅದೆಷ್ಟೋ ಹೊತ್ತು ನೀರವವಾಗಿ ನಿಶ್ಚಲವಾಗಿದ್ದಳು. ಆ ಮೇಲೆ ಮೆಲ್ಲಮೆಲ್ಲನೆ ಉಸುರಿದಳು: "ನನಗೆಲ್ಲ ಗೊತ್ತಿದೆ. ಅವರಿಗೆ ಶಿಕ್ಷೆ ಯಾಗುವುದು ನಿಮ್ಮ ದೃಷ್ಟಿಯಿಂದ ಅಗತ್ಯವೆಂಬುದರಲ್ಲಿ ಸಂದೇಹವಿಲ್ಲ. ಆದರೆ ನನಗೆ ಏನನ್ನೂ ಹೇಳಲಿಕ್ಕೆ ಬರುವಂತಿಲ್ಲ. ಅವರಿಗೆ ವಿರೋಧವಾಗಿ ಸಾಕ್ಷ್ಯಹೇಳುವುದು ನನಗಂತೂ ಸಾಧ್ಯವಿಲ್ಲ."

"ಇದೇನು ಮತ್ತೆ ಷೋಡಶಿ?"

ಷೋಡಶಿ ಸ್ತಬ್ಧವಾಗಿ ತಲೆ ತಗ್ಗಿಸಿಕೊಂಡು ನಿಂತಳು. ಎಷ್ಟೋ ಹೊತ್ತು ಅವಳ ಬಾಯಿಂದ ಮಾತೇ ಹೊರಡದಂತಾಯಿತು. ಆ ವೇಳೆಗೆ ಮನೆಗೆಲಸದ ಹೊತ್ತು ಬಾಗಿಲ ಬಳಿ ಬರುತ್ತಿರುವುದನ್ನು ಕಂಡು, ಫಕೀರನು ಮಾತನ್ನು ಮುಗಿಸುತ್ತ ಮೆಲ್ಲಗೆ ಹೇಳಿದ: "ಹಾಗಾದರೆ ನಾನಿನ್ನು ಬರುತ್ತೇನೆ."

ಷೋಡಶಿ ಬಾಗಿ ನಮಸ್ಕರಿಸಿದಳು. ಅವನು ಹೊರಟು ಹೋದ.

ಅವನ ಪ್ರಶಾಂತವಾದ ಮುಖದಲ್ಲಿಯ ಗಂಭೀರ ವಿಷಣ್ಣತೆ, ಕೆಲಸ ಬೊಗಸೆ ಮಾಡುತ್ತಿರುವಾಗಲೂ ಷೋಡಶಿಯ ಕಣ್ಣಲ್ಲಿ ಕಟ್ಟಿತ್ತು. ಅವನು

ಏನು ಹೇಳಬೇಕೆಂದಿದ್ದನೋ ಏನೋ; ಏನೂ ಹೇಳದೆ ಹೊರಟುಹೋದ, ನಿಜ. ಆದರೆ ಅವನ ಆಡದ ಶಬ್ದಗಳ ಬೇರೆ ಬೇರೆ ಸ್ವರೂಪದ ಧ್ವನಿಗಳು ಅವಳ ಕಿವಿಯೊಳಗೆ ತಾಗುತ್ತಿದ್ದವು. ಅವನು ಇಂದಿನವರೆಗೂ ಅವಳನ್ನು ಎಷ್ಟು ವಾತ್ಸಲ್ಯದಿಂದ, ಎಷ್ಟು ಪ್ರೇಮದಿಂದ ನೋಡುತ್ತಿದ್ದ! ಇಂದು ತನ್ನಿಂದ ಏನೂ ತಿಳಿದುಕೊಳ್ಳಲಾಗದೆ ಹತಾಶನಾಗಿ ಹೋದ. ತಾನು ಅವನ ಮನಸಿನಿಂದ ಜಾರಿ ಬಿದ್ದಳು ಎಂದವಳಿಗೆ ಸ್ಪಷ್ಟವಾಗಿ ಕಾಣಿಸತೊಡಗಿತು. ಆದರಿಂದ ಅವಳಿಗಾದ ನಷ್ಟದ ಕಲ್ಪನೆ ಅವಳಿಗಲ್ಲದೆ ಇನ್ನಾರಿಗೂ ಬರುವುದು ಶಕ್ಯವಿಲ್ಲ.

ಬಿಟ್ಟ ಬಾಣವನ್ನು ಹಿಂತೆಗೆದುಕೊಳ್ಳುವ ಹಂಚಿಕೆ ಅವಳಿಗೆ ತೋಚಲಿಲ್ಲ. ತನ್ನ ಬಾಲ್ಯದ ಚರಿತ್ರೆಯನ್ನು ಯಾರ ಮುಂದೂ – ಫಕೀರನ ಮುಂದೆ ಕೂಡ – ಹೇಳುವುದು ಅವಳಿಗೆ ಸಾಧ್ಯವಿರಲಿಲ್ಲ. ಆ ಹಳೆಯ ಕತೆಯನ್ನು ಹೊರಗೆಡಹುವುದು ಆ ಹುಡುಗಿಗೆ ಎಷ್ಟು ಲಜ್ಜಾಸ್ಪದ! ಪರಲೋಕವಾಸಿಯಾದ ತಾಯಿಯ ಮರ್ಯಾದೆಯನ್ನು ಜಗತ್ತಿನ ಮುಂದೆ ತೆರೆದಿಟ್ಟು ದುರ್ನಾಮವನ್ನು ಪ್ರಚುರಪಡಿಸುವುದೆ!

ಅಷ್ಟಕ್ಕೂ ಕೊನೆಗಾಣುವಂತಿರಲಿಲ್ಲ. ಗಂಡನನ್ನು ಮುಟ್ಟುವುದು ಭೈರವಿಗೆ ನಿಷಿದ್ಧ. ಅನಾದಿಕಾಲದಿಂದಲೂ ಈ ನಿಯಮವು ಕಡುತರವಾಗಿ ನಡೆದು ಬಂದಿದೆ. ಉಚಿತವಿರಲಿ ಅನುಚಿತವಿರಲಿ, ಇಡೀ ರಾತ್ರಿ ಜೀವಾನಂದನ ಆರೈಕೆಯನ್ನು ಮಾಡಿದ ಕೈಗಳಿಂದ ದೇವಿಯ ಪೂಜೆ ಮಾಡುವುದು ಯೋಗ್ಯವಲ್ಲವೆಂಬುದು ಖಂಡಿತ. ಇದೇ ಸ್ಥಳದಲ್ಲಿ, ಇದೇ ದೇವಿಯ ಸಭಾಮಂಡಪದಲ್ಲಿ ತಾರಾದಾಸನು ಅಜ್ಞಾತ ಕುಲಶೀಲ ವ್ಯಕ್ತಿಯೊಡನೆ ಅವಳ ಮದುವೆ ಮಾಡಿದಾಗ, ಈ ವಿಷಯದಲ್ಲಿ ಏನು ಹೇಳುವುದೂ ಅವಳಿಗೆ ಶಕ್ಯವಿರಲಿಲ್ಲ, ಹೇಳಲೂ ಇಲ್ಲ.

ಎಲ್ಲವನ್ನು ತಿಳಿದೂ ತಿಳಿದೂ ಷೋಡಶಿ ಈ ವರೆಗೆ ನಿಃಸಂಕೋಚವಾಗಿ ಭೈರವಿಯ ಕೆಲಸವನ್ನು ಮಾಡುತ್ತಲಿದ್ದಳು. ಸಮಾಜದ ಎದುರಿನಲ್ಲಿ ಆ ಎಲ್ಲ ಸಂಗತಿಗಳನ್ನು ಒಪ್ಪಿಕೊಂಡಿದ್ದರೆ ಪರಿಣಾಮವೇನಾಗುತ್ತಿತ್ತೆಂಬ ಕಲ್ಪನೆಯೂ ಅವಳಿಗಿರಲಿಲ್ಲ.

ಇದಾಯಿತು ಒಂದು ಪಕ್ಷದ ವಿಷಯ. ಇನ್ನೊಂದು ಪಕ್ಷದ ಜನ

ಏನೇನ್ನುವರೆಂಬುದಾದರೂ ಅವಳಿಗೆಲ್ಲಿ ಗೊತ್ತಿತ್ತು? ಒಂದಾನೊಂದು ದಿನ ಜೀವಾನಂದನು ಅವಳೊಡನೆ ಮದುವೆಯಾಗುವ ಹುಡುಗಾಟವನ್ನು ಹೂಡಿ ಹೊರಟು ಹೋಗಿದ್ದ. ಅದೆಲ್ಲವೂ ಕಪೋಲಕಲ್ಪಿತ ಕಥೆಯೆಂದು ಅವನಿಂದು ಹಾರಿಸಿಕೊಳ್ಳಲು ಯತ್ನಿಸಿದರೆ, ಆ ಇತಿಹಾಸದ ಸತ್ಯತೆಯನ್ನು ಸಿದ್ಧಪಡಿಸಲು ಅವಳ ಹೊರತು ಮತ್ತೊಂದು ವ್ಯಕ್ತಿ ಜೀವಂತವಿಲ್ಲ.

ಮನೆಗೆಲಸಗಳ ಬಗ್ಗೆ ರಾಣಿಯ ತಾಯಿ ಕೇಳಿದ ಯಾವ ಪ್ರಶ್ನೆಗೆ ಅವಳು ಏನು ಉತ್ತರವಿತ್ತಳೆಂಬುದು ಅವಳಿಗೇ ಗೊತ್ತಾಗಲಿಲ್ಲ. ಪೂಜಾರಿ ಏನನ್ನೋ ಕೇಳಲಿಕ್ಕೆ ಬಂದಿದ್ದ; ಅವನಿಗೆ ಅವಳು ಏನು ಅಪ್ಪಣೆ ಕೊಡಿಸಿದಳೆಂಬುದೂ ಅವಳ ಲಕ್ಷ್ಯದಲ್ಲಿಲ್ಲ. ನಿತ್ಯದಂತೆ ಪೂಜಾಹ್ನಿಕಕ್ಕೆ ಕುಳಿತಾಗ ಮನಸನ್ನು ಸ್ಥಿರಗೊಳಿಸುವುದೂ ಸೋಡಶಿಗಾಗಲಿಲ್ಲ. ತನ್ನ ಮನಸು ಹೀಗೇಕೆ ಅಸ್ಥಿರವಾಗಿದೆ, ಉದ್ವಿಗ್ನವಾಗಿದೆ ಎಂಬುದು ಯಥಾರ್ಥವಾಗಿ ಅವಳಿಗೆಲ್ಲಿ ತಿಳಿಯುತ್ತಿತ್ತು? ಯಾವುದೋ ಅಸ್ಫುಟವಾದ ಅನುಚ್ಚಾರಿತವಾದ ವಾಕ್ಯವು ಬೆಳಗಿನ ಹೊತ್ತೆಲ್ಲಾ ಅವಳನ್ನು ಗೊಂದಲಗೆಡಿಸಲು ಕಾರಣವಾಗಿತ್ತು.

ಅಡಿಗೆ ಅಲ್ಲಿಯೇ ಕಳಿತಿತು. ಅವಳು ಅಡುಗೆ ಮನೆಯೊಳಗೆ ಹೋಗಲಿಲ್ಲ ಕೂಡ.

ಈ ರೀತಿಯಾಗಿ ಇಡೀ ದಿನವು ಹೇಗೋ ಹೋಯಿತು. ಮೇಲೆ ಮೋಡಗಳು ನೆರೆಯ ತೊಡಗಿದವು. ಚಳಿಗಾಲದಲ್ಲಿ ಮೂರನೆಯ ಪ್ರಹರದ ಅನಂತರದ ಇಳಿಹೊತ್ತಿನಲ್ಲಿ ಮೋಡಗವಿದಿರುವಾಗ ಮನೆಯಲ್ಲಿರುವುದು ಅಸಾಧ್ಯವಾದುದರಿಂದ ಅವಳು ಮನೆಯಿಂದ ಹೊರಬಿದ್ದಳು. ಫಕೀರ ಸಾಹೇಬನ ನೆನಪಾಗಲು ನದಿಯ ಆಕಡೆ ಹೋಗಲು ಹೊರಟಳು. ಹಿಂದಕ್ಕೆ ವಿಪಿನನನ್ನೋ ದಿಗಂಬರನನ್ನೋ ಜೊತೆಗೆ ಕರೆದುಕೊಂಡು ಹೋಗುತ್ತಿದ್ದಳು. ಇಂದು ತುಂಬಿದ ಬೀದಿಯಲ್ಲಿ ನಿಂತು ಅವರನ್ನು ಕರೆಯುವ ಧೈರ್ಯ ಅವಳಿಗಾಗಲಿಲ್ಲ, ಪ್ರವೃತ್ತಿಯೂ ಆಗಲಿಲ್ಲ. ಹೊಲಗಳಲ್ಲಿ ಒಬ್ಬಳೇ ಅವಸರವಸರವಾಗಿ ನಡೆದಳು. ಮನೆಯ ಬಾಗಿಲನ್ನಿಕ್ಕಲಿಲ್ಲವೆಂಬುದೂ ಅವಳಿಗೆ ಲಕ್ಷ್ಯವಿಲ್ಲ.

ದೂರದ ದಾರಿಯಲ್ಲ; ಹೆಚ್ಚೆಂದರೆ ಅರ್ಧ ಹರದಾರಿ. ನದಿಯಲ್ಲಿ

ನೀರೂ ಹೆಚ್ಚಿರಲಿಲ್ಲ. ಸಹಜವಾಗಿ ನಡೆದು ದಾಟಬಹುದಾದ ಕಾಲುಹೊಳೆ. ಷೋಡಶಿ ನಿತ್ಯದ ಅಭ್ಯಾಸದಿಂದ ವಿಶೇಷ ಗಮನ ಕೊಡದೆಯೆ ಹೊಳೆಯನ್ನು ದಾಟಿದಳು. ತಿರುಗಿ ಬರುವುದೇ ಅವಳಿಗೆ ಚಿಂತೆಯಾಗಿತ್ತು. ಆದರೆ ಹೊತ್ತು ಮುಳುಗಿದ ಬಳಿಕ ಫಕೀರಸಾಹೇಬನು ತನ್ನನ್ನೊಬ್ಬಳನ್ನೇ ಕಳುಹಿಸುವುದಿಲ್ಲವೆಂಬುದು ಅವಳಿಗೆ ಖಂಡಿತ ಗೊತ್ತು.

ನಿರ್ಜನವಾದ ಮಾರ್ಗ. ಅದರಲ್ಲಿಯೂ ಹೊಳೆದಂಡೆಯ ಜನಹೀನವಾದ ಮಳಲ ಬಯಲು. ಆದರೂ ಸಂಜೆಯಾದುದನ್ನು ಅವಳು ಲೆಕ್ಕಿಸಲಿಲ್ಲ. ಅವಳ ಮನಃಸ್ಥಿತಿಯೇ ಅಷ್ಟು ವಿಲಕ್ಷಣವಾಗಿತ್ತು. ಬಾರುಈ ನದಿಯ ಆಚೆಯ ದಡದಲ್ಲಿದ್ದ ದೊಡ್ಡ ಆಲದ ಮರದಡಿಯ ಫಕೀರನ ಗುಡಿಸಲನ್ನು ತಲುಪಿದಳು.

ತಲುಪಿದೊಡನೆ ಮೊದಲು ಭೆಟ್ಟಿಯಾದ ವ್ಯಕ್ತಿಯನ್ನು ಕಂಡು ಅವಳು ಆಶ್ಚರ್ಯಚಕಿತಳಾದಳು. ಅವನು ಫಕೀರಸಾಹೇಬನಲ್ಲ, ಬ್ಯಾರಿಸ್ಟರ್ ಸಾಹೇಬ. ಅವನೀಗ ನಿತ್ಯದ ಕೋಟು ಪಾಟ್ಲೂನು ಬಿಟ್ಟು ಸಾಮಾನ್ಯ ಬಂಗಾಲಿ ಗೃಹಸ್ಥನಂತೆ ದೋತರವನ್ನುಟ್ಟು ಉಪ್ಪರಣೆಯನ್ನು ಹೊದ್ದಿದ್ದ. ಅಲ್ಲಿ ಷೋಡಶಿಯ ಭೆಟ್ಟಿಯಾದೀತೆಂದು ಅವನೂ ಬಗೆದಿರಲಿಲ್ಲ. ಆ ಅಕಲ್ಪಿತ ಸಂದರ್ಭದಲ್ಲಿ ಹೇಗೆ ವರ್ತಿಸಬೇಕೆಂಬುದು ತಟ್ಟನೆ ಹೊಳೆಯಲಿಲ್ಲ ಅವನಿಗೆ. ನಿತ್ಯದ ರೂಢಿಯಂತೆ ಎದ್ದು ನಿಂತು ಅಂತೂ ಇಂತೂ ಒಂದು ನಮಸ್ಕಾರ ಮಾಡಿದ.

ನಾಲ್ಕೂ ಕಡೆ ಒಮ್ಮೆ ನೋಟವನ್ನು ತಿರುಗಿಸಿ, ಷೋಡಶಿ ಆದರದಿಂದ ಪ್ರಶ್ನಿಸಿದಳು: "ಇವರೆಲ್ಲಿದ್ದಾರೆ?"

"ನಾನೂ ಇದನ್ನೇ ಕೇಳುವವನಿದ್ದೆ. ಇಲ್ಲಿಯೇ ಸಮೀಪದಲ್ಲಿ ಎಲ್ಲಿಯಾದರೂ ಹೋಗಿರಬಹುದೆಂದು, ಒಂದು ಗಂಟೆ ಸಮಯವಾಯಿತು, ಕಾಯುತ್ತಿದ್ದೇನೆ" ಬಸು ಸಾಹೇಬನು ಹೇಳಿದ.

"ಸಂಜೆಯಾದ ಬಳಿಕ ಅವರು ಹೊರಗೆಲ್ಲಿಯೂ ನಿಲ್ಲುವುದಿಲ್ಲ. ಈಗ ಬಂದಾರು" ಭೈರವಿ ಶಾಂತವಾಗಿ ನುಡಿದಳು.

"ಇಲ್ಲಿ ಇದ್ದರೆ ತಾನೆ ಆ ನಿಯಮ – ನಾನೂ ಕೇಳಿದ್ದೇನೆ. ಆದರೆ ಸಂಜೆ ತಿರುಗಿಹೋಯಿತು. ಹವೆಯ ಲಕ್ಷಣ ನೋಡುತ್ತಿರಲಿಕ್ಕೆ ಚೆನ್ನಾ

ಗಿಲ್ಲ” ಎಂದು ಬಸು ಸಾಹೇಬನು ಎದುರಿನ ಬಯಲ ಕಡೆ ನೋಡಿದ. ಸಹಜವಾಗಿಯೋ ಷೋಡಶಿಯ ದೃಷ್ಟಿ ಆ ಕಡೆಗೆ ಹೋಯಿತು. ಅವಳು ನೀರವವಾಗಿ ನೋಡುತ್ತ ನಿಂತಳು.

ಪಡುವಣದಲ್ಲಿ ಕಪ್ಪು ಮೋಡಗಳು ಮೆಲ್ಲಮೆಲ್ಲನೆ ಕೂಡುತ್ತಲಿದ್ದವು. ಆ ಜನಶೂನ್ಯ ಪ್ರದೇಶದಲ್ಲಿ, ದಟ್ಟವಾದ ಮರದ ಕವಿಗತ್ತಲಲ್ಲಿ ನಿಂತು ಕೊಂಡಿರುವುದು ಇಬ್ಬರಿಗೂ ಕಠಿನವಾಯಿತು. ಒಬ್ಬರಿಗೂ ಏನು ಮಾತಾಡಲೂ ಹೊಳೆಯಲಿಲ್ಲ. ಆ ವಿಚಿತ್ರ ಸಂದರ್ಭದಿಂದ ಇಬ್ಬರಿಗೂ ಹೇಗೆ ಹೇಗೋ ಎನಿಸಲಾರಂಭಿಸಿತು.

ಈ ಭಾರವಾದ ಸಂಕೋಚವನ್ನು ಹೇಗಾದರೂ ತೊಲಗಿಸಬೇಕೆಂದು ಮಿಸ್ಟರ್ ಬಸು ಮೊದಲು ಮಾತು ತೆಗೆದ: “ನಾಳೆ ನಾನು ಊರಿಗೆ ಹೋಗುತ್ತೇನೆ. ಪುನಃ ಬೇಗ ಬರಲಾದೀತೆಂದು ಹೇಳಲಾಗುವುದಿಲ್ಲ ಫಕೀರ ಸಾಹೇಬರನ್ನು ಒಮ್ಮೆ ಕಂಡೇ ಹೋಗಬೇಕೆಂದು ಹೈಮಳ ಆಗ್ರಹ; ಅದಕ್ಕೇ ಬಂದಿದ್ದೆ. ಅವರು ಎಲ್ಲಿಗಾದರೂ ಹೊರಟು ಹೋಗಿರಲಾರರಷ್ಟೆ?” ಎಂದು ನಾಲ್ಕು ಹೆಜ್ಜೆ ಮುಂದೆ ಹೋಗಿ ಗುಡಿಸಲೊಳಗೆ ಬಗ್ಗಿ ನೋಡಿದ. “ಚೆನ್ನಾಗಿ ಕಾಣಿಸುವುದಿಲ್ಲ; ಆದರೂ ಒಳಗೆ ಯಾರೂ ಇದ್ದಂತೆ ಕಾಣುವುದಿಲ್ಲ. ಮುಸಲ್ಮಾನ ಫಕೀರರು ಅಗ್ನಿಕುಂಡ ಹೊತ್ತಿಸುವರೋ ಏನೋ ಯಾರು ಬಲ್ಲರು? ಅಲ್ಲಿ ಒತ್ತಟ್ಟಿಗೆ ಬೆಂಕಿಯಾರಿಸಿದ್ದಂತೆ ತೋರುತ್ತದೆ. ನೀವು ನೋಡಿರಿ ನೋಡುವ. ನಾನೇನೂ ಒಳಗೆ ಹೋಗಲಾರೆ. ಸುಮ್ಮನೆ ದಾರಿ ಕಾಯುತ್ತ ಕೂಡುವುದರಲ್ಲಿ ಅರ್ಥವಿಲ್ಲ” ಎಂದು ಅವನು ಷೋಡಶಿಯ ಕಡೆ ನೋಡುತ್ತ ಹಿಂದಿರುಗಿದ.

ಅವನ ಮಾತನ್ನು ಕೇಳಿ ಷೋಡಶಿಯ ಎದೆ ಧಸಕ್ಕೆಂದಿತು. ಬಸು ಸಾಹೇಬರು ಜೊತೆಗೆ ನಿಲ್ಲುವರೋ ಇಲ್ಲವೋ ಎಂಬ ವಿಚಾರವು ಒತ್ತಟ್ಟಿಗುಳಿದು, ಜಗತ್ತಿನಲ್ಲಿಯ ತನ್ನ ಒಬ್ಬನೇ ಒಬ್ಬ ಶುಭಾಕಾಂಕ್ಷಿ ಮನುಷ್ಯನು ಹೇಳದೆ ಹೊರಟು ಹೋದನಲ್ಲ ಎಂಬುದನ್ನೇ ಅವಳು ಯೋಚಿಸತೊಡಗಿದಳು. ಅವನು ಹೀಗೆ ಸುಮ್ಮನೆ ಏಕೆ ಹೊರಟುಹೋದನೆಂಬುದನ್ನು ಅವಳಲ್ಲದೆ ಮತ್ತೆ ಯಾರೂ ಅರಿಯರು.

ಯಂತ್ರದಿಂದ ನಡೆಯುವವಳಂತೆ ಹೆಜ್ಜೆಯಿಡುತ್ತ ಷೋಡಶಿ ಗುಡಿಸ

ಲೊಳಗೆ ಹೋಗಿ ಮಧ್ಯಭಾಗದಲ್ಲಿ ಸ್ತಬ್ಧವಾಗಿ ನಿಂತುಕೊಂಡಳು. ಎಲ್ಲಿಯೂ ಯಾರೂ ಇಲ್ಲ. ಗುಡಿಸಲು ಭಣಭಣ ಸುರಿಯುತ್ತಿರುವುದನ್ನು ಅವಳು ಒಳಗೆ ಕಾಲಿಟ್ಟೊಡನೆಯೆ ಅರಿತಳು. ಆದರೂ ಅಲ್ಲಿಂದ ಹೊರಬೀಳಲು ಅವಳ ಕಾಲೇಳಲಿಲ್ಲ. ತಾನು ನಿಜವಾಗಿಯೂ ದೋಷಿಯೆಂದು ಭಾವಿಸಿಕೊಂಡು ಅವನು ಹೊರಟುಹೋಗಿದ್ದಾನೆ, ಆದರೆ ತನಗೆ ಅದರ ಸುಳಿವು ಹತ್ತಗೊಡುವುದು ಅವನಿಗೆ ಕೊಂಚವೂ ಅಗತ್ಯವೆಂದು ತೋರಲಿಲ್ಲವಲ್ಲ ಎಂಬ ವಿಚಾರವು ಅವಳ ಅಂತಃಕರಣದಲ್ಲಿ ಕಿಚ್ಚಿನಂತೆ ಧಗಧಗಿಸತೊಡಗಿತು.

ಹಾಗವಳು ಕಲ್ಲಿನಂತೆ ನಿಂತುಕೊಂಡಾಗ ಎಷ್ಟೋ ಸಂಗತಿಗಳು ಅವಳಿಗೆ ನೆನಪಾದವು. ಅವಳಲ್ಲಿ ಫಕೀರನ ಪ್ರೀತಿ ಎಷ್ಟೆಂಬುದನ್ನು ಅವಳ ವಿನಾ ಬೇರೆ ಯಾರು ಬಲ್ಲರು? ಅವಳು ಮೂರ್ಖಳಂತೆ ಪಾಪಿಯ ಬೆನ್ನು ಕಟ್ಟಿ ಜಗಳ ಹೂಡಿದಳೆಂದು ಬಗೆದು, ಸತ್ಯಾಶ್ರಯನಾದ ಸಂನ್ಯಾಸಿ ಲಜ್ಜಿತನಾಗಿ ಸ್ಥಾನತ್ಯಾಗ ಮಾಡಿದ್ದಾನೆಂಬುದು ಅವಳಿಗೆ ಚೆನ್ನಾಗಿ ಮನವರಿಕೆಯಾಯಿತು. ಹೀಗೆ ಓಡಿಹೋಗುವಾಗ ಅವನಿಗೆ ಎಷ್ಟು ನೋವಾಗಿದ್ದೀತು! ಆ ಪರಿಸ್ಥಿತಿಯ ಗಾಂಭೀರ್ಯವನ್ನು ಮನಸಿನಲ್ಲಿ ಚಿತ್ರಿಸಿಕೊಳ್ಳಲಿಕ್ಕೆ ಅವಳಿಗೆ ತಡವಾಗಲಿಲ್ಲ. ಈ ಸಂಗತಿಯ ಸ್ಪಷ್ಟೀಕರಣವಾಗುವುದು ಯಾವಾಗ? ಅಥವಾ ಅದಕ್ಕೆ ಅವಕಾಶವೇ ಉಂಟಾಗುವುದಿಲ್ಲವೋ? ಇದಾವುದೂ ಅವಳಿಗೆ ತಿಳಿಯದಾಯಿತು. ಭವಿಷ್ಯತ್ಕಾಲವು ಅವಳ ದೃಷ್ಟಿಪಥದಿಂದ ಸರಿದೇಹೋಗಿತ್ತು.

ಈ ತೆರದ ಯೋಚನೆಯಲ್ಲಿ ಬಹಳ ಹೊತ್ತು ಹೋಯಿತು. ಇನ್ನೂ ಎಷ್ಟು ಹೋಗುತ್ತಿತ್ತೊ? ತೆರೆದ ಬಾಗಿಲಿಂದ ಬಿರುಗಾಳಿ ನುಗ್ಗಿ ಬಂದು ಅವಳನ್ನು ಎಚ್ಚರಿಸಿತು. ಹೊರಗೊಬ್ಬರು ತನಗಾಗಿ ಕಾದಿರುವುದು ಅವಳ ಸ್ಮರಣೆಗೆ ಬಂದಿತು. ಆದರೆ ಇಷ್ಟು ಅಲ್ಪಸಮಯದಲ್ಲಿ, ಮುಗಿಲು ಇಷ್ಟೊಂದು ಮುಚ್ಚಿಹೋದೀತು, ಇಷ್ಟೊಂದು ಕತ್ತಲೆ ಕವಿದು ಬಂದೀತು, ಮಳೆಗಾಳಿ ಇಷ್ಟೊಂದು ಹೆಚ್ಚಿಬಿಟ್ಟೀತು, ಮಳೆ ಬರತೊಡಗೀತು ಎಂದು ಅವಳು ನೆನೆದಿರಲಿಲ್ಲ. ಅವಳು ಹೊರಗೆ ಬಂದಳು. ಬಸು ಸಾಹೇಬನು ಒಂದು ಸಿಡಿಹಾಯ್ದ ಮರದ ಬೊಡ್ಡೆಯ ಮೇಲೆ ಕುಳಿತಿದ್ದ. ಅವನ ಬಿಳಿಯ ಬಟ್ಟೆಗಳ ಹೊರತು ಸುತ್ತಲಿನದೇನೂ ಕಾಣುತ್ತಿರಲಿಲ್ಲ.

ಅವನು ತನಗಾಗಿ ಪ್ರತೀಕ್ಷಿಸಿಕೊಂಡಿರುವುದನ್ನು ಕಂಡು ಷೋಡಶಿಗೆ ಅತಿಶಯ ಸಂಕೋಚವೆನಿಸಿತು. ಬಸು ಸಾಹೇಬನು ಎದ್ದು ನುಡಿದ: "ಫಕೀರ ಸಾಹೇಬರೇನೂ ಬರಲಿಲ್ಲ. ಬಂದಾರೆಂದು ನಿಮಗೆನಿಸುವುದೆ?"

"ಯಾರಿಗೆ ಗೊತ್ತು, ಬರಲಿಕ್ಕೇ ಇಲ್ಲ."

"ಫಕೀರ ಸಾಹೇಬರ ವಸ್ತು ಒಡವೆಗಳೇನಿದ್ದವೋ ನನಗೆ ಗೊತ್ತಿಲ್ಲ. ಆದರೆ ಅವರ ಮನೆ ಮಾತ್ರ ಪೂರಾ ಬರಿದಾಗಿದೆ. ಅವರು ಒಮ್ಮಿಂದೊಮ್ಮೆಲೆ ಸಂಪೂರ್ಣವಾಗಿ ಹೊರಟು ಹೋಗುವರೆಂದು ನಿಮಗೆನಿಸುವುದೆ?"

"ಅದೇನೂ ಅಸಂಭವವಲ್ಲ. ಹೀಗೆ ಒಮ್ಮಿಂದೊಮ್ಮೆಲೆ ಹೊರಟು ಹೋಗುವುದು ಅವರ ರೂಢಿ."

"ಅವರು ಯಾವಾಗ ತಿರುಗಿ ಬರುವರು?"

"ನಿಯಮವಿಲ್ಲ. ಈ ಬಾರಿ ಅವರು ಬಂದದ್ದು ಮೂರು ವರ್ಷಗಳ ಮೇಲೆ!"

"ಹಾಗಾದರೆ ನಡೆಯಿರಿ, ಮನೆಗೆ ಹೋಗುವ."

"ನಡೆಯಿರಿ" ಎಂದು ಷೋಡಶಿ ಮುಂದಾದಳು.

"ಆದರೆ ಹೋಗುವುದು ಹದಿನಾರಾಣೆ ಕಠಿನವಾಗಿ ಕಾಣುತ್ತದೆ ನನಗೆ. ಉಸುಕಿನ ಬಯಲು, ಕಾಲುಹಾದಿ ಎಲ್ಲಿಯೂ ಇಲ್ಲ, ಮೇಲೆ ಈ ಕತ್ತಲೆ, – ನಮ್ಮ ಕೈಕಾಲೇ ನಮಗೆ ಕಾಣುವುದಿಲ್ಲ."

ಷೋಡಶಿ ಸಾವಕಾಶವಾಗಿ ಸಾಗಿದಳು. ಏನೊಂದೂ ಮಾತನಾಡಲಿಲ್ಲ.

"ಗಾಳಿಯ ಅಬ್ಬರದಲ್ಲಿ ಯಾವುದೂ ತಿಳಿಯುವುದಿಲ್ಲ, ನಿಜ. ಆದರೆ ಮಳೆ ಬರುತ್ತಿರುವಂತೆ ಕಾಣುತ್ತದೆ. ಗಿಡ ದಾಟಿ ಮುಂದೆ ಹೋದರೆ ತೋಯಿಸಿಕೊಳ್ಳಬೇಕಾಗುವುದು—"

ಷೋಡಶಿ ಇದಕ್ಕೂ ಮಾತನಾಡಲಿಲ್ಲ.

"ಇಲ್ಲಿ ಕೇಳಿರಿ, ನನಗೆ ಇಲ್ಲಿಯ ಹಾದಿಗೀದಿ ಗೊತ್ತಿಲ್ಲ. ಈ ಕಡೆ ಹಾವು ಚೇಳುಗಳ ಹಾವಳಿ ಹೆಚ್ಚೆಂದು ಕೇಳಿದ್ದೇನೆ. ಈ ಭಯಂಕರ ಕತ್ತಲೆಯಲ್ಲಿ— "

ಷೋಡಶಿ ನಿಲ್ಲಲಿಲ್ಲ. ಮುಂದುವರಿಯುತ್ತಲೇ ಮಾತನಾಡಿದಳು: "ಹಾದಿ ನನಗೆ ಗೊತ್ತಿದೆ. ನೀವು ನನ್ನ ಹಿಂದೆ ಹಿಂದೆಯೇ ಬರ್ರಿ."

ಬಸು ಸಾಹೇಬನು ನಕ್ಕು ನುಡಿದ: "ಎಂದರೆ ಹಾವು ಚೇಳು ಕಡಿಯುವುದಿದ್ದರೆ ಮೊದಲು ನಿಮ್ಮನ್ನೇ ಕಡಿಯಲಿ, ಅಲ್ಲವೆ? ನೀವೆನ್ನುವುದು ಸರಿ. ನೀವು ಸಂನ್ಯಾಸಿನಿ. ನೀವು ಹೀಗೆ ಹೇಳುವುದು ಆಶ್ಚರ್ಯವಲ್ಲ. ನನಗೆ ಮಾತ್ರ ಬಹಳ ತೊಂದರೆಗಿಟ್ಟುಕೊಂಡಿದೆ. ಎಷ್ಟೆಂದರೂ ನಾನು ಗಂಡುಸು; ಅರ್ಥಾತ್ ನೀವು ಈ ಪ್ರಸಂಗವನ್ನು ಯಾರಿಗೂ ಹೇಳುವುದಿಲ್ಲ – ಹೈಮಳಿಗೆ ಕೂಡ. ಅಂತೂ ಒಟ್ಟಾರೆ ಪ್ರಸಂಗ ಬಲು ಕಠಿಣ."

ಈಗ ಮಾತ್ರ ಷೋಡಶಿ ತಟ್ಟನೆ ನಿಂತಳು. ಕತ್ತಲೆಯಲ್ಲಿ ಏನೂ ಕಾಣುತ್ತಿರಲಿಲ್ಲವಾದರೂ ಸಾಹೇಬನ ಮಾತಿನಿಂದ ಅವಳ ಮುಖದಲ್ಲಿ ನಗೆ ಮೂಡಿತು. ಕ್ಷಣಕಾಲ ಸ್ತಬ್ಧವಾಗಿದ್ದು ಬಳಿಕೆಂದಳು: "ಹಾಗಾದರೆ ನೀವು ಏನೆನ್ನುತ್ತೀರಿ?"

"ಅದೇ ತಿಳಿಯಲೊಲ್ಲದು. ಏನು ಮಾಡಬೇಕೆಂಬುದನ್ನು ತೀರ್ಮಾನಿಸುವುದರೊಳಗೆ ತೋಯಿಸಿಕೊಳ್ಳಬೇಕಾಗುವುದು ಮಾತ್ರ. ಆಲದೆಲೆಗಳು ಇನ್ನು ಮಳೆಯನ್ನು ತಡೆಹಿಡಿಯಲಾರವು."

ಅದು ನಿಜವಿತ್ತು. ಮೇಲೆ ಬಿದ್ದ ಮಳೆ ಈಗ ರೆಂಬೆಗಳ ಮಧ್ಯದಿಂದ ಧಾರೆಯಾಗಿ ಸುರಿಯಲಾರಂಭಿಸಿತ್ತು.

"ಹಾಗಾದರೆ ನೀವು ಫಕೀರರ ಗುಡಿಸಲೊಳಗೆ ಸ್ವಲ್ಪ ಕೂತುಕೊಳ್ಳಿರಿ. ನಾನು ಹೈಮಳಿಗೆ ಹೇಳಿ, ದೀಪ ಕೊಟ್ಟು ಆಳು ಕಳುಹಿಸುವ ಏರ್ಪಾಟು ಮಾಡಿಸುತ್ತೇನೆ. ಈ ಮಳೆಯ ಪರಿವೆ ನನಗಿಲ್ಲ: ನನಗೆ ಅಭ್ಯಾಸವಿದೆ" ಷೋಡಶಿ ಹೇಳಿದಳು.

"ಒಳ್ಳೇ ಸುಂದರ ಹಂಚಿಕೆ!- ಬಂಗಾಲೀ ಮನುಷ್ಯ ಸಾಹೇಬನಾದರೆ ಹೇಗಾಗುತ್ತಾನೆಂಬುದನ್ನು ನೀವು ಚೆನ್ನಾಗಿ ಬಲ್ಲಿರೆಂದು ಕಾಣುತ್ತದೆ. ಆದರೆ ನನ್ನ ವಿಷಯದಲ್ಲಿ ಸ್ವಲ್ಪ ಮಾರ್ಜಿನ್ ಇದೆ. ಮನೆಯಲ್ಲಿ ಹೈಮ ಳಿದ್ದದ್ದರಿಂದ, ನಾನು ಹೊರಗೆ ಪೂರ್ಣ ಸಾಹೇಬನಾಗಿದ್ದರೂ ಒಳಗೂ ಹೊರಗೂ ಕೂಡಿಯೇ ಏಕಾಕಾರ ಸಾಹೇಬನಾಗಿಲ್ಲ. ಸರಿ. ನೀವೆಂದದ್ದು ಉಚಿತವೇ. ಆದರೆ ಈಗ ಹೊರಡುವುದೇ, ನಡೆಯಿರಿ."

ಮರದಡಿಯಿಂದ ಹೊರಗೆ ಬರುತ್ತಲೇ ಮುಂದೆ ಸಾಗುವುದು ಅಸಾಧ್ಯವೆಂದು ಅವರಿಗೆ ಕಂಡಿತು. ಗಾಳಿಯ ರಭಸಕ್ಕೆ ಮಳೆಹನಿಗಳು ಮೈಗೆ ಸೂಜಿಯಂತೆ ಚುಚ್ಚುತ್ತಿದ್ದವು. ಈ ಮೊದಲು ಒಣ ಉಸುಕು ಬಿರುಗಾಳಿಯಿಂದ ಮುಗಿಲಿಗೆ ಹಾರಿತ್ತು; ಈಗ ಅದು ತೊಯ್ದು ಕೆಳಕ್ಕೆ ಬೀಳುತ್ತಿತ್ತು; ಕಣ್ಣುತೆರೆದು ನಡೆಯುವುದು ಸಾಧ್ಯವಿರಲಿಲ್ಲ. ಷೋಡಶಿ ನೀರವವಾಗಿ ಸಾಗಿದ್ದಳು. ಹಿಂದುಗಡೆ ಸದ್ದಾದುದನ್ನು ಕೇಳಿ ಬೆಚ್ಚಿ ನಿಂತು ಪ್ರಶ್ನಿಸಿದಳು: "ನಿಮಗೆ ಎಲ್ಲಿಯಾದರೂ ಪೆಟ್ಟು ತಗುಲಿತೆ?"

ಅಂತಿಂತು ಸಾವರಿಸಿಕೊಂಡು ಎದ್ದು ನಿಲ್ಲುತ್ತ ಬ್ಯಾರಿಸ್ಟರ್ ಸಾಹೇಬನೆಂದ: "ಹುಂ. ನಾನು ತಿಳಿದುಕೊಂಡದ್ದಕ್ಕಿಂತ ಹೆಚ್ಚೇನೂ ಪೆಟ್ಟಾಗಲಿಲ್ಲ. ಕನ್ನಡಕ ಸೇರಿ ನಾಲ್ಕು ಕಣ್ಣುಗಳಿವೆ. ಆದರೂ ನಾಲ್ಕರಲ್ಲಿ ಒಂದು ಪಾಲು ದೃಷ್ಟಿಯಿದ್ದರೂ ಸಾಕಾಗಿತ್ತೆಂದು ಎನಿಸುತ್ತದೆ. ಹಾಂ, ನಡೆಯಿರಿ."

ಷೋಡಶಿ ಹೊರಡಲಿಲ್ಲ. ಕೊಂಚ ಹೊತ್ತು ನಿಂತಿದ್ದು ನಿಧಾನವಾಗಿ ವಿಚಾರಿಸಿದಳು: "ನಿಜವಾಗಿಯೂ ನಿಮಗೆ ಚೆನ್ನಾಗಿ ಕಾಣುವುದಿಲ್ಲವೆ?"

"ನಿಜವಾಗಿ!" ಕೊಂಚ ನಕ್ಕು ಬಸು ಸಾಹೇಬನೆಂದ: "ರಾಶಿ ಇಂಗ್ಲಿಷ್ ಪುಸ್ತಕ ಓದಿ ಸಾಹೇಬನಾಗಬೇಕಾಗುತ್ತದೆ. ಅದಕ್ಕೆ ದಕ್ಷಿಣೆಯನ್ನೂ ಚೆನ್ನಾಗಿ ಸುರಿಯಬೇಕು. ಇರಲಿ. ಅಷ್ಟರ ದೆಸೆಯಿಂದ ನಿಂತುಕೊಂಡು ತೋಯಿಸಬೇಡಿರಿ ನನ್ನ. ಮುಂದೆ ನಡೆಯಿರಿ. ಎರಡೂ ಕಣ್ಣು ಮುಚ್ಚಿದರೆ ಎಷ್ಟು ಕಾಣಬೇಕೋ ಅಷ್ಟು ನನಗೆ ಖಂಡಿತ ಕಾಣಿಸುತ್ತದೆ, ಎಂದು ಮಾತ್ರ ಪ್ರಮಾಣಮಾಡಿ ಹೇಳಬಹುದು."

ಷೋಡಶಿ ಮಿಡುಕಿದಳು. "ಹಾಗಾದರೆ ಹೊಳೆ ದಾಟುವುದು ಬಹಳ ಬಿರಿ" ಎಂದಳು.

"ಅದೇನೋ ಗೊತ್ತಿಲ್ಲ. ಹೊಳೆ ದಾಟುವುದಕ್ಕೆ ಮುಂಚೆಯಾದರೂ ಸುಖವೆಲ್ಲಿದೆ? ಆದರೆ ಈ ಅಡವಿಯಲ್ಲಿ ನಿಂತುಕೊಂಡರೇನೂ ಸಂಕಟ ಪರಿಹಾರವಾಗುವಂತಿಲ್ಲ."

ಒಂದು ಹೆಜ್ಜೆ ಮುಂದಿಡುತ್ತ ಷೋಡಶಿ, "ನನ್ನ ಕೈಹಿಡಿದುಕೊಂಡು ಸಾವಕಾಶ ಬರ್ರಿ!" ಎಂದು ಹೇಳಿದಳು.

ಈ ಅಪರಿಚಿತ ಸ್ತ್ರೀಯ ಧೈರ್ಯದ ನಡತೆಗೆ ವಾಚಾಳಿ ಬ್ಯಾರಿಸ್ಟರ್

ಆಶ್ಚರ್ಯಚಕಿತನಾದ; ಒಂದು ಕ್ಷಣ ಮಾತ್ರ. ಮರುಕ್ಷಣದಲ್ಲಿಯೇ ಅವಳ ನೀಡಿದ ಕೈಯನ್ನು ಸ್ವಲ್ಪ ಸಂಕೋಚದಿಂದಲೇ, ಆದರೆ ನೀರವವಾಗಿ ಹಿಡಿದುಕೊಂಡ. "ಇನ್ನು ನಡೆಯಿರಿ. ಈಗ ನಿಜವಾಗಿಯೂ ಎರಡೂ ಕಣ್ಣು ಮುಚ್ಚಿ ನಡೆಯಬಲ್ಲೆ" ಎಂದು ಅವನೆಂದ.

ಷೋಡಶಿ ಏನೊಂದೂ ಉತ್ತರ ಕೊಡಲಿಲ್ಲ. ಸ್ವಲ್ಪ ಮುಂದೆ ಹೋದ ಬಳಿಕ ಬಸು ಸಾಹೇಬನೇ ಮಾತನಾಡಿದ: "ನಿನ್ನೆ ನಾನು ನಿಮ್ಮೊಂದಿಗೆ ಸಭ್ಯರೀತಿಯಿಂದ ನಡೆದುಕೊಳ್ಳಲಿಲ್ಲ, ಕ್ಷಮಿಸಿರಿ."

ಈ ಮಾತಿಗೂ ಅವಳು ಉತ್ತರಕೊಡದೆ ನಿಧಾನವಾಗಿ ಸಾಗಿದ್ದಳು.

"ನೀವು ಹೈಮಳ ಶಾಲೆಯ ಸಂಗಾತಿ. ನಾನು ನಿನ್ನೆ ಹೇಗೇ ವರ್ತಿಸಿರಲಿ, ನನ್ನನ್ನು ನಿಮ್ಮ ಶತ್ರುವೆಂದು ಭಾವಿಸಲಾಗದು" ಎಂದು ಬಸು ಸಾಹೇಬನು ತನ್ನ ಕೈಯಲ್ಲಿದ್ದ ಅವಳ ಹಸ್ತವನ್ನು ಅದುಮಿದ.

ಆದರೂ ಅವಳು ಮೌನವನ್ನು ಬಿಡಲಿಲ್ಲ. ಕೆಲಹೊತ್ತು ಬಸು ಸಾಹೇಬನೂ ಮಾತನಾಡಲಿಲ್ಲ.

"ಈ ಜನ ನಿಮ್ಮನ್ನು ಸಹಜವಾಗಿ ಬಿಟ್ಟಾರೆಂದು ನನಗೆನಿಸುವುದಿಲ್ಲ. ಈ ಪ್ರಸಂಗ ಕೋರ್ಟು ಕಚೇರಿಯ ವರೆಗೂ ಹೋಗಬಹುದು. ಫಕೀರ ಸಾಹೇಬರೂ ಸತ್ಯವಾಗಿಯೂ ಹೊರಟುಹೋಗಿದ್ದಾರೆ, ನಾನೂ ಹೋಗುವವನಿದ್ದೇನೆ —"

ಷೋಡಶಿ ಈಗಲೂ ಮೌನಿ. ಬಸು ಸ್ವಲ್ಪ ಸಮಯ ಸುಮ್ಮನಿದ್ದು ಮತ್ತೆ ನುಡಿದ: "ಇನ್ನು ಮೇಲೆ ನೀವು ಕೈಮುಟ್ಟಿ ದೇವಿಯ ಪೂಜೆ ಮಾಡುವುದಿಲ್ಲವೆಂದದ್ದು ಸಿಟ್ಟಿನಿಂದಲೆ?"

"ಅಲ್ಲ" ಷೋಡಶಿ ಈಗ ಉತ್ತರವಿತ್ತಳು.

"ಎಂದರೆ ಅದಕ್ಕೆ ನಿಜವಾದ ಕಾರಣವುಂಟೇನು?"

ಈ ಮಾತಿಗೆ ಉತ್ತರಕೊಡದೆ ಷೋಡಶಿಯೆಂದಳು: "ನಾವೀಗ ಪಾತ್ರದ ಹತ್ತಿರ ಬಂದೆವು. ಇನ್ನು ಸ್ವಲ್ಪ ಜೋಕೆಯಿಂದ ಇಳಿಯಬೇಕು."

ಆಮೇಲೆ ಒಂದು ಗಳಿಗೆ ಯಾರೂ ಮಾತನಾಡಲಿಲ್ಲ. ಷೋಡಶಿ ಒಳ್ಳೆಯ ಜತನದಿಂದ ಬಸುವನ್ನು ಹೊಳೆ ದಾಟಿಸಿದಳು. ಹೋಗುವಾಗ

ಅವನು ಬೂಟು ತೆಗೆದು ಹೊಳೆ ದಾಟಿದ್ದ. ಬರುವಾಗ ಆ ಕತ್ತಲೆಯಲ್ಲಿ ಅವನ್ನು ಕಳಚುವ ಧೈರ್ಯವಾಗಲಿಲ್ಲ. ಹಾಗೆಯೇ ದಾಟಿದ.

ಅವನು ನಿಡಿದಾಗಿ ಉಸುರ್ಗರೆದು "ಒಂದು ಅಪಮೃತ್ಯುವಿನಿಂದ ಪಾರಾದಂತಾಯಿತು!" ಎಂದ.

ಅಪಮೃತ್ಯು ನೀಗಿತೆಂದು ಖಂಡಿತ ಗೊತ್ತಾಗುತ್ತಲೂ ಸಾಹೇಬನು ನಿಶ್ಚಿಂತನಾಗಿ ಮಾತನಾಡಿದ: "ಪೂಜಾರಿಯೊಬ್ಬ ಇದ್ದಾನೆ ನಿಜ. ಆದರೆ ನಿಮ್ಮ ಕರ್ತವ್ಯಗಳಲ್ಲಿ ಪೂಜೆಯೂ ಸೇರಿರುತ್ತದೆ. ನೀವು ಮಾತ್ರ ಆ ಪ್ರಶ್ನೆಯನ್ನು ಹುದುಗಿಸಿ ಇಡುತ್ತಿದ್ದೀರಿ. ಆ ಚಾಂಡಾಲ ರಕ್ಕಸ ಜಮಾದಾರರನ್ನು ರಕ್ಷಿಸುವುದು ನಿಮ್ಮ ಕರ್ತವ್ಯವಲ್ಲವಾದರೂ ಅವ ರನ್ನು ನೀವು ರಕ್ಷಿಸಿದ ರೀತಿ ಆಶ್ಚರ್ಯಕರವಾದದ್ದು, ಇಷ್ಟೇ ಅಲ್ಲ, ಅಗಾಧ ವಾದದ್ದು. ಇವೆರಡೂ ಸಂಗತಿಗಳಿಂದ ಊರ ಜನರಿಗೆ ತಪ್ಪು ಕಲ್ಪನೆ ಯಾದರೆ, ಕೋಪಿಸಿಕೊಳ್ಳುವುದರಲ್ಲಿ ಏನರ್ಥ?"

ಷೋಡಶಿ ಶಾಂತವಾಗಿ ಉತ್ತರವಿತ್ತಳು: "ನಾನು ಕೋಪಿಸಿ ಕೊಂಡಿಲ್ಲವಲ್ಲ."

"ಕೋಪವಿಲ್ಲವೆ? ಇದೂ ಅದ್ಭುತವೆ! ನಿಮ್ಮ ತಂದೆಯ ರೀತಿಯಂತೂ ಇದಕ್ಕಿಂತ ಅದ್ಭುತ! ಹೈಮ ಎನ್ನುತ್ತಾಳೆ—ಹೈಮಳ ಮಾತು ಸದ್ಯ ಇರಲಿ. ನಾನೆನ್ನುತ್ತೇನೆ—ಆ ಜನರದು ಏನಾದರೂ ತಪ್ಪಿದ್ದರೆ ತಿಳಿಸಿ ಏಕೆ ಹೇಳುವು ದಿಲ್ಲ? ಹೇಳುವುದರಿಂದ ಏನಾದರೂ ವಿಶೇಷ ಫಲವುಂಟೆಂದು ನಾನೆನ್ನುವು ದಿಲ್ಲ; ಆದರೆ ಸ್ತ್ರೀ ಜಾತಿಯ ಮರ್ಯಾದೆ ಉಪೇಕ್ಷಿಸತಕ್ಕ ವಿಷಯವಲ್ಲ." ಉತ್ತರಕ್ಕಾಗಿ ಅವನು ಸ್ವಲ್ಪ ತಡೆದ. ಷೋಡಶಿ ಮಾತನಾಡಲಿಲ್ಲ. ಆಗವನು ನಿಟ್ಟುಸಿರ್ಗರೆದು ನುಡಿದ: "ಸಾಮಾನ್ಯ ಸ್ತ್ರೀಯಂತೆ ನೀವು ಮರ್ಯಾದೆ ಅವಮರ್ಯಾದೆಗಳ ದೆಶೆಯಿಂದ ಅಷ್ಟೊಂದು ತಲೆಯೊಡೆದುಕೊಳ್ಳುವುದಿಲ್ಲ ವೆಂದು ತಿಳಿದೇ ಸಾಗುವ, ಅಲ್ಲದೆ ನೀವು ಸಾಧಾರಣರೂ ಅಲ್ಲ. ಆದರೂ ನಿಮ್ಮ ಸುಮ್ಮನಿರಬೇಕೆಂಬ ಹಟ—ಇದೂ ಅದ್ಭುತವೆ! ಒಟ್ಟಾರೆ ನೀವು ಅತ್ಯಂತ ಅದ್ಭುತ ಮನುಷ್ಯರು!" ಎಂದು ಉತ್ತರಾಪೇಕ್ಷೆಯಿಂದ ಮತ್ತೆ ಸ್ವಲ್ಪ ತಡೆದು ಬಳಿಕೆಂದ: "ನಿನ್ನೆ ನಾನು ನಿಮ್ಮನ್ನು ಒಮ್ಮೆಯೇ ನೋಡಿದ್ದು. ಇಂದು ಇಷ್ಟೊತ್ತು ಕೈ ಹಿಡಿದು ದಾರಿ ನಡೆದೆ. ಆದರೆ

ಯಾರ ಆಸರದಿಂದ ನಡೆಯುತ್ತಿರುವೆನೋ ಅವಳು ಕತ್ತಲೆಯಲ್ಲಿಯ ವ್ಯಕ್ತಿ; ಮತ್ತೆ ನಡೆಸಿದ್ದೂ ಕತ್ತಲೆಯಲ್ಲಿಯೇ. ಹೀಗಿದ್ದೂ ನಿಃಸಂಕೋಚವಾಗಿ ನಿರ್ಭಯವಾಗಿ ಪ್ರವಾಸಮಾಡುವುದಕ್ಕೆ ಯಾವ ಅಡ್ಡಿಯೂ ಆಗಲಿಲ್ಲ. ನಿಮ್ಮ ಬಗ್ಗೆ ಶ್ರದ್ಧೆಯುಂಟಾದ ಹೊರತು ಗತ್ಯಂತರವಿಲ್ಲ."

ಮತ್ತೆ ಕೆಲಹೊತ್ತು ಅವನು ಉತ್ತರದ ಹಾದಿ ನೋಡಿದ. ಉತ್ತರವು ಸಿಕ್ಕಲಾರದೆಂದು ಅರಿತು ಮತ್ತೆ ಮಾತನಾಡಿದ: "ಒಳ್ಳೇದು. ನೀವೋ ಸನ್ಯಾಸಿನಿ. ನಮ್ಮ ಮಾವ ಏನೇ ಮಾಡಿಕೊಳ್ಳಲಿ, ದೇವಿಯ ಸಂಪತ್ತಿಯ ಬಗ್ಗೆ ದಾವೆ ಗೀವೆ ಮಾಡುವುದು ನಿಮಗೇನಗತ್ಯ?"

"ಏನೂ ಅಗತ್ಯವಿಲ್ಲ." ಷೋಡಶಿ ಉತ್ತರವಿತ್ತಳು.

"ಹಾಗಾದರೆ?"

"ನೀವು ಮನಸಿನಲ್ಲಿ ಯಾವ ಸಂಶಯವನ್ನೂ ತರಬೇಡಿರಿ. ನಿರಾಧಾರಳಾದ ದುರ್ಬಲ ಸ್ತ್ರೀಯು ಹಣೆಬರೆಹದಲ್ಲಿದ್ದಷ್ಟು ಆಗುತ್ತದೆ. ಅದರ ಲ್ಲೇನೂ ವ್ಯತ್ಯಯ ಬರಲಾರದು."

ಅವಳ ಮಾತಿನೊಳಗಿನ ಮುಳ್ಳು ಬಸು ಸಾಹೇಬನಿಗೆ ಚುಚ್ಚಿತು. ಆದರವನು ಪ್ರತಿವಾದಿಸಲೂ ಪ್ರತಿಘಾತಿಸಲೂ ಇಲ್ಲ. ಇಬ್ಬರೂ ಮೌನವಾಗಿ ಸಾಗಿದರು. ಗಾಳಿ ಮಳೆಗಳು ಇನ್ನೂ ನಿಂತಿರಲಿಲ್ಲ. ಊರ ಅಂಚಿಗೆ ತಲುಪಿದಾಗ ಅವುಗಳ ರಭಸವು ಕೊಂಚಮಟ್ಟಿಗೆ ತಗ್ಗಿತ್ತು. ಬೀದಿಗೆ ಹೊರಳುತ್ತಲೆ ಸನಾತನ ಮೋಹಿತಿಯ ಗುಡಿಸಲಿನ ದೀಪವು ಇಬ್ಬರಿಗೂ ಕಾಣಿಸಿತು. ಅಲ್ಲಿಂದ ಸ್ವಲ್ಪ ಮುಂದುವರಿದು ಪಕ್ಕನೆ ನಿಂತು ಷೋಡಶಿ ನುಡಿದಳು: "ಮುಂದೆ ಅಷ್ಟು ಕತ್ತಲೆಯಿಲ್ಲ. ಇಲ್ಲಿಂದ ಈ ದಾರಿ ಹಿಡಿದು ನೆಟ್ಟಗೆ ಹೋದರೆ ರಾಯಮಹಾಶಯರ ಮನೆಯ ಬಾಗಿಲಿಗೇ ಹೋಗುವಿರಿ."

"ಮತ್ತೆ ನೀವು?"

"ನನ್ನ ದಾರಿ ಈ ಎಡಗಡೆಯ ತೋಟದೊಳಗಿಂದ."

ಬಸು ಅವಳ ಕೈಯನ್ನು ಬಿಡದೆ ಮಾತನಾಡಿದ: "ನೀವು ಚೆಲೋ ಸುಶಿಕ್ಷಿತರೆಂದು ಕೇಳಿದ್ದೇನೆ. ಇದನ್ನು ಆಡಿ ತೋರಿಸುವ ಅಗತ್ಯವಿರಲಿಲ್ಲ ನಿಜ, ಆದರೂ ಇದಕ್ಕಿಂತ ಹೆಚ್ಚಿನ ಗುರುತಾಗುವ ಯೋಗ ಘಟಿಸಲಿಲ್ಲ. ಆದರೂ ಇಂದಿನ ಈ ಪ್ರವಾಸದ ಪ್ರಸಂಗ ನನ್ನ ಸ್ಮೃತಿ

ಯಿಂದ ಎಂದೂ ಅಳಿಸಲಾರದು. ಒಳ್ಳೇ ಶ್ರದ್ಧೆಯಿಂದ ಇದನ್ನು ಸ್ಮರಿಸುತ್ತಿರುತ್ತೇನೆ."

ಸುಮ್ಮನೆ ಕೊಂಚ ನಕ್ಕು ಷೋಡಶಿ ಹೇಳಿದಳು: "ಅದು ಸರಿ. ಆದರೆ ಎರಡನೆಯವರು ಯಾರಾದರೂ ಸ್ವಲ್ಪ ನೋಡಿದರೆ ಸಾಕು, ಅವರು ನಿಮ್ಮ ಈ ಉದ್ಗಾರಕ್ಕಿಂತ ತೀರ ವಿಪರೀತವಾಗಿಯೇ ಭಾವಿಸಿಕೊಳ್ಳುವರು. ಸಾಹೇಬನು ಒಳಗೊಳಗೆ ಚಕಿತನಾದ. ಅವಳ ಕೈಯನ್ನು ಕುಲುಕಿ ಬಿಟ್ಟು ಕೊಟ್ಟು ಅವನೆಂದ: "ಇಲ್ಲ. ಈ ಮಾತು ಯಾರಿಗಾದರೂ ಕೃತ್ರಿಮವೆಂದು ಎನಿಸಬಹುದು. ಆದ್ದರಿಂದ ಹೆಚ್ಚು ಮಾತಾಡುವುದಕ್ಕಿಂತ ಸುಮ್ಮನಿರುವುದೇ ನೆಟ್ಟಗೆ! ಅಲ್ಲವೆ?"

ಈ ಮಾತಿಗೆ ಉತ್ತರ ಕೊಡದೆ ಷೋಡಶಿ ಹೇಳಿದಳು: "ನನ್ನ ಸಲುವಾಗಿ ಮಳೆಯಲ್ಲಿ ಸುಮ್ಮನೆ ನೆನೆಯುತ್ತಿದ್ದೀರಿ. ಬಹಳ ಕಷ್ಟವಾಗುತ್ತಿದ್ದೀತು. ಇನ್ನು ಮುಗಿಸಿರಿ, ನಾನೂ ಹೊರಟೆ."

"ಈ ನೆನಪು ಬಹಳ ದಿವಸ ನನ್ನ ಮನಸ್ಸಿನಲ್ಲಿ ಅಲೆಯುತ್ತಿರುವುದು! ನಾಳೆ ನಾವು ಹೋಗುತ್ತೇವೆ. ಹೈಮಳಿಗೆ ಏನಾದರೂ ಹೇಳುವುದಿದೆಯೆ?"

ಕ್ಷಣಕಾಲ ಯೋಚಿಸಿ ಷೋಡಶಿ ಹೇಳಿದಳು: "ಇಲ್ಲ. ಅವಳ ಮಗುವನ್ನು ನಾನು ಹರಸಿದ್ದೇನೆಂದು ಬೇಕಾದರೆ ಹೇಳಿರಿ." ಎಂದು ಹೆಚ್ಚಿಗೆ ಪ್ರಶ್ನೋತ್ತರಕ್ಕೆ ಅವಕಾಶ ಕೊಡದೆ ಅವಳು ಕತ್ತಲೆಯ ಹಾದಿಯನ್ನು ಹಿಡಿದು ಕಣ್ಮರೆಯಾದಳು.

ಸಾಹೇಬನು ಎಷ್ಟೋ ಹೊತ್ತು ಅಲ್ಲಿಯೇ ಮುಗ್ಧನಾಗಿ ನಿಂತುಕೊಂಡ. ಹೋಗುವ ಮುಂದೆ ಅವಳಿಗೆ ಶಿಷ್ಟಾಚಾರದ ನಮಸ್ಕಾರ ಕೂಡ ಮಾಡಲಿಲ್ಲ! ಯಾವ ಫಕೀರನ ಸಲುವಾಗಿ ಇದೆಲ್ಲ ಘಟಿಸಿತೋ ಅವನಿಗೊಂದು ನಮಸ್ಕಾರವನ್ನು ಕೂಡ ಹೇಳಲಿಲ್ಲ.

## ೧೦

ಬಸು ಮನೆಯನ್ನು ತಲುಪಿದಾಗ ಮನೆ ಮಂದಿಯೆಲ್ಲ ಅವನಿಗಾಗಿ ಉತ್ಕಂಠಿತರಾಗಿದ್ದರು. ಮನೆಯಲ್ಲಿ ಹಾಗೂ ನೆರೆಮನೆಗಳಲ್ಲಿ ಸಿಕ್ಕ ಚಿಲೋ

ಕೆಟ್ಟ ಕಂದೀಲುಗಳನ್ನೆಲ್ಲ ಕೂಡಿಸಿ ಹಚ್ಚಿಕೊಂಡು ಅವನನ್ನು ಹುಡುಕಲು ಹೊರಡುವ ಗಡಿಬಿಡಿ ನಡೆಸಿದ್ದರು. ಆಳು ಹೋಳುಗಳು, ನೆರೆಹೊರೆಯವರು, ಬಂಧು ಬಳಗ ಎಲ್ಲರೂ ಸೇರಿದ್ದರು. ಅವರನ್ನು ಗುಂಪುಗುಂಪಾಗಿ ವಿಂಗಡಿಸಿ ಯಾವ ಗುಂಪು ಯಾವ ಕಡೆ ಯಾವ ಮಾರ್ಗವಾಗಿ ಹೋಗಬೇಕು, ಯಾವ ಯಾವ ಹೊಲ ಯಾವ ಯಾವ ಅಡವಿ ತಿರುಗಬೇಕು ಎಂಬುದನ್ನು ರಾಯ ಮಹಾಶಯನು ವಿಧಿಸುತ್ತಲಿದ್ದ. ಅವನ ನಡೆ ನುಡಿಗಳಲ್ಲಿ ಬರೀ ಉದ್ವೇಗ ಮಾತ್ರವಲ್ಲ ಗಾಬರಿಯೂ ತೋರುತ್ತಿತ್ತು. ಅವನು ಯಾವುದನ್ನು ಒಡೆದಾಡದಿದ್ದರೂ ಅವನ ಮನಸಿನ ಭೀತಿಯ ಕಾರಣವು ಬಹು ಭಯಂಕರವಾದುದು. ಷೋಡಶಿಯ ಅನುಯಾಯಿಗಳಲ್ಲಿ ಕೆಲವರು ಒಕ್ಕಲಿಗರಿದ್ದರು, ಕೆಲವರು ಪರೋಡಿಗಾರರಿದ್ದರು. ಅವರು ಉದ್ದಾಮರು ಅಂತೆಯೇ ನಿಷ್ಠುರರು. ಅವರಲ್ಲಿ ಯಾರಾದರೂ ಈ ಕಾಳರಾತ್ರಿಯಲ್ಲಿ ತಮ್ಮ ಅಳಿಯನನ್ನು ನೋಡಿದರೆ, ಆಗ ಭೈರವೀಮಾತೆಯ ಬಗ್ಗೆ ನಡೆದ ಪ್ರಕರಣವು ಪಕ್ಕನೆ ಅವರ ಜ್ಞಾಪಕಕ್ಕೆ ಬಂದರೆ, ತಮ್ಮ ಮೇಲೆ ಸೇಡು ತೀರಿಸಿಕೊಳ್ಳುವ ಪ್ರವೃತ್ತಿ ಅವರಲ್ಲಿ ಎಚ್ಚತ್ತರೆ, ಏನಾದೀತು ಏನು ಬಿಟ್ಟೀತು ನಿಯಮವಿದ್ದಲ್ಲಿ !

ಪ್ರಮವತಿ ಒತ್ತಟ್ಟಿಗೆ ನಿಂತುಕೊಂಡು ಎಲ್ಲವನ್ನೂ ನೋಡುತ್ತಿದ್ದಳು. ತಂದೆಯ ಮುಖವನ್ನು ಅವಿರತವಾಗಿ ಲಕ್ಷಿಸುತ್ತಿದ್ದಳು. ಆದರೆ ಅವರ ಭಯದ ನಿಗೂಢವಾದ ಕಾರಣವು ಅವಳಿಗೆ ಗೊತ್ತಾಗಲಿಲ್ಲ.

ಅವಳ ತಾಯಿಯ ಮಾತಿನಲ್ಲಿ ಅದು ಹೊರಬಿದ್ದಿತು. ಅವಳು ಹೊರಗೆ ಬಂದು ಗಂಡನಿಗೆ ಸಾರಿಸಾರಿ ಹೇಳಿದಳು: "ಆತ ಅಳಿಯದೇವರು. ಆತನನ್ನೇಕೆ ನಿಷ್ಠುರ ಜಗಳದಲ್ಲಿ ತೊಡಕಿಸಿದಿರಿ? ಅವಳ ಹಿಂದೆ ಎಷ್ಟು ಪುಂಡರಿದ್ದಾರೆ! ಅವಳನ್ನೇನೋ ಇವರು ಮಣಿಸುತ್ತಾರಂತೆ! ಈಗಿಂದೀಗಲೇ ನಿರ್ಮಲನನ್ನು ಹುಡುಕಿಕೊಂಡು ಬರ್ರಿ. ಇಲ್ಲದಿದ್ದರೆ ಈ ಕತ್ತಲೆಯೊಳಗೆ ನಾನೇ ಹೊರಡುತ್ತೇನೆ."

ಎಂದು ನುಡಿದು ಆಕೆ ಅಳುತ್ತಳುತ್ತ ಪುನಃ ಒಳಗೆ ಹೋದಳು. ತಂದೆ ಮಗಳು ಇಬ್ಬರೂ ಗಾಭರಿಯಾಗಿದ್ದರು. ಇಬ್ಬರ ಮೋರೆಗಳೂ ಸಪ್ಪೆಯಾಗಿದ್ದವು. ಅವರ ಬಾಯಿಂದ ಶಬ್ದವೇ ಹೊರಡಲಿಲ್ಲ.

ತನ್ನ ಮನಸನ್ನು ಹೇಗೂ ಸಂತಯಿಸಿಕೊಂಡೂ, ಜನಾರ್ದನರಾಯನು

ಹೈಮವತಿಯನ್ನು ಸಂತಯಿಸುವುದಕ್ಕಾಗಿ ಏನೋ ಹೇಳುವವನಿದ್ದ. ಅಷ್ಟ ರಲ್ಲಿ ಅಳಿಯದೇವರ ಸವಾರಿ ಅಂಗಳದಲ್ಲಿ ಪ್ರವೇಶಿಸಿತು. ಅವನ ಮೈಮೇಲೆಲ್ಲ ನೀರು ಬಸಿಯುತ್ತಿತ್ತು. ಬಟ್ಟೆಬರೆ ಕೆಸರಾಗಿದ್ದುವು. ಮಾವನ ಮಾತು ಬಾಯೊಳಗೇ ಉಳಿಯಿತು. ಅಳಿಯನ ಬಗ್ಗೆ ಅವನಿಗೆ ಕೌತುಕ ವಿದ್ದಂತೆ ಅವನಿಗವನು ಹೆದರುತ್ತಲೂ ಇದ್ದ. ಆದರೂ ಆನಂದದ ಅತಿರೇಖ ದಿಂದ ಅಳಿಯನಿಗೆ ಬಾಯಿಗೆ ಬಂದುದನ್ನು ಆಡತೊಡಗಿದ.

ಅಳಿಯನು ಸುಮ್ಮನೆ ಒಳಗೆ ಬಂದ. ಕೈಯೊಳಗಿನ ಮುರಕ ಬಡಿಗೆ ಯನ್ನು ಬಿಸಾಡಿ ಕೈಯಿಂದ ಬೂಟುಗಳನ್ನು ಕಿತ್ತು ಚೆಲ್ಲಿದ. ಅವನು ತೊಯ್ದು ಬಟ್ಟೆಗಳನ್ನು ಬಿಡುತ್ತಿದ್ದಾಗ, ಸಣ್ಣವರು ದೊಡ್ಡವರು, ಉಚ್ಚರು ನೀಚರು ಆತ್ಮೀಯರು ಪರರು ಒಮ್ಮೆಲೆ ಸಾವಿರ ಪ್ರಶ್ನೆಗಳನ್ನು ಕೇಳುತ್ತ 'ಏಕೆ ಏನು ಎಲ್ಲಿ' ಎಂಬುದನ್ನು ವಿಚಾರಿಸುತ್ತಿರುವುದು ಅವನ ಕಿವಿಗೆ ಬೀಳುತ್ತಿತ್ತು.

ರಾಯಮಹಾಶಯನು ಸ್ವಾಭಾವಿಕ ಸ್ಥಿತಿಗಿಳಿದು ಮಾತನಾಡಿದ: "ಅದನ್ನೆಲ್ಲ ಹಿಂದುಗಡೆ ಹೇಳುವಿರಂತೆ. ಮೊದಲು ಒಳಗೆ ಹೋಗಿರಿ ನೋಡುತ್ತೇನೆ. ಹೈಮು ಮಗೂ, ನಿಂತುಕೊಂಡು ಏನು ನೋಡುತಿದ್ದೀ? ಒಣಬಟ್ಟೆ ತಂದು ಕೊಡಬಾರದೇ?"

ಅತ್ತೆ ಮಾವ ಮತ್ತು ಮನೆಮಂದಿಯ ಪ್ರಶ್ನೆಗಳಿಗೆ ಉತ್ತರವೆಂದು ಬಸು ಹೇಳಿದ: "ನದಿಯ ಆಚೆಗೆ ಫಕೀರಸಾಹೇಬರ ಭೆಟ್ಟಿಗೆ ಹೋಗಿದ್ದೆ. ಆದರೆ ಅವರು ಗುಡಿಸಲೊಳಗೆ ಇದ್ದಿದ್ದಿಲ್ಲ, ಭೆಟ್ಟಿಯಾಗಲಿಲ್ಲ."

'ನದಿಯ ಆಚೆಗೆ!' ಎಂದೆಲ್ಲರೂ ಒಮ್ಮೆಲೆ ಗಾಬರಿಯಿಂದ ಕೂಗಿ ಕೊಂಡರು. ರಾಯಮಹಾಶಯನು ಆಶ್ಚರ್ಯದಿಂದ ಕೇಳಿದ: "ಅವನ ಭೆಟ್ಟಿಗೆ ನೀವು ಹೋಗಿದ್ದಿರಾ? ನನಗೆ ಹೇಳಿದ್ದರೆ ಅವನನ್ನೇ ಇಲ್ಲಿಗೆ ಕರೆ ಸುತ್ತಿದ್ದೆ. ಈ ಕತ್ತಲೆಯೊಳಗೆ ದಾರಿಯಾದರೂ ಹೇಗೆ ಸಿಕ್ಕಿತು?"

ನಿರ್ಮಲಬಾಬು ಹೇಳಿದ: "ಹಾದಿ ಹುಡುಕುವ ಅಗತ್ಯವೇ ಉಂಟಾಗ ಲಿಲ್ಲ. ಹುಡುಕಿದರೆ ಸಿಕ್ಕುವುದೂ ಅಷ್ಟರಲ್ಲಿಯೇ ಇತ್ತು."

"ಹಾಗಾದರೆ ಹೇಗೆ ಬಂದಿರಿ ತಿರುಗಿ?"

"ಒಬ್ಬರು ಕೈಹಿಡಿದು ಕರೆದುಕೊಂಡು ಬಂದು ಮನೆಯ ಹತ್ತಿರ ಬಿಟ್ಟರು."

" ಯಾರು ? ಯಾರು ? ಹೆಸರೇನು ? " ನಾಲ್ಕೂ ಕಡೆಗಳಿಂದ ಪ್ರಶ್ನೆ.

ನಿರ್ಮಲನು ಕೊಂಚಹೊತ್ತು ಸುಮ್ಮನಿದ್ದು ನುಡಿದ : " ಯಾರಿಗೆ ಗೊತ್ತು ? ಅವರು ತಮ್ಮ ಹೆಸರು ಹೇಳಲಿಲ್ಲ. ಹೇಳುವ ಇಚ್ಛೆ ಅವರಿಗಿರಲಿಲ್ಲ."

ರಾಯಮಹಾಶಯನು ಆವೇಶದಿಂದ ನುಡಿದ : " ಇಚ್ಛೆ ಇರಲಿಲ್ಲವೆ ? ಇದರರ್ಥವೇನು ? ಅದೇನಿಲ್ಲ. ಇಲ್ಲಿಯ ಜನರ ಪರಿಚಯ ನಿಮಗಿಲ್ಲ. ಏನಿದ್ದರೂ ಆ ಮನುಷ್ಯನನ್ನು ತೃಪ್ತಿಪಡಿಸಬೇಡವೆ ? " ಎಂದು ಆಳನ್ನು ಕೂಗಿ ತಕ್ಷಣ ಅಪ್ಪಣೆಯಿತ್ತ : " ಅಧರ, ನೋಡು, ಹೊರಗೆ ಚಟರ್ಜಿ ಇದ್ದಾರೇನೋ. ಹೇಳವರಿಗೆ ನಾಳೆಯೇ ಹುಡುಕಿರೆಂದು. ಆ ಮನುಷ್ಯನನ್ನು ಹುಡುಕಿ ಒಂದು ರೂಪಾಯಿ ಬಕ್ಷೀಸು ಕೊಡಬೇಕು. ಇಡೀ ರೂಪಾಯಿ ಅವನ ಕೈಯೊಳಗೆ ಬೀಳಲಿ, ಅದರಲ್ಲಿ ಕತ್ತರಿ ಪ್ರಯೋಗ ಮಾಡಬಾರದೆಂದು ಹೇಳು. ಚಟರ್ಜಿ ಅತಿ ಜೀನರು ! " ಎಂದು ಔದಾರ್ಯದ ಹೆಮ್ಮೆಯಿಂದ ಮೊದಲು ತನ್ನ ಹೆಂಡತಿಯ ಕಡೆ, ಬಳಿಕ ಮಗಳು ಅಳಿಯರ ಕಡೆ ಎದೆಯುಬ್ಬಿಸಿಕೊಂಡು ನೋಡಿದ.

ರಾತ್ರಿ ಏಕಾಂತದಲ್ಲಿ ಹೈಮವತಿ ಗಂಡನಿಗೆಂದಳು : " ಅಪ್ಪ ಬಕ್ಷೀಸಿನ ಡಂಗುರ ಸಾರಿದ್ದಾರೆ. ಒಂದು ವೇಳೆ ರೂಪಾಯಿ ಇಡಿಯದೇ ಸಿಕ್ಕಬಹುದು. ಆದರೆ ಅದರಿಂದ ಏನೂ ಪ್ರಯೋಜನವಾಗಲಾರದು."

" ಆಗಲಿಕ್ಕಿಲ್ಲ. ಆರೋಪಿ ಸಿಕ್ಕುವುದಿಲ್ಲ."

" ನೀವು ಆ ದಯಾಳು ಮನುಷ್ಯನಿಗೆ ಏನು ಮೆಚ್ಚು ಕೊಟ್ಟಿರಿ ?" ಹೈಮವತಿ ನಗುತ್ತ ಕೇಳಿದಳು.

" ಕೊಡುವುದು ಅಷ್ಟು ಸುಲಭವೆಂದು ನಿನಗೆನಿಸುತ್ತದೆಯೇ ? ಕೊಟ್ಟದ್ದು ತೆಗೆದುಕೊಳ್ಳುವುದು ಕೊಡುವವರ ಇಷ್ಟವನ್ನವಲಂಬಿಸಿರುವುದೆ?"

" ಹಾಗಾದರೆ ಕೊಡಲಿಲ್ಲವೇನೊ ?"

" ಕೊಡಲು ಯತ್ನಿಸಲೂ ಇಲ್ಲ."

ಕ್ಷಣಹೊತ್ತು ಗಂಡನ ಮುಗವನ್ನು ನೋಡಿ ಹೈಮವತಿ ಎಂದಳು : " ಆದರೆ ನಾನು ಏನಾದರೂ ಕೊಡಬೇಕಲ್ಲವೆ ? ಆ ವ್ಯಕ್ತಿ ಅಪ್ಪನಿಗೆ ಸಿಕ್ಕಲಿಕ್ಕಿಲ್ಲ ; ನಾನು ಹುಡುಕುತ್ತೇನೆ."

ನಿರ್ಮಲನಿಗೆ ಸ್ವಲ್ಪ ಸಂದೇಹವುಂಟಾಯಿತು. ಆದರೂ ಅವನೆಂದ: "ನನಗೆನಿಸುತ್ತದೆ—ನಿಮ್ಮಪ್ಪನಿಗೂ ಸಿಕ್ಕುವುದಿಲ್ಲ, ನಿನಗೂ ಸಿಕ್ಕುವುದಿಲ್ಲ ಆ ವ್ಯಕ್ತಿ."

"ನಾನು ಹುಡುಕಿದರೆ ನನಗೇನು ಮೆಚ್ಚು ಕೊಡುತ್ತೀರಿ? ನನಗೆ ಗೊತ್ತು! ಇಂಥ ಭಯಂಕರ ಕತ್ತಲೆಯಲ್ಲಿ ನಿಮ್ಮಂಥ ಕುರುಡರನ್ನು ಸುರಕ್ಷಿತವಾಗಿ ಹೊಳೆ ದಾಟಿಸಿ ಮನೆಗೆ ತಂದು ಬಿಟ್ಟಿದ್ದರೂ ತನ್ನ ಪರಿಚಯ ಮಾಡಿಕೊಡಲು ಒಪ್ಪುವುದಿಲ್ಲ;—ಇವರಿಂದಲೇ ಸಹಜವಾಗಿ ಆ ವ್ಯಕ್ತಿ ಯಾರೆಂದು ಗುರುತಿಸಬಹುದು. ಅಲ್ಲದೆ, ಕತ್ತಲೆಯ ಹೊತ್ತನ್ನು ಸಾಧಿಸಿ ನಾನೂ ಆ ವ್ಯಕ್ತಿಯನ್ನು ಕಾಣಲಿಕ್ಕೆ ಹೋಗಿದ್ದೆ. ಮನೆಯ ಬಾಗಿಲು ತೆರೆದೇ ಇತ್ತು. ಅವಳು ಇರಲಿಲ್ಲ. ತಾರಾದಾಸ ಭಟ್ಟರು ಎಲ್ಲವನ್ನೂ ಪರ ಪಡಿಸಿಕೊಂಡಿರುವಂತೆ ತೋರಿತು. ಹಾಗೆಯೆ ಮುಖ ಮರೆಯಿಸಿಕೊಂಡು ಓಡಿ ಬಂದೆ. ದಾರಿಯಲ್ಲಿ ಒಬ್ಬರು ಗುರುತಿನವರು ಸಿಕ್ಕಿದರು. ಅವರಿಂದ ಗೊತ್ತಾಯಿತು—ಷೋಡಶಿ ನದಿಯ ಕಡೆಗೆ ಹೋಗುತ್ತಿದ್ದದ್ದನ್ನು ಅವರು ಕಂಡಿದ್ದರಂತೆ. ಅದಕ್ಕೇ ನನ್ನ ದೃಢಭಾವನೆ—ನಿಮ್ಮನ್ನು ಸಂಕಟದಿಂದ ದಾಟಿಸಿದವರು ಯಾರೆಂಬುದು ನನಗೆ ತಿಳಿಯಿತೆಂದು. ಅಲ್ಲ, ನಿಜವಾಗಿಯೂ ಅವಳು ನಿಮ್ಮನ್ನು ಕೈ ಹಿಡಿದು ನಡೆಸಿಕೊಂಡು ಬಂದಳೆ?"

ಒಂದು ಕ್ಷಣ ವಿಚಾರ ಮಾಡಿ ಸಮ್ಮತಿ ಸೂಚಕವಾಗಿ ತಲೆದೂಗಿ ನಿರ್ಮಲನೆಂದ: "ಹೌದು! ನಾನು ನಿಜವಾಗಿಯೂ ಪೂರಾ ಕುರುಡನೆಂದು ತಿಳಿದಾಕ್ಷಣಕ್ಕೆ ಅವಳು ಸಂಕೋಚವನ್ನು ತೊರೆದು ಕೈನೀಡಿ 'ನನ್ನ ಕೈ ಹಿಡಿದುಕೊಂಡು ಬರ್ರಿ' ಎಂದಳು. ಆದರೆ ನಿನ್ನಿಂದ ಮಾತ್ರ ಇನ್ನೊಬ್ಬರ ವಿಷಯದಲ್ಲಿ ಹೀಗಾಗುವುದು ಅಸಂಭವ."

"ನಿಜ." ಹೈಮವತಿ ತಟ್ಟನೆ ಒಪ್ಪಿದಳು.

"ಅದೇ ನಾನೆಂದದ್ದು!"

ಎಲ್ಲವನ್ನೂ ವಿವರವಾಗಿ ಹೇಳಿ ಬಳಿಕ ನಿರ್ಮಲನೆಂದ: "ಇದರ ಹೊರತು ನನಗೆ ಬೇರೆ ಉಪಾಯವೇನಿತ್ತು? ಅಲ್ಲದೆ ಅವಳ ದೃಷ್ಟಿಯಿಂದಲೂ ನೋಡು. ಅವಳೂ ಬಹಳ ಗೊಂದಲದಲ್ಲಿ ಬಿದ್ದಿದ್ದಳು. ನನ್ನದು ಅವಳಿಗೆ ಕ್ಷಣಮಾತ್ರದ ಪರಿಚಯ; ಅದೂ ಒಳ್ಳೆಯ ರೀತಿಯಲ್ಲಾಗಿರಲಿಲ್ಲ.

ಆದರೂ ಅವಳು ಭಯಂಕರ ಕತ್ತಲೆಯಲ್ಲಿ ನನ್ನನ್ನು ಜತನದಿಂದ ಕರೆ ತಂದಳು. ಈ ಹೋಣೆ ಎಷ್ಟು ಅದ್ಭುತವಾದದ್ದು, ಎಂಥ ಭಯಂಕರ ವಾದದ್ದು! ಬರುತ್ತಿದ್ದಾಗ ಹೆಜ್ಜೆ ಹೆಜ್ಜೆಗೂ ಹೆದರಿಕೆ ನನಗೆ – ಯಾರಾದರೂ ಗೊತ್ತಿನವರು ಕಂಡರೆ ಏನೆಂದುಕೊಂಡಾರೆಂದು! ಇಲ್ಲಿ ನೋಡು ಹೈಮ. ನಿನ್ನ ಈ ಭೈರವಿಯನ್ನು ನಾನು ಪೂರ್ಣವಾಗಿ ಅರಿತುಕೊಳ್ಳಲಿಲ್ಲ ನಿಜ; ಸಾಮಾನ್ಯ ಜನರಿಗೆ ಅನ್ವಯಿಸುವ ನಿಯಮ ಇವಳಿಗೆ ಅನ್ವಯಿಸುವುದಿಲ್ಲ ವೆಂದು ಮಾತ್ರ ನನಗೆ ಮನವರಿಕೆಯಾಯಿತು. 'ಸತೀತ್ವ'ವೆಂದು ನಿತಕ್ಕೆನ್ನುತ್ತಾರೋ ಅದರ ಪರಿವೆ ಅವರಿಗಿನಲಿಕ್ಕಿಲ್ಲ–ನಿನ್ನ ಹಾಗೆ ಸತೀತ್ವದ ಯಥಾರ್ಥ ಕಲ್ಪನೆಯೂ ಅವಳಿಗಿರಲಿಕ್ಕಿಲ್ಲ – ಅಥವಾ ಮಾನ ಹೋದೀ ತೆಂಬ ಭಯ ಕೂಡಾ ಅವಳಿಗಿರಲಿಕ್ಕಿಲ್ಲ."

ಸ್ವಲ್ಪ ಹೊತ್ತು ನೀರವವಾಗಿದ್ದು ಹೈಮವತಿಯೆಂದಳು: "ಜವಿಾ ದಾರರಲ್ಲಿ ನಡೆದ ಘಟನೆಯಿಂದ ನಿಮಗೆ ಹಾಗೆನಿಸುತ್ತದೇನು?"

"ಇದ್ದೀತು. ಈ ಹೆಂಗುಸು ಚೆಲೋ ಇದ್ದಾಳೆಯೋ ಕೆಟ್ಟ ಇದ್ದಾ ಳೆಯೋ ನನಗೆ ಗೊತ್ತಿಲ್ಲ. ಆದರೆ ಇವಳಂಥ ಗಂಭೀರ, ಸುಶಿಕ್ಷಿತ, ನಿಃಸಂ ಕೋಚ ಹೆಂಗಸು ಯಾರೂ ಇಲ್ಲವೆಂದು ಮಾತ್ರ ಆಣೆಮಾಡಿ ಹೇಳಬಹುದು. ಏಳು ಹೆಜ್ಜೆ ಕೂಡಿ ನಡೆದರೆ ಗೆಳೆತನ ಕೂಡುವುದೆಂದು ಶಾಸ್ತ್ರ. ಆ ಭಯಂಕರ ಕತ್ತಲೆಯಲ್ಲಿ ಅವಳ ಮೇಲೆಯೆ ಭಾರ ಹಾಕಿ ಇಷ್ಟುದೂರ ದಾರಿ ನಡೆದು ಬಂದೆ, ನಡುನಡುವೆ ಎಷ್ಟೋ ಪ್ರಶ್ನೆಗಳನ್ನು ಕೇಳಿದೆ: ಆದರೆ ನಿನ್ನೆ ಹೇಗೆ ಅವಳ ಅಂತ ಹತ್ತಲಿಲ್ಲವೋ ಈಗಲೂ ಹಾಗೆಯೇ ಅವಳ ವಿಷಯದಲ್ಲಿ ನಾನು ಅಜ್ಞಾನಿಯಾಗಿಯೇ ಉಳಿದಿದ್ದೇನೆ."

"ಅವಳು ವೈರವನ್ನೂ ತೋರಿಸಲಿಲ್ಲ, ಮಿತ್ರತ್ವವನ್ನೂ ಸ್ವೀಕರಿಸಲಿಲ್ಲ, ಅಲ್ಲವೆ?"

"ಹೌದು, ಎರಡೂ ಇಲ್ಲ."

ಹೈಮವತಿ ನಸುನಕ್ಕು ಕೇಳಿದಳು: "ಎಷ್ಟೆಷ್ಟೂ ಇಲ್ಲವೆ? ನೀವು ಕೂಡ ತೋರಿಸಲಿಲ್ಲವೆ?"

"ಇಷ್ಟು ಗಹನವಾದ ವಿಷಯವನ್ನು ಇಷ್ಟೊಂದು ಸಹಜವಾಗಿ ಹೊರ ಗೆಡವಲು ಹವಣಿಸುತ್ತೀಯಲ್ಲವೆ? ತನ್ನನ್ನು ತಾನು ಅರಿತುಕೊಳ್ಳುವು

ದಕ್ಕೂ ಸಮಯ ಬೇಕು ಮನುಷ್ಯನಿಗೆ ಹೈಮ!—" ನಿರ್ಮಲನು ಮಾತ ನಾಡುತ್ತಿದ್ದವನು ಒಮ್ಮೆಲೆ ಸುಮ್ಮನಾದ. ಹೈಮವತಿ ತನ್ನ ಕಡೆಗೆ ಭೇದಕ ದೃಷ್ಟಿಯಿಂದ ನೋಡುತ್ತಿರುವಳೆಂದು ಅವನಿಗೆನಿಸಿತು. ಮೊದಲಿನ ಮಾತಿ ಗನುಸಾರವಾಗಿ ಮುಂದೇನು ಮಾತನಾಡಬೇಕೆಂಬುದನ್ನು ಅವನು ಆಲೋ ಚಿಸಿ ನಿರ್ಧರಿಸಿಕೊಳ್ಳುವ ಮೊದಲೆ ಹೈಮವತಿ ಶಾಂತ ಸ್ವರದಲ್ಲಿ ನುಡಿದಳು: "ಅದು ಸರಿ. ಗಂಡುಸರಿಗೆ ತಿಳಿದುಕೊಳ್ಳಲು ಕೊಂಚ ಸಮಯ ಬೇಕು ನಿಜ. ಆದರೆ ಸ್ತ್ರೀ ಜಾತಿಗೆ ಅದೊಂದು ಶಾಪ—ಸಾಯುವವರೆಗೂ ತಮ್ಮ ಅದೃಷ್ಟವನ್ನು ಪರಿಶೀಲಿಸುವುದರಲ್ಲಿಯೇ ಹೋಗುತ್ತದೆ. ಅವರ ಆಯುಷ್ಯ. ಒಳ್ಳೇದು. ಇನ್ನು ಸ್ವಸ್ಥವಾಗಿ ಮಲಗಿರಿ. ನಾನು ಹೋಗು ತ್ತೇನೆ" ಎಂದು ನುಡಿದು, ನಿರ್ಮಲನು ಮರುಮಾತನಾಡುವುದರೊಳಗೇ ಅವಳು ಎದ್ದು ಬಾಗಿಲಿಕ್ಕಿಕೊಂಡು ಹೊರಗೆ ಹೊರಟುಹೋದಳು.

ನಿರ್ಮಲನು ಅವಳ ಕೈ ಹಿಡಿಯಲಿಲ್ಲ. ಸ್ತ್ರೀ ಜಾತಿಯ ಈ ನಿರರ್ಥಕ ವಾದ ಸಂದೇಹ, ಈ ಅವಿಚಾರ ಅವನ ಮನಸಿಗೆ ಹತ್ತಿತು. ಅವನು ಒಮ್ಮಿಗಿಲೆ ಸಂತಪ್ತನಾದ. ಗಡಿಯಾಳದ ನಿಮಿಷದ ಮುಳ್ಳು ಸಾವಕಾಶ ವಾಗಿ ಮುಂಬರಿಯುತ್ತ ಮೇಲುಗಡೆ ಇದ್ದುದು ಕೆಳಗಡೆ ಬಂದರೂ ಅವಳು ತಿರುಗಿ ಬರಲಿಲ್ಲ. ಆಗವನಿಗೆ ಚಡಪಡಿಕೆಯಾಯಿತು. ಒಬ್ಬನೇ ಹಾಸಿಗೆ ಯಲ್ಲಿ ಬಿದ್ದುಕೊಂಡಿರುವುದು ಅಸಹ್ಯವಾಯಿತು. ಎದ್ದು ಮೆಲ್ಲನೆ ಬಾಗಿಲು ತೆಗೆದುಕೊಂಡು ಹೊರಗೆ ಹೋದ. ಮೊಗಸಾಲೆಯಲ್ಲಿ ಕತ್ತಲೆಯೊಳಗೆ ಒಂದು ಕಂಬಕ್ಕಾತುಕೊಂಡು ಹೈಮವತಿ ಸ್ವಸ್ಥವಾಗಿ ಕುಳಿತಿದ್ದಳು. ಹತ್ತಿರ ಹೋಗಿ ಅವಳ ತಲೆಯ ಮೇಲೆ, ಮೈಮೇಲೆ ಕೈಯಾಡಿಸಿದ. ಇರಸಲು ಹನಿಗಳಿಂದ ಅವಳು ನಖಶಿಖಾಂತವಾಗಿ ತೊಯ್ದಿದ್ದಳು. ಅವಳ ಕೈ ಹಿಡಿದು ಬಲವಂತವಾಗಿ ಕೋಣೆಯೊಳಗೆ ಕರೆದೊಯ್ದು ಅವನೆಂದ: "ನಿನ ಗೇನು ಹುಚ್ಚುಗಿಚ್ಚು ಹಿಡಿದಿದೆಯೇ ಹೈಮ?"

ಇದಕ್ಕಿಂತ ಹೆಚ್ಚು ಮಾತನಾಡಲು ಅವನಿಗೇನೂ ಹೊಳೆಯಲಿಲ್ಲ. ಆಡುವುದು ಅಗತ್ಯವೆಂದೂ ಅವನಗೆನಿಸಲಿಲ್ಲ.

# ೧೧

ಮರುದಿನ ಮುಂಜಾನೆ ಎಚ್ಚತ್ತೊಡನೆ ಹೈಮವತಿಗೆ ರಾತ್ರಿಯ ತನ್ನ ವರ್ತನೆ ಜ್ಞಾಪಕಕ್ಕೆ ಬಂದಿತು. ಅವಳು ಲಜ್ಜೆಯಿಂದ ಕುಗ್ಗಿದಳು. ತನ್ನ ನಿರ್ದೋಷಿಯಾದ ಸುಚರಿತ್ರ ಪತಿಯ ಮೇಲೆ ತಾನು ಅಕಾರಣವಾಗಿಯೇ ಕೋಪಗೊಂಡ ತಪ್ಪನ್ನು, ಗಾಳಿ ಮಳೆ ಕತ್ತಲೆಗಳಲ್ಲಿ ಅವನು ಒಮ್ಮೆಲೆ ಕಾಣೆಯಾದುದರಿಂದ ಉಂಟಾದ ಭೀತಿಯ ತಲೆಯ ಮೇಲೆ ಹಾಕಿ, ಅವಳು ತನ್ನನ್ನು ಮೋಸಗೊಳಿಸಿಕೊಂಡು ನಗಲು ಪ್ರಯತ್ನಿಸಿದಳು. ನಗುವುದೆಂದರೆ ಮನಸು ಬಿಚ್ಚಿ ಖಿಲಖಿಲನೆ ನಗುವುದು ಅವಳ ಅಭ್ಯಾಸ. ಆದರೆ ಆ ನಗೆ ಈಗ ಅವಳಿಗೆ ಸಾಧಿಸದಾಯಿತು. ಕಣ್ಣೊಳಗಿನ ಕಸಿರು ಹೋಗಿದೆಯೆಂದು ತೋರಿತು. ಆದರೆ ದೃಷ್ಟಿ ಏನು ಮಾಡಿದರೂ ನಿಃಶಂಕವಾಗಲಿಲ್ಲ.

ಶಿರೋಮಣಿ ಬಂದು ಪ್ರಯಾಣಕ್ಕೆ ಶುಭಮುಹೂರ್ತ ತೆಗೆದುಕೊಟ್ಟ; ಹತ್ತೂವರೆ ಮೀರಬಾರದೆಂದು ಸಾರಿಹೇಳಿದ. ಹೊರಡುವ ಏರ್ಪಾಡು ಮಾಡುವುದಕ್ಕೆ ಹೈಮವತಿಯ ತಾಯಿ ಉಗ್ರಾಣ–ಅಡಿಗೆಮನೆಗಳಲ್ಲಿ ಒಂದೇ ಸವನೆ ಗಡಿಬಿಡಿ ನಡೆಸಿದ್ದಳು. ಆಕೆಗೆ ತುರಿಸಿಕೊಳ್ಳುವುದಕ್ಕೂ ಪುರಸತ್ತಿರಲಿಲ್ಲ. ಅಷ್ಟರಲ್ಲಿ ಸಭಾಸ್ಥಾನದಿಂದ ಆಜ್ಞೆ ಹೊರಟಿತು—'ರಾಯಮಹಾಶಯರು ಮಗಳನ್ನು ಕರೆಯುತ್ತಿದ್ದಾರೆ.'

ಹೈಮವತಿ ಹೊರಗೆ ಬಂದು ನೋಡಿದಳು. ಯಾವುದೋ ದೊಡ್ಡ ಉತ್ಸವವು ನಡೆದಿರುವಂತೆ ಕಂಡಿತು. ತಂದೆ ಹುಕ್ಕ ಹಿಡಿದುಕೊಂಡು ಕುಳಿತಿದ್ದ, ಶಿರೋಮಣಿಯಿದ್ದ, ಜಮೀದಾರರ ಕರಣಿಕ ಏಕಕೌಡಿಯಿದ್ದ, ತಾರಾದಾಸಭಟ್ಟನಿದ್ದ, ಇನ್ನೂ ಊರೊಳಗಿನ ಶಿಷ್ಟಜನರೆಷ್ಟೋ ಇದ್ದರು. ಅವಳ ಗಂಡನು ಮಾತ್ರ ಒಂದು ಕಡೆ ಸುಮ್ಮನೆ ಕುಳಿತಿದ್ದ.

ಆನಂದಭರದಿಂದ ಉತ್ಸಾಹದಿಂದ ಎಲ್ಲರೂ ಒಮ್ಮೆಲೆ ಮಾತನಾಡುತ್ತಿದ್ದರು; ಹೈಮವತಿಗೆ ಮೊದಲೇನೂ ತಿಳಿಯಲಿಲ್ಲ. ಶಿರೋಮಣಿಗೆ ಹಲ್ಲಿರಲಿಲ್ಲ, ಧ್ವನಿ ಯಥೇಷ್ಟವಾಗಿತ್ತು. ತನ್ನ ಧ್ವನಿಶಕ್ತಿಯೆಲ್ಲವನ್ನೂ ಒಟ್ಟಾಗಿ ಪ್ರಯೋಗಿಸಿ ಎಲ್ಲರನ್ನೂ ಸುಮ್ಮನಾಗಿಸಿದ. ಆ ಬಳಿಕ ಒಂದು ವಿಜಯವಾರ್ತೆಯನ್ನು ಪ್ರಚುರಪಡಿಸಿದ.

'ನಿನ್ನೆಯ ಭಯಂಕರ ಮಳೆಯ ರಾತ್ರಿಯಲ್ಲಿ ಒಂದು ಮಹತ್ಕಾರ್ಯವು ಕೈಗೂಡಿದೆ. ಯಾವ ಗೊಂದಲವೂ ಇಲ್ಲದೆ ಹಗೆಯ ರಾಣ್ಯಾ ಹಸ್ತಗತವಾಗಿದೆ. ಭೈರವಿ ಮನೆಯೊಳಗಿರಲಿಲ್ಲ; ಗುಪ್ತಚಾರರಿಂದ ಸುದ್ದಿ ತಿಳಿಯಿತು; ಕೂಡಲೆ ತಾರಾದಾಸನು ಹುಡುಗಿಯೊಡನೆ ಹೋಗಿ ಎಲ್ಲವನ್ನೂ ಆಕ್ರಮಿಸಿಕೊಂಡ. ಷೋಡಶಿ ಬಂದು, ತಂಟೆ ಜಗಳ ಮಾಡುವುದೊತ್ತಟ್ಟಿಗಿರಲಿ, ಹೆದರಿ ಒಂದು ಮಾತೂ ಆಡಲಿಲ್ಲ. ಬೇಕಾದ ಒಂದೆರಡು ಚಿಕ್ಕಪುಟ್ಟ ಒಡವೆಗಳನ್ನು ತೆಗೆದುಕೊಂಡು ರಾತ್ರಿಯೇ ಹೊರಟುಹೋದಳು. ಮಂದಿರದ ಹತ್ತಿರದ ಯಾತ್ರಿಕರು ಊಟ ಉಡಿಗೆ ಮಾಡುತ್ತಿದ್ದ ಮುರಕಲು ಮನೆಯಲ್ಲಿ ಅವಳು ಹೋಗಿ ಇದ್ದಾಳೆ. ಇದೆಲ್ಲ ತಾಯಿ ಚಂಡಿಯ ಕೃಪೆ. ದೇವಿಯ ದಯೆ ಹೀಗೆಯೆ ಹೆಚ್ಚುತ್ತಲಿದ್ದರೆ ಅವಳನ್ನು ಊರಿಂದ ಹೊಡೆದೋಡಿಸುವುದೂ ಕಠಿನವಲ್ಲ.

ತಾರಾದಾಸನು ಒಳ್ಳೇ ಪ್ರಸನ್ನ ಚಿತ್ತನಾಗಿದ್ದ. ಎಲ್ಲರ ಕಡೆಗೂ ನೋಡುತ್ತ ನಗುನಗುತ್ತ ವಿನಯದಿಂದ ಅವನು ಮಾತನಾಡಿದ: "ಎಲ್ಲವೂ ದೇವಿಯ ಮಾಹಾತ್ಮ್ಯ. ಎಲ್ಲ ಮಾಡಿದ್ದು ಆಕೆಯೆ. ಇಲ್ಲದಿದ್ದರೆ ಹೆಬ್ಬುಲಿ ಕುರಿಯಾಗುತ್ತಿತ್ತೆ? ಗುಡುಗುಡಿ ತೆಗೆದುಕೊಂಡು ಚಿಲಿಮೆ ಸೇದುತ್ತಿದೆ. ಬಳಿಯಲ್ಲಿಯೇ ಹುಡುಗಿ ಕೂತಿದ್ದಳು. ಚಾ ಸೋಸುತ್ತಿದ್ದಳು. ಆಗವಳು ತೊಯ್ದು ತಪ್ಪಡಿಯಾಗಿ ಎಲ್ಲಿಂದಲೋ ಬಂದಳು. ನನ್ನನ್ನು ನೋಡಿದವಳೆ ಅಲ್ಲಿಂದಲ್ಲಿಯೆ ಸ್ತಬ್ಧವಾಗಿ ನಿಂತುಬಿಟ್ಟಳು. ಸ್ವಲ್ಪಹೊತ್ತಿನ ಮೇಲೆ ಅವಳು ಮೆತ್ತಗೆ ನನಗೆಂದಳು—'ಅಪ್ಪಾ, ನಿಮ್ಮನ್ನು ನಾನೆಂದೂ ಹೋಗಿರೆಂದು ಹೇಳಿಲ್ಲ, ಇಲ್ಲಿ ಇರಬೇಡಿರೆಂದೂ ಎಂದಿದಿಲ್ಲ. ಸುಮ್ಮನೆ ಸಿಟ್ಟಿಗೆದ್ದು ಹೋಗಿ ತೊಂದರೆ ಮಾಡಿಕೊಂಡಿರಿ.'

"ನಾನು 'ಹಾಂ' ಎಂದೆ.

"ಹೊಸತಿಲೊಳಗೆ ಕಾಲಿಡುತ್ತ 'ಈ ಕೋಣೆಗೆ ನೀವು ಕೀಲಿ ಹಾಕಿದ್ದೀರೇನು?' ಎಂದು ಕೇಳಿದಳು.

"'ಹುಂ, ಹಾಕಿದ್ದೇನೆ. ಏನು ಮಾಡುವುದು ಮಾಡಿಕೋ?' ಎಂದೆ ನಾನು.

"ಕೆಲಹೊತ್ತು ಸುಮ್ಮನಿದ್ದು 'ನಿಮ್ಮೊಡನೆ ನಾನೇನೂ ವಾದಿಸುವು

ದಿಲ್ಲ ಅಪ್ಪಾ. ನೀವಿಲ್ಲಿ ಕುಶಲವಾಗಿರ್ರಿ. ಸ್ವಲ್ಪ ಬಾಗಿಲು ತೆರೆಯಿರಿ, ನನ್ನ ವೆರಡು ಬಟ್ಟೆ ತೆಗೆದುಕೊಳ್ಳುತ್ತೇನೆ' ಎಂದಳವಳು.

'ಬಾಗಿಲು ತೆರೆದುಕೊಟ್ಟೆ. ಚಂದೀಮಾತೆಯ ಅನುಗ್ರಹದಿಂದ ಅವಳೇನೂ ಗಲಭೆ ಮಾಡಲಿಲ್ಲ. ಎರಡು ಸೀರೆ, ಒಂದು ಕಂಬಳಿ, ಕೆಲವು ಪಾತ್ರಗಳನ್ನು ತೆಗೆದುಕೊಂಡು, ಕತ್ತಲೆಯಲ್ಲಿ ತೋಯಿಸಿಕೊಳ್ಳುತ್ತಲೇ ಹೊರಟುಹೋದಳು. ನಾನು ಕುಳಿತಲ್ಲಿಯೆ ದೇವಿಗೆ ನಮಸ್ಕಾರಮಾಡಿ ಎಂದೆ —'ಮಗನ ಮೇಲೆ ನಿನ್ನ ದಯೆ ಇದೇ ರೀತಿ ಇರಲಿ ತಾಯಿ. ದಿನಾ ನಿನ್ನ ಹೆಸರು ಹೇಳದೆ ಬಾಯೊಳಗೆ ನೀರು ಹಾಕುವುದಿಲ್ಲ?' "

ಶಿರೋಮಣಿ ಭರದಿಂದ ಕೈ ತಿರುವುತ್ತ ಭರವಸೆಯಿತ್ತ: "ಇರುತ್ತದೆ ಇರುತ್ತದೆ! ದೇವಿಯ ದೃಷ್ಟಿ ನಿನ್ನ ಕಡೆ ಇದೆ. ಜಗದಂಬೆ ಎಂಬುದು ಸುಮ್ಮನೆಯೆ?"

ಪಕಕೌಡಿ ಹೇಳಿದ: "ಆದರೆ ಠಾಕೂರ. ದೇವಿಯು ಗದ್ದುಗೆಯನ್ನು ತೆರವಿಡಲು ಬರುವುದಿಲ್ಲ. ಇನ್ನು ನಿಮ್ಮ ಆ ಹುಡುಗಿಯನ್ನು ಭೈರವಿ ಮಾಡುವುದಕ್ಕೆ ವಿಲಂಬ ಮಾಡಲಾಗದು, ಹೇಳಿರುತ್ತೇನೆ."

ಗುಡುಗುಡಿಯನ್ನು ಪಕ್ಕದಲ್ಲಿದ್ದವನ ಕೈಯಲ್ಲಿ ಕೊಟ್ಟು ರಾಯ ಮಹಾಶಯನೆಂದ: "ಆಗುತ್ತದೆ ಆಗುತ್ತದೆ, ಎಲ್ಲವೂ ಸರಿಯಾಗಿ ಆಗುತ್ತದೆ. ನಾನೆಲ್ಲವನ್ನೂ ಸರಿಪಡಿಸಿಕೊಡುತ್ತೇನೆ. ಹೀಗೆ ಅವಸರ ಮಾಡಬೇಡಿರಿ.' ಅಳಿಯನ ಕಡೆ ಹೊರಳಿ ಮುಂದೆಂದ: "ಹೇಗಪ್ಪ, ಆ ಮಗಳ ಕೈಯಿಂದ ಬರೆಯಿಸಿಕೊಳ್ಳಬೇಕಲ್ಲವೆ? ಬರೆಸಿಕೊಳ್ಳಲೇ ಬೇಕು! ಅದೂ ಆದೀತು. ಅವಳನ್ನು ಕರೆಸಿ ಬೆದರಿಸಿ ಕೆಲಸ ಮಾಡಿಕೊಳ್ಳುತ್ತೇನೆ. ಆದರೆ ತಾರಾದಾಸ, ನಿನಗೆ ಹೇಳಿರುತ್ತೇನೆ, ಕದಂಬ ವೃಕ್ಷದ ಕೆಳಗಡೆಯ ಭೂಮಿಯ ವಿಷಯದಲ್ಲಿ ನೀನು ಬಿಗಿ ಹಿಡಿದರೆ ನಾಗುವಂತಿಲ್ಲ. ಕಾಳಿನ ದಲಾಲಿ ಅಂಗಡಿಯನ್ನು ನನ್ನ ಕಣ್ಣೆದುರಿಗೆ ಇಡದಿದ್ದರೆ ಅನನುಕೂಲವಾಗುವುದು. ಮೋಳೆಯ ನೆವದಿಂದ ಷೋಡಶಿಯಂತೆ ನೀನೂ ನನ್ನೊಡನೆ ಜಗಳವಾಡಿದೆ. ಆದರೆ —"

ಅವನ ಭಾಷಣವು ಪೂರಯಿಸಲಿಲ್ಲ. ತಾರಾದಾಸನ ಪರವಾಗಿ ಎಲ್ಲರೂ ಹೂಗೊಡಲಾರಂಭಿಸಿದರು. ನಾಲಗೆಯನ್ನು ಕಚ್ಚಿಕೊಂಡು

ಗದ್ಗದ ಸ್ವರದಲ್ಲಿ ತಾರಾದಾಸನೆಂದ: "ಹಾಗೆನ್ನ ಬೇಡಿರಿ ರಾಯಮಹಾಶಯ. ಎಲ್ಲವೂ ತಮ್ಮದೇ ಇದೆ. ಆನೆಯೊಡನೆ ಆಡು ಹೋರಾಡಬಲ್ಲುದೆ? ಏನೆಂದೆ ಮಗೂ?–" ಎಂದು ಹೂಕಾರದ ಅಥವಾ ತಲೆದೂಗುವಿಕೆಯ ಅಪೇಕ್ಷೆಯಿಂದ ಹೈಮವತಿಯ ಕಡೆ ನೋಡಿದ; ಕೂಡಿದೆಲ್ಲ ಜನರ ಕಡೆಗೂ ಒಮ್ಮೆ ನೋಟವನ್ನು ಬೀರಿದ.

ಹೈಮವತಿ ಮಾತನಾಡಲಿಲ್ಲ. ಮೊದಲ ದಿನ ಷೋಡಶಿಯ ಬಗ್ಗೆ ನ್ಯಾಯ ವಿಚಾರ ಮಾಡುವುದಕ್ಕಾಗಿ ಕೂಡಿದ ಸಂದರ್ಭವು ಅವಳಿಗೊಮ್ಮೆಲೆ ನೆನಪಾಯಿತು. ಒಂದು ಕ್ಷಣ ನಿರುತ್ಸಾಹದ ಕಪ್ಪುಮೋಡ ಎಲ್ಲೆಡೆ ಪಸರಿಸಿದಂತೆ–ಅವಳಿಗೆನಿಸಿತು–ಒಂದೇ ಒಂದು ಕ್ಷಣ!

ಎದ್ದು ನೀಟಾಗಿ ಕುಳಿತು ತಂಬಾಕು ತನ್ನಿರೆಂದು ಕೂಗಾಡಿ ರಾಯಮಹಾಶಯನೆಂದ: "ನಿರ್ಮಲ, ಶಿರೋಮಣಿ ಹತ್ತಕ್ಕೆ ಹೊರಡುವ ಮುಹೂರ್ತ ನಿಶ್ಚಯಿಸಿದ್ದಾನೆ. ಹೆಂಗುಸರ ಕೆಲಸ, ಒಂದಿಷ್ಟು ಅವಸರಪಡಿಸದಿದ್ದರೆ ಹೊತ್ತಿನೊಳಗೆ ಹೊರಡಲಿಕ್ಕಾಗುವುದಿಲ್ಲ."

ಗೋಣಿನಿಂದ ಮಾವನ ಮಾತನ್ನು ಒಪ್ಪಿಕೊಂಡು ನಿರ್ಮಲನು ಎದ್ದು ನಿಂತ. ಇನ್ನೊಬ್ಬರು ಮಾತನಾಡುವ ಮೊದಲೇ ಹೈಮವತಿ - ಒಳಗೆ ಹೋದಳು.

ಮೋರೆ ತೊಳೆದುಕೊಳ್ಳುವುದರಿಂದ ಮೊದಲು ಮಾಡಿ ಸ್ನಾನವನ್ನು ಮುಗಿಸುವ ವರೆಗಿನ ಎಲ್ಲ ವಿಧಿವಿಧಾನಗಳನ್ನು ಸಾಂಗಗೊಳಿಸಲಿಕ್ಕೆ ಬಸು ಸಾಹೇಬನಿಗೆ ತಡವಾಗಲಿಲ್ಲ. ನಡುಮನೆಯೊಳಗೆ ಕಾಲಿಡುತ್ತಲೇ ಅಡಿಗೆ ಮನೆಯಿಂದ ಅತ್ತೆಯ ದನಿ ಅವನ ಕಿವಿಗೆ ಬಿದ್ದಿತು. ಮಗಳೊಡನೆ ಆಕೆಯದೇನೋ ಹಾಕಿಯಾಟವಾಗಿರಬೇಕು. ನಿರ್ಮಲನು ಕೋಣೆಯೊಳಗೆ ಹೋದ. ಹೈಮವತಿ ಸ್ವಸ್ಥವಾಗಿ ನೆಲದಮೇಲೆ ಕುಳಿತಿದ್ದಳು. ಅವನು ಆಶ್ಚರ್ಯ ಚಕಿತನಾಗಿ ಕೇಳಿದ: "ಏನಿದು ಗಲಭೆ? ಅತ್ತೆಯವರು ಇಷ್ಟೇಕೆ ಒದರಾಡುತ್ತಾರೆ? ಹೊರಡುವ ಹೊತ್ತಾಗಿದೆಯಲ್ಲವೆ?"

ಹೈಮವತಿಯೆಂದಳು: "ತುಂಬ ಹೊತ್ತಿದೆ. ಈ ಹೊತ್ತೇನೂ ಹೋಗುವಂತಿಲ್ಲ."

"ಏಕೆ?"

"ಏಕೇನು? ಷೋಡಶಿಗೆ ಎಂಥ ಕಷ್ಟಕಾಲಬಂದಿದೆ! ಅವಳನ್ನು ಕಂಡು ಮಾತನಾಡಿಸದೆ ಹೋಗುವದೆ?"

"ಇಷ್ಟೆ ಹೌದಲ್ಲವ್ರೊ? ಹಾಗಾದರೆ ಭೆಟ್ಟಿಯಾಗಿಬಾ. ಇನ್ನೂ ಅಷ್ಟು ಸಮಯವಿದೆ."

"ಮತ್ತೆ ನೀವೂ ಒಮ್ಮೆ ಭೆಟ್ಟಿಯಾಗಿ ಬರಬಾರದೇನು?"

ಕಳೆದ ರಾತ್ರಿಯ ಸಂಗತಿ ನೆನಪಾಯಿತು ನಿರ್ಮಲನಿಗೆ. ಅವನೆಂದ: "ಹೋಗಬೇಕೆಂದರೆ ಹೋಗಬಹುದೆಂದು ನನಗೆನಿಸುತ್ತದೆ. ಅದೇನಂಥ ದೊಡ್ಡ ಕೆಲಸವಲ್ಲ. ಆದರೆ ನಾನು ಭೆಟ್ಟಿಯಾಗುವುದರಿಂದ ಅವಳ ಸಂಕಟವು ಕಡಿಮೆಯಾಗುವುದಿಲ್ಲ!"

ತಲೆಕೊಡಹುತ್ತ ಪ್ರೇಮವತಿ, "ಸಾಧ್ಯವಿಲ್ಲ ಈಪ್ರೊತ್ತು ಹೊರಡುವುದು!"

"ಏಕೆ ಸಾಧ್ಯವಿಲ್ಲ?" ನನಗೆ ಹೈದಾಬಾದಿನ ಚಮ್ಮಾರನ ಕೇಸುಂಟಲ್ಲ—"

"ಇದ್ದುಕೊಳ್ಳಲಿ ಚಮ್ಮಾರನ ಕೇಸು! ತಂತಿ ಕೊಡಿರಿ ಈವೊತ್ತೇನು ನಿಮಗೆ ಹೊರಡುವುದಾಗುವುದಿಲ್ಲ."

"ಒಳ್ಳೇದು, ನಡೆ ಹಾಗಾದರೆ, ಇಬ್ಬರೂ ಹೋಗಿ ಮಾತಾಡಿಸಿಕೊಂಡು ಬರುವ. ಅಷ್ಟು ಅವಕಾಶವಿರುವುದಲ್ಲವೆ?"

ಪ್ರೇಮವತಿ ಮುಖವೆತ್ತಿ ನೋಡಿ ನಗುತ್ತ ನುಡಿದಳು: ಬೇಡ, ಈಗ ಬೇಡ. ಅವಳೊಂದಿಗೆ ಸಂಬಂಧವಿಡುವುದು ಇಲ್ಲಿ ಕೂಡಿದ ಮಂದಿಗೆ ಸೇರುವುದಿಲ್ಲ. ಅಪ್ಪ ಏನೆಂದಾರು? ರಾತ್ರಿಹೊತ್ತು ಸದ್ದಿಲ್ಲದೆ ಹೋಗಿ ಬರುವ."

ನಿರ್ಮಲನಿಗೆ ಅತ್ಯಂತ ಅಗತ್ಯದ ಕೋರ್ಟಿನ ಕೆಲಸವಿದ್ದಿತು. ಅಲ್ಲದೆ ಪ್ರಯಾಣವನ್ನು ಒಮ್ಮೆಲೆ ತಡೆಯುವುದಕ್ಕೆ ಹೇಳಬೇಕಾದ ನೆಪವೂ ಅವನಿಗೆ ಹೊಳೆಯಲಿಲ್ಲ. ನಿಜವಾದ ಕಾರಣವನ್ನು ತಿಳಿಸಿದರೆ ಮಾವನ ಮನಸು ವಿಕ್ಷುಬ್ಧವಾಗುವುದು. ಯೋಚಿಸಿಕೊಂಡು ಅವನು ಹೇಳಿದ: "ಅದೂ ಸರಿಯಾಗಲಾರದು. ಹೋಗಲಿಕ್ಕೇ ಬೇಕು ನಾವೀವೊತ್ತು. ನಾವು ಮಧ್ಯದಲ್ಲಿ ಹೋಗುವುದರಿಂದ ಅವಳ ಸಂಕಟಮಾತ್ರ ಹೆಚ್ಚುವುದೆಂದು

ನನಗೆನಿಸುತ್ತದೆ. ನನ್ನ ಮಾತು ಕೇಳು. ನುಮ್ಮನೆ ಮಧ್ಯಸ್ಥಿಕೆ ಮಾಡಿ ದರೆ ಹಿತಕ್ಕಿಂತ ಅಹಿತವೇ ಹೆಚ್ಚಾಗುವುದು."

ಗಂಡನ ಮುಖವನ್ನೇ ಕೆಲಹೊತ್ತು ನೋಡುತ್ತಿದ್ದಳು ಹೈಮವತಿ, ಬಳಿಕ ಅವಳೆಂದಳು: 'ನನ್ನನ್ನು ಅರಿತಿರುವಿರಲ್ಲವೆ ನೀವು? ನಾನೇನೂ ಈಪೊತ್ತು ಬರುವುದಿಲ್ಲ. ನಿನ್ನೆ ಮಾಡಿದ ತಪ್ಪಿಗಾಗಿ ನನ್ನನ್ನು ಶಿಕ್ಷಿಸುವುದೇ ಇದ್ದರೆ ನೀವೊಬ್ಬರೇ ಹೋಗಿರಿ. ನಾನು ನಿಮ್ಮನ್ನು ಹಿಡಿದುಹಾಕುವುದಿಲ್ಲ."

ಇದಕ್ಕೇನೂ ಮಾತನಾಡದೆ ನಿರ್ಮಲನು ಹೊರಟುಹೋದ.

ಅಳಿಯನ ಸ್ಟೈಯೋಳಗೆ 'ನೆಟ್ಟಗಿಲ್ಲವಾದುದರಿಂದ ಈಪೊತ್ತು ಹೊರಡ ಲಿಕ್ಕಾಗುವುದಿಲ್ಲವೆಂಬುದನ್ನು ಕೇಳಿ ಅತ್ತೆಗೆ ಆಶ್ಚರ್ಯವಾಯಿತು. ' ಚಡ ಪಡಿಕೆಯಾಯಿತು, ಎಲ್ಲಕ್ಕೂ ಮಿಗಿಲಾಗಿ ಆನಂದವಾಯಿತು. ಹೊರಗೆ ಕುಳಿತಿದ್ದ ಮಾವನು ಮಾತ್ರ 'ಹುಂ' ಎಂದಿಷ್ಟೇ ಎಂದು ಗುಡುಗುಡಿ ಸೇದ ತೊಡಗಿದ. ಅವನಿಗೆ ಆಶ್ಚರ್ಯವಾಗಲಿಲ್ಲ, ಚಡಪಡಿಕೆಯೂ ಆಗಲಿಲ್ಲ ಅವನ ಮನಸಿನೊಳಗೆ ಏನೆನಿಸಿತೋ ಏನಿಲ್ಲವೋ, ಅನುಮಾನ ಕಟ್ಟಬಲ್ಲ ವರು ಅವನ ಮುಖವನ್ನು ನೋಡಿದ್ದರೆ, ಅವನಿಗೆ ಸಂತೋಷವಾಗಿದೆ ಯೆಂದು ಯಾರೂ ಎನ್ನುತ್ತಿರಲಿಲ್ಲ.

ಕೇಸಿನ ವ್ಯವಸ್ಥೆಯ ಬಗ್ಗೆ ನಿರ್ಮಲನು ತಂತಿ ಬಿಟ್ಟ. ಅದು ನಿರರ್ಥಕವಲ್ಲ, ಅಯೋಗ್ಯವಲ್ಲ ಎಂದು ಅವರ ಮನಸಿಗೆನಿಸಿತು. ಹೊತ್ತು ಹೋದಾಗ ಮುಳುಗೀತೆಂದು ಅವರ ಮನಸು ಇಡೀ ದಿನ ತಳಮಳಿಸುತ್ತಿತ್ತು.

ಕಳೆದ ರಾತ್ರಿಯ ಹೈಮವತಿಯ ವರ್ತನವು ಎಷ್ಟು ಹಾಸ್ಯಾಸ್ಪದ ವಾದುದು, ಎಷ್ಟು ಅತಕ್ಯಕೋಟಿಯದು ಎಂಬುದನ್ನೇ ಹಗಲೆಲ್ಲಾ ಅವರು ಯೋಚಿಸುತ್ತಿದ್ದರು. ಕಣ್ಣೊಳಗಿನ ಆ ನಾಲ್ಕಾರು ಹನಿಗಳು ಒಣಗಿ ಹೋಗಿವೆಯೆಂದು ಅವರಿಗಿನ್ನೂ ಎನಿಸುತ್ತಿರಲಿಲ್ಲ. ಕ್ಷಣಕ್ಷಣಕ್ಕೂ ವಿಚಾರ ಮಾಡಿ ಮಾಡಿ ಅವರು ಯಾವುದೋ ಅಜ್ಞಾತವಾದ ಅಚಿಂತ್ಯಪೂರ್ವವಾದ ರಹಸ್ಯವನ್ನು ನಿರ್ಮಿಸುತ್ತಿದ್ದರು; ಅದರಿಂದ ಮಧುರ ಕಠೋರ ಭಾವನೆ ಗಳೆರಡೂ ಒಂದರಲ್ಲೊಂದು ಕಲಬೆರಕೆಯಾಗುತ್ತಿದ್ದವು.

ರಾತ್ರಿಯ ಕತ್ತಲೆಯಲ್ಲಿ ಕೂಡ ಅಪ್ಪನ ಕಣ್ಣು ತಪ್ಪಿಸಿ ಹೋಗುವುದು ಅಶಕ್ಯವೆಂದು ಹೈಮವತಿಗೆ ತೋರಿತು. ಆದುದರಿಂದ ಅವಳು ಗಂಡ

ನೊಂದಿಗೆ ಒಬ್ಬ ಆಳನ್ನು ಕರೆದುಕೊಂಡು ಷೋಡಶಿಯ ಹೊಸ ಬೀಡಿಗೆ ಹೋದಾಗ ಇನ್ನೂ ಸಂಜೆಯಾಗಿರಲಿಲ್ಲ. ಕಂಬಳಿಯ ಮೇಲೆ ಕುಳಿತುಕೊಂಡು ಷೋಡಶಿ ಏಕಾಗ್ರತೆಯಿಂದ ಯಾವ ಪುಸ್ತಕವನ್ನೋ ಓದುತ್ತಿದ್ದಳು. ಬೂಟಿನ ಸದ್ದನ್ನು ಕೇಳಿ ಮೇಲೆ ನೋಡಿ ಎದ್ದು ನಿಂತಳು. "ಬರಬೇಕು, ಬಾ ಅಕ್ಕಾ ಬಾ," ಎಂದೆನ್ನುತ್ತ ಮಡಿಚಿ ಚೆಲ್ಲಿದ ಕಂಬಳಿಯನ್ನು ಬಿಡಿಸಿ ಹಾಸಿದಳು.

ಇಬ್ಬರೂ ಕುಳಿತುಕೊಂಡರು. ಗಂಡ ಹೆಂಡತಿ ಒಬ್ಬರೂ ಮಾತನಾಡದೆ ಒಮ್ಮೆ ಸುತ್ತಲೆಲ್ಲ ನೋಡಿದರು. ಬಳಿಕ ಹೈಮವತಿಯೆಂದಳು: "ಅಕ್ಕನ ಹೊಸಮನೆ ಒಟ್ಟಾರ ಹೇಗೆಯೋ ಇರಲಿ, ಶಿರೋಮಣಿ ಮಹಾಶಯರೇಕೆ, ನಮ್ಮಪ್ಪ ಕೂಡ ದುಂದುಗಾರಿಕೆಯ ಆರೋಪ ಹೊರಿಸಲಾರರು. ಈ ವೈಚಿತ್ರ್ಯವನ್ನು ನೋಡುವ ಆಶೆಯಿಂದಲೇ ಇವರನ್ನು ಹಿಡಿದು ನಿಲ್ಲಿಸಿದೆ. ಇಲ್ಲದಿದ್ದರೆ ಈಹೊತ್ತು ಮಧ್ಯಾಹ್ನದ ಗಾಡಿಗೆ ನನ್ನನ್ನು ಕರೆಕೊಂಡು ಹೋಗವವರೇ." ಗಂಡನನ್ನು ಕುರಿತು ನುಡಿದಳು: "ಏನು? ಇದನ್ನು ನೋಡದೆ ಹೋಗಿದ್ದರೆ ಹಳಹಳಿ ಆಗುತ್ತಿದ್ದಿಲ್ಲವೇ?"

"ನೋಡಿದ್ದರಿಂದಾದ ಹಳಹಳಿಯೇನು ಕಡಿಮೆಯೆ?" ಎಂದ ನಿರ್ಮಲ.

ಗಂಡನ ಕಡೆಗೆ ನೋಡುತ್ತ ಹೈಮವತಿ "ಅದು ನಿಜ. ಕಣ್ಣಿಂದ ನೋಡದಿದ್ದರೇ ನೆಟ್ಟಗಿತ್ತು." ಎಂದು ನುಡಿದು ಷೋಡಶಿಯ ಶಾಂತ ಮ್ಲಾನ ಮುಖಮುದ್ರೆಯ ಕಡೆ ವಾತ್ಸಲ್ಯಪೂರ್ಣ ದೃಷ್ಟಿಯಿಂದ ನೋಡಿದಳು. "ನಾವು ಎಲ್ಲವನ್ನೂ ಕೇಳಿದೆವು. ಹೀಗೇಕೆ ಹುಚ್ಚುತನ ಮಾಡಿದೆಯಕ್ಕಾ? ಇಂಥ ಸ್ಥಳದಲ್ಲಿ ನೀನಿರುತ್ತೀಯಾ?" ಎಂದು ಕೇಳಿದಳು. ಉದ್ವೇಗದಿಂದ ಅವಳ ದನಿ ಸದ್ಗದಿತವಾಗಿತ್ತು. ಆದರೆ ಷೋಡಶಿಯ ಸ್ವರದಲ್ಲಿ ಅದು ಪ್ರತಿಧ್ವನಿಸಲಿಲ್ಲ. ತೀರ ಸಹಜವಾಗಿ ಷೋಡಶಿಯೆಂದಳು: "ಇದೂ ಇರುತ್ತಿರುತ್ತ ರೂಢಿಯಾಗುವುದು. ಎಷ್ಟೋ ಜನರು ಇದಕ್ಕೂ ಕೆಟ್ಟ ಸ್ಥಳದಲ್ಲಿ ಇರುತ್ತಾರೆ, ಅಕ್ಕಾ. ಅಲ್ಲದೆ ನೋಡು ಅಪ್ಪನಿಗೂ ಬಹಳ ತ್ರಾಸವಾಗಿತ್ತು."

"ಎಂದರೆ ನೀನು ಎಲ್ಲವನ್ನೂ ಬಿಟ್ಟುಕೊಟ್ಟೆಯಾ?" ಎಂದು ಹೈಮವತಿ ಕೇಳಿದಳು.

ಇದಕ್ಕೆ ಉತ್ತರವನ್ನು ಅವಳ ಗಂಡನೇ ಹೇಳಿದ: "ಅದರ ಹೊರತು ಬೇರೆ ಹಾದಿಯೇನಿದೆ, ಹೇಳಲ್ಲ. ಒಬ್ಬ ಅಸಹಾಯಳಾದ ಹೆಂಗುಸು ಇಡೀ ಊರಿನ ಸಂಗಡ ಹಗಲೂ ರಾತ್ರಿ ಹೋರಾಡಲಿಕ್ಕೆ ಹೇಗೆ ಈಡಾಗ ಬೇಕು?" ಷೋಡಶಿಯನ್ನುದ್ದೇಶಿಸಿ ಅವನೆಂದ: "ಇದೇ ಒಳ್ಳೇದಾಯಿತು. ಇಂಥ ಸ್ಥಳದಲ್ಲಿ ನೀವು ಸ್ವೇಚ್ಛೆಯಿಂದಲೇ ಇರಲು ನಿರ್ಧರಿಸಿದ್ದೀರಿ—ರೂಢಿಯಿಂದ ಎಲ್ಲವೂ ಒಗ್ಗುವುದೆಂದು ನಿಮಗೆನಿಸುತ್ತಿದ್ದರೆ ಈ ಜಗತ್ತಿನಲ್ಲಿ ನಿಮಗೆ ಅಸಾಧ್ಯವಾದ ತ್ಯಾಗವೇ ಯಾವುದಿಲ್ಲವೆಂದು ನನಗೆ ತೋರುತ್ತದೆ."

ಷೋಡಶಿ ಮಾತನಾಡಲಿಲ್ಲ. ಅವಳ ಮುಖಮುದ್ರೆಯಿಂದ ಅವಳ ಮನಸಿನ ಭಾವವು ಎಷ್ಟೂ ಗೊತ್ತಾಗಲಿಲ್ಲ.

ಹೈಮವತಿಯೆಂದಳು: ನೀನು ಸಂನ್ಯಾಸಿನಿ. ವಿಷಯ ಸಂಪತ್ತಿಗಳನ್ನು ಬಿಡುವುದು ನಿನಗೆ ಕಠಿಣವಲ್ಲ. ಕಾಯ ಕ್ಲೇಶಗಳನ್ನು ಅನುಭವಿಸುವುದೂ ನಿನಗೆ ಸಹಜವಾದ ವಿಷಯ. ಆದರೆ ಅವುಗಳೊಂದಿಗೆ ನಿಷ್ಕಾರಣವಾಗಿ ಬರುತ್ತಿರುವ ಕೆಟ್ಟ ಹೆಸರನ್ನೂ ಸಹಿಸಿಕೊಳ್ಳುವೆಯೇನು?"

ಷೋಡಶಿ ಕೆಲಹೊತ್ತು ಹಸನ್ಮುಖದಿಂದ ನಿಂತುಕೊಂಡಿದ್ದಳು. ಬಳಿಕೆಂದಳು: "ಕೆಟ್ಟ ಹೆಸರು ಅಸತ್ಯವಾದದ್ದಿದ್ದರೆ ಏಕೆ ಸಹಿಸಿಕೊಳ್ಳಬಾರದು? ಹೈಮ, ಲೋಕದಲ್ಲಿ ಅಸತ್ಯಕ್ಕೆ ಕೊರತೆಯಿಲ್ಲ. ಆದರೆ ಅದಕ್ಕೆ ಪ್ರತೀಕಾರ ಮಾಡಲು ಹೊರಟರೆ ಮತ್ತಷ್ಟು ಅಸತ್ಯದ ಬೆಟ್ಟಗಳೇಳುವುವು. ಅವುಗಳ ಭಾರವನ್ನು ಹೊರುವುದು ಮಹಾ ಕಠಿಣ."

"ಆದರೆ, ಆ ಏಕಕೌಡಿ ನಂದಿ ಹೊಲ್ಲದ ಸಲ್ಲದ ಮಾತುಗಳನ್ನು ಆಡುತ್ತ ತಿರುಗುತ್ತಾನಲ್ಲ, ಅವು ಸ್ತ್ರೀ ಜಾತಿಗೆ ಅಸಹನೀಯವಲ್ಲವೆ?"

ಈ ಪ್ರಶ್ನೆಯಿಂದ ಷೋಡಶಿ ಕೊಂಚವೂ ಉತ್ತೇಜಿತಳಾಗಲಿಲ್ಲ. ಅತ್ಯಂತ ಸ್ವಸ್ಥಚಿತ್ತದಿಂದ ಅವಳೆಂದಳು: "ನನ್ನ ಕಿವಿಗೆ ಬಿದ್ದ ಕೆಲ ಸಂಗತಿಗಳ ಮಟ್ಟಿಗಂತೂ ಏಕಕೌಡಿ ಸುಳ್ಳಾಡಿಲ್ಲ. ಜಮಿದಾರರ ಪ್ರಕೃತಿ

ಒಮ್ಮೆಲೆ ಕೆಟ್ಟಿತು, ಅಲ್ಲಿ ಯಾರೂ ಇದ್ದಿಲ್ಲ, ನಾನು ಅವರ ಆರೈಕೆ ಮಾಡಿದ್ದೆ—ಎಂಬುದೇನೂ ಸುಳ್ಳಲ್ಲ."

ಹೈಮವತಿಗೆ ಕೊಂಚ ರೇಗಿತು. ಷೋಡಶಿಯು ಗಂಭೀರತೆಯೊಡನೆ ಮಾಡಿದರೆ ಅವಳ ಧ್ವನಿ ಅಕಾರಣವಾಗಿಯೆ ಕಟುವಾದಂತೆ ಎನಿಸುತ್ತಿತ್ತು. ಅವಳೆಂದಳು: "ಎಲ್ಲರಿಗೂ ಎಲ್ಲ ಕೆಲಸಗಳೂ ಒಪ್ಪುವುದಿಲ್ಲ, ಅಕ್ಕಾ. ರೋಗಿಯ ಆರೈಕೆಗೂ ಸೀಮೆಯೆಂಬುದಿಲ್ಲವೆ?"

ಷೋಡಶಿ ಅದೇ ಶಾಂತಸ್ವರದಲ್ಲಿ ಉತ್ತರವಿತ್ತಳು: "ಇದೆ! ಆದರೆ ಸ್ಥಳ ಕಾಲ ಭೇದವನ್ನರಿಯದೆ ಹೊರಗಿನಿಂದಲೇ ಆ ಸೀಮೆಯನ್ನು ನಿರ್ಧರಿಸುವುದು ಸರಿಯಲ್ಲ, ಹೈಮ. ನಿನಗೇನೆನಿಸುತ್ತದೆ?" ಎಂದೆನ್ನುತ್ತ ನಿರ್ಮಲನ ಕಡೆ ನೋಡಿ ಅವಳು ಕೊಂಚ ನಕ್ಕಳು.

ಈ ಪ್ರಶ್ನೆಯ ಇಂಗಿತವನ್ನರಿತು ನಿರ್ಮಲನೆಂದ: "ಹಾಗೆ ನೋಡಿದರೆ ನಿಮ್ಮ ಈ ಅಭಿಪ್ರಾಯವನ್ನು ಅಲ್ಲಗಳೆಯಲಾಗುವುದಿಲ್ಲ. ಅಲ್ಲದೆ ಇಂಥ ಎಲ್ಲೆಕಟ್ಟುಗಳು ಎಲ್ಲರಿಗೂ ಸಮನಾಗಿ ಅನ್ವಯಿಸುವುದಿಲ್ಲ. ದೃಷ್ಟಾಂತಕ್ಕೆ ಸಂನ್ಯಾಸಿನಿಯ ವಿಷಯ ತೆಗೆದುಕೊಳ್ಳಬಹುದು."

ಗಂಡನ ಉತ್ತರದಲ್ಲಿಯ ಉದ್ದೇಶವನ್ನು ಹೈಮವತಿಗೆ ಗ್ರಹಿಸಲಾಗಲಿಲ್ಲ. ಅವಳೆಂದಳು: "ಸಂನ್ಯಾಸಿನಿಯಾದರೇನಾಯಿತು? ಅವಳಿಗೆ ಧರ್ಮವಿಲ್ಲವೆ? ಅವಳು ಹೆಂಗುಸಲ್ಲವೆ? ಅವರು ಇವಳನ್ನು ಹಿಡಿತರಿಸಿಕೊಂಡರು; ಮತ್ತೆ ಇವಳೆನ್ನುತ್ತಾಳೆ, ತಾನಾಗಿಯೇ ಹೋದಳೆಂದು. ಏತಕ್ಕೆ ಸುಳ್ಳು ಹೇಳಿದಳು? ಅವರ ಪ್ರಕೃತಿ ಕೆಟ್ಟಿದ್ದಕ್ಕೆ ಅವರೇ ಹೊಣೆಗಾರರು. ಅಂಥ ಭಯಂಕರ ಪಾಪಿಯನ್ನು ಉಳಿಸುವ ಅಗತ್ಯ ಇವಳಿಗೇನಿದ್ದಿತು? ಇಷ್ಟರ ಮೇಲೆ ಮಂದಿ ಸಂದೇಹಪಟ್ಟರೆ ಅವರ ತಪ್ಪೇ?"

ಹೆಂಡತಿಯ ಮಾತನ್ನು ಕೇಳಿ ನಿರ್ಮಲನಿಗೆ ಸಿಟ್ಟು ಬಂದಿತು, ನಾಚಿಕೆಯೂ ಆಯಿತು. ಹೈಮಳು ಅವಳ ಮೇಲೆ ಆರೋಪ ಹೊರಿಸಲಿಕ್ಕೆಂದು ಬಂದವಳಲ್ಲ. ಎರಡನೆಯವರ ಮನೆಗೆ ಬೇಕೆಂತ ಹೋಗಿ ಅವರ ಅಪಮಾನ ಮಾಡುವ ಕ್ಷುದ್ರ ಮನೋವೃತ್ತಿಯವಳೂ ಅವಳಲ್ಲ. ವಾಸ್ತವವಾಗಿ, ನಿನ್ನೆಯ ಉಪಕಾರಕ್ಕಾಗಿ ಕೃತಜ್ಞತೆಯನ್ನು ಸೂಚಿಸಿ, ಸಹಾನುಭೂತಿಯಿಂದ ಸಂತಯಿಸುವುದಕ್ಕಾಗಿ ಅವಳು ಬಂದುದು. ಆದರೆ ಮಾತಿಗೆ

ಮಾತು ಬಂದು ಅವಳ ಬಾಯಿಂದ ಅಲ್ಲದ ಮಾತು ಹೊರಟಿತು. ಚರ್ಚೆಯು ಸೆಳವಿಗೆ ಬಿದ್ದು ಅವಳು ಮತ್ತೇನಾದರೂ ಮಾತನಾಡಿಬಿಟ್ಟಾಳೆಂಬ ಭಯ ನಿರ್ಮಲನಿಗೆ. ಆವನು ಅಸ್ವಸ್ಥನಾಗಿ ನಡುವೆ ಬಾಯಿಹಾಕುವವನಿದ್ದ. ಆದರೆ ತನ್ನಿಂದ ತಾನೇ ಆ ಪ್ರಸಂಗವು ತಪ್ಪಿತು. ಷೋಡಶಿ ನಕ್ಕು ನುಡಿದಳು: "ಸಂನ್ಯಾಸಿನಿಯಲ್ಲದವಳಿಗೆ ಸಂನ್ಯಾಸಿನಿಯ ಧರ್ಮ ಒಗ್ಗಲಾರದೆಂದು ಇದೀಗ ನಿನ್ನ ಪತಿದೇವರು ಹೇಳಿದರು. ಇಂಥ ಬಯಲು ಧರ್ಮಶಾಲೆಯಲ್ಲಿ, ಹಾಳು ಮನೆಯೊಳಗೆ, ನಿರಾಶ್ರಿತಳಾಗಿ, ಒಬ್ಬೊಂಟಿಗಳಾಗಿ ಇರುವುದು ನಿನಗೆ ಒಗ್ಗಲಾರದು--" ಎಂದು ಅವಳು ಮತ್ತೆ ನಕ್ಕು "ನಿಜವಾಗಿಯೂ ನಾನು ನಿನಗೆ ಮತ್ತೆ ಹೇಳುತ್ತೇನೆ--ನನ್ನ ಇಚ್ಛೆಗೆ ವಿರೋಧವಾಗಿ ನನ್ನನ್ನು ಯಾರೂ ಹಿಡಿದೊಯ್ದಿರಲಿಲ್ಲ. ಸಿಟ್ಟಿನ ಆವೇಶದಲ್ಲಿ ನಾನೇ ಹೋಗಿದ್ದೆ" ಎಂದಳು.

"ಆದರೆ ನೀವು ಸಿಟ್ಟಿನ ಸ್ವಭಾವದವರೆಂದು ನನಗೇನೂ ಎನಿಸುವುದಿಲ್ಲ" ನಿರ್ಮಲನೆಂದ.

ಷೋಡಶಿ ನಗೆಯನ್ನು ಸಂಯಮಿಸಿಕೊಂಡು, "ಇದ್ದೇನೆ. ಹಾಗಾದರೆ!" ಎಂದು ನುಡಿದು ಹೈಮವತಿಯನ್ನುದ್ದೇಶಿಸಿ. "ಆ ಬಗ್ಗೆ ನಾನು ವಾದ ಹಾಕುತ್ತ ಕೂತುಕೊಳ್ಳುವುದಿಲ್ಲ. ನಾನು ಸತ್ಯವಾಗಿಯೂ ಸುಳ್ಳು ಹೇಳಿದೆ. ಪಾಪಿ ಮನುಷ್ಯನನ್ನು ಉಳಿಸಲಿಕ್ಕೆ ಯಾರೂ ಪ್ರಯತ್ನಿಸಬಾರದೇನು? ನಿನ್ನ ಗಂಡ ವಕೀಲರಿದ್ದಾರೆ, ಯಾವಾಗಾದರೂ ಅವರನ್ನು ಕೇಳಿ ನೋಡು."—ಎಂದಳು.

ನಿರ್ಮಲನೆಂದ: "ಈ ಪ್ರಶ್ನೆಗೆ ಉತ್ತರ ಕೊಡುವುದು ಸಾಮಾನ್ಯ ಬುದ್ಧಿಯಿಂದಲೇ ಸಾಧ್ಯ. ವಕೀಲ ಬುದ್ಧಿಗೆ ಇದರ ನೆಲೆ ತಿಳಿಯುವುದಿಲ್ಲ."

ಷೋಡಶಿಯೆಂದಳು: "ಅಲ್ಲದೆ ನೋಡು, ಒಂದು ವೇಳೆ ಹೀಗೂ ಇರಬಹುದು—ಅವರಿಂದ ಈ ತಪ್ಪುಗಳು ತಿಳಿದೂ ತಿಳಿದೂ ಆಗಿರಲಿಕ್ಕಿಲ್ಲ—"

ಹೈಮವತಿ ನಡುವೆಯೇ ನುಡಿದಳು: "ಎಂದ ಮಾತ್ರಕ್ಕೆ ತಂದೆಗೆ ಎದುರು ನಿಲ್ಲುವುದೆ? ಅದೂ ಸಂನ್ಯಾಸಿನಿಯ ಧರ್ಮವೋ?"

ಷೋಡಶಿಗೆ ಕೋಪ ಬರಲಿಲ್ಲ. ಹಸನ್ಮುಖದಿಂದಲೇ ಉತ್ತರವಿತ್ತಳು: "ಸಂನ್ಯಾಸಿನಿಯ ಧರ್ಮವಾಗಲಿ ಬಿಡಲಿ, ಆದರೆ ಸ್ತ್ರೀಜಾತಿಯ ದೃಷ್ಟಿ

ಯಿಂದ ತಂದೆಗಿಂತಲೂ ಹೆಚ್ಚಿನ ವಿಷಯವೂ ಜಗತ್ತಿನಲ್ಲಿಲ್ಲವಂತೆ. ಹಾಗಿಲ್ಲ ದಿದ್ದರೆ, ಹೈಮು, ಈ ಹಾಳು ಮನೆಯಲ್ಲಿ ನಿನ್ನ ಪಾದಧೂಳಿ ಬೀಳುತ್ತಿತ್ತೇ ?"

ಹೈಮವತಿ ಲಜ್ಜೆಯಿಂದ ತಲೆತಗ್ಗಿಸಿ ಅವಳ ಕಾಲನ್ನು ಮುಟ್ಟಿ ನಮಸ್ಕಾರ ಮಾಡಿದಳು. "ಹೀಗೆ ಮಾತನಾಡಬೇಡ ಅಕ್ಕಾ, ನಮ್ಮ ಮಾವನಿಗೆ ಯಾವ ರಾಜನೋ ಒಂದು ಕತ್ತಿಯನ್ನು ಕೊಟ್ಟಿದ್ದ. ಚಿಕ್ಕಂದಿನಲ್ಲಿ ನಾನು ಅದನ್ನು ಆಸರಂತ ತೆಗೆದು ತೆಗೆದು ನೋಡುತ್ತಿದ್ದೆ. ಒರೆಯ ಮೇಲೆ ಧೂಳು ಕೂತಿತ್ತು. ಆದರೆ ಒಳಗಿನ ಕತ್ತಿಯ ಮೇಲೆ ಒಂದೇ ಒಂದು ಕಲೆ, ಒಂದೇ ಒಂದು ಧೂಳಿಯ ಕಣ ಇರಲಿಲ್ಲ. ಅದು ಸರಳ, ಗಟ್ಟಿಮುಟ್ಟು, ಚೊಕ್ಕ. ನಿನ್ನನ್ನು ನೋಡಿ ನನಗೆ ಆ ಕತ್ತಿ ನೆನಪಿಗೆ ಬರುತ್ತಿದೆ. ಈ ಜನ ತಪ್ಪುಮಾಡುತ್ತಿದ್ದಾರೆಂದು ಎನಿಸುತ್ತದೆ. ಯಾರಿಗೂ ಏನೂ ಗೊತ್ತಿಲ್ಲ. ಮನಸು ಮಾಡಿದರೆ ಈ ಹೊಲಸು ಒರೆಯನ್ನು ಸಹಜವಾಗಿಯೇ ಬಿಸಾಡಿಬಿಡಬಹುದು ನೀನು. ಏಕೆ ಬಿಸಾಡುವುದಿಲ್ಲ, ಅಕ್ಕಾ ?"

ಅವಳ ಬಲಗೈಯನ್ನು ಹಿಡಿದು ತನ್ನ ಹತ್ತಿರಕ್ಕೆ ಸೆಳೆದುಕೊಂಡು ಷೋಡಶಿ ಕೆಲಹೊತ್ತು ಮೌನವಾಗಿ ಕುಳಿತಳು. ಬಳಿಕೆಂದಳು: "ಇಂದು ನೀವು ಹೋಗುವವರಿದ್ದಿರಲ್ಲವೆ? ಏಕೆ ಉಳಿದಿರಿ ? ನಾಳೆ ಹೋಗುತ್ತೀರಿ ಕಾಣುತ್ತದೆ ?"

ಗಂಡನ ಕಡೆ ಬೆರಳುಮಾಡಿ ಹೈಮವತಿ ಹೇಳಿದಳು: "ನಿನ್ನೆ ರಾತ್ರಿ ಯಾರೋ ಇವರನ್ನು ಕೈಹಿಡಿದು ನದಿ ದಾಟಿಸಿ ಸುರಕ್ಷಿತವಾಗಿ ಮನೆಗೆ ಮುಟ್ಟಿಸಿದರು. ಆ ಮನುಷ್ಯನಿಗೆ ಅಖಂಡ ಒಂದು ರೂಪಾಯಿ ಪಾರಿತೋಷಕ ಕೊಡುವುದಾಗಿ ಅಪ್ಪ ಸಾರಿದ್ದಾರೆ. ಆದರೆ ಆ ಪ್ರಾಣಿಗೆ ಆ ರೂಪಾಯಿಯೇನು ಕೈಸೇರುವುದಿಲ್ಲ; -- ಅವರು ಸಿಕ್ಕುವುದೇ ಇಲ್ಲ. ಈ ಕುರುಡ ಮನುಷ್ಯರನ್ನು ಆ ಮಳೆಯಲ್ಲಿ ಮನೆಗೆ ಮುಟ್ಟಿಸದಿದ್ದರೆ ಏನಾಗುತ್ತಿತ್ತೆಂಬುದು ನನಗೊಬ್ಬಳಿಗೇ ಗೊತ್ತು. ಆ ಪ್ರಾಣಿಯ ಹೆಸರನ್ನು ನಾನು ಬಲ್ಲೆ. ಅವರಿಗೆ ಬಕ್ಷೀಸು ಕೊಡುವುದು ಶಕ್ಯವಿಲ್ಲ. ಆದ್ದರಿಂದ ಅವರ ಪಾದದ ಮೇಲೆ ತಲೆಯಿಟ್ಟು—" ಎಂದೆನ್ನುತ್ತ ತನ್ನ ಕೈಯನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಷೋಡಶಿ ಬೇಕೆಂತಲೇ ಅವಳ ಕೈಯನ್ನು ಬಿಗಿಯಾಗಿ ಹಿಡಿದಳು. ಅವಳು ನಸುನಕ್ಕಳು ಮಾತ್ರ.

ಹೈಮವತಿ ಎಡಗೈಯಿಂದ ಕೊನೆಗಣ್ಣಿನ ಕಂಬನಿಯನ್ನು ಒರಸಿಕೊಂಡು ನಕ್ಕು ನುಡಿದಳು : "ನಿನ್ನ ಪಾದಧೂಳಿಯನ್ನು ಕೊಡುವುದಿಲ್ಲವೆ ಅಕ್ಕಾ? ಸ್ವಲ್ಪ ಕೈಬಿಡು ನೋಡುವ. ಮುರಿಯಿತವ್ವಾ ನನ್ನ ಕೈ! ನಿನ್ನ ಮನಸೊಂದೇ ಗಟ್ಟಿಯಲ್ಲ; ನಿನ್ನ ಕೈಯೇನು ಕಡಿಮೆ ಗಟ್ಟಿಯೆ? ನನಗೆ ಆ ಕತ್ತಿಯ ನೆನಪಾದದ್ದು ಸುಮ್ಮನೆ ಅಲ್ಲ. ನನಗೊಂದು ಮಾತು ಕೊಡು ಅಕ್ಕಾ – ಎಂದಾದರೂ ಅಗತ್ಯವುಂಟಾದಾಗ ಪರವೂರಲ್ಲಿರುವ ಈ ತಂಗಿಯನ್ನು ನೆನೆಯುವೆಯಲ್ಲವೆ?"

ಷೋಡಶಿ ಅವಳ ಕೈಮೇಲೆ ಮೆಲ್ಲನೆ ಕೈಯಾಡಿಸುತ್ತಿದ್ದಳು; ಮಾತನಾಡಲಿಲ್ಲ.

"ವಚನ ಕೊಡುವುದಿಲ್ಲವೆಂದು ಕಾಣುತ್ತದೆ?" ಹೈಮವತಿ ಮತ್ತೆ ಕೇಳಿದಳು.

"ನನ್ನ ನಲುವಾಗಿ ನಿನ್ನ ತಂದೆಯೊಡನೆ ನಿನ್ನ ಜಗಳವಾಗಬೇಕೆಂದು ನನಗೆನಿಸೀತೆ?" ಷೋಡಶಿ ತಿರುಗಿ ಕೇಳಿದಳು.

"ಜಗಳವಿಲ್ಲದೆ ಕೂಡ ಇತರ ಎಷ್ಟೋ ಕೆಲಸ ಮಾಡಬಹುದಲ್ಲ!" ಎಂದು ನಿರ್ಮಲನೆಂದ.

"ಅವನ್ನು ಕೂಡ ನೀವು ಮಾಡಬಾರದೆಂದು ನಾನೆನ್ನುವುದು. ಹೀಗೆಂದ ಮಾತ್ರಕ್ಕೆ, ಪರವೂರಲ್ಲಿದ್ದ ನನ್ನ ತಂಗಿಯನ್ನು ನಾನು ಮರೆಯುವೆನೆಂದಲ್ಲ. ಆಗಾಗ ನನ್ನ ವರ್ತಮಾನ ನಿಮಗೆ ತಿಳಿಯುತ್ತಿರುವುದು" ಎಂದಳು ಷೋಡಶಿ.

ಹೈಮವತಿಯೊಡನೆ ಬಂದಿದ್ದ ಆಳು ಹೊರಗೆ ಕುಳಿತಿದ್ದ. ಅವನೆಂದ: "ನಿನ್ನೆಯಂತೆಯೇ ಈಪೊತ್ತೂ ಮಳೆಯಾಗುವ ಹಾಗೆ ಕಾಣುತ್ತಿದೆ, ಬಾಯಿಯವರೇ. ಮೋಡ ಮುಸುಕಲಿಕ್ಕೆ ಹತ್ತಿದೆ."

ಹೊರಕ್ಕೆ ಹಣಿಕಿನೋಡಿ ಹೈಮವತಿ ಷೋಡಶಿಗೆ ನಮಸ್ಕರಿಸಿ ಎದ್ದು ನಿಂತಳು. ನಿರ್ಮಲನು ಕೈಜೋಡಿಸಿ, "ನಿಮ್ಮಾ ಋಣ ಕೊನೆತನಕ ಹಾಗೆಯೆ ಉಳಿಯುವುದು. ತೀರಿಸುವ ಆಶೆಯೇ ಕಾಣಲೊಲ್ಲದು ನನಗೆ. ನಾನು ಕೋರ್ಟಿನ ಮನುಷ್ಯ; ಆಸ್ತಿಯುಳ್ಳ ಭೈರವಿಗೆ ನನ್ನಿಂದ ಸಹಾಯವಾಗಬಹುದಿತ್ತು. ಆದರೆ ಮುರಕ ಧರ್ಮಶಾಲೆಯಲ್ಲಿ ವಾಸವಾಗಿರುವ

ಸಂನ್ಯಾಸಿನಿ ನನ್ನ ಕ್ಷೇತ್ರದೊಳಗೆ ಬರಲಾರಳು. ಎಲ್ಲವನ್ನೂ ತೊರೆದು ಬಿಟ್ಟಲ್ಲದೆ ನಿಮಗೆ ಗತ್ಯಂತರವಿರಲಿಲ್ಲ ನಿಜ, ಆದರೆ ಇಷ್ಟು ತ್ಯಾಗಮಾಡಿದ್ದಕ್ಕೂ ಸಾರ್ಥಕವಾದೀತೆಂದು ನನಗೆ ತೋರುವುದಿಲ್ಲ" ಎಂದ.

ಷೋಡಶಿ ಎದ್ದು ನಿಂತು ಹೇಳಿದಳು; "ಯಾರೆನ್ನುತ್ತಾರೆ, ನಾನು ಎಲ್ಲವನ್ನೂ ಬಿಟ್ಟಿದ್ದೇನೆಂದು? ನಾನು ಏನನ್ನೂ ಬಿಟ್ಟಿಲ್ಲ."

ನಿರ್ಮಲ ಹೈಮರಿಬ್ಬರೂ ಚಕಿತರಾದರು. ಅವರಿಬ್ಬರೂ ಒಮ್ಮೆಲೆ ನುಡಿದರು: "ಬಿಟ್ಟಿಲ್ಲವೆ? ಯಾವ ಹಕ್ಕನ್ನೂ ಬಿಟ್ಟಿಲ್ಲವೆ?"

ಷೋಡಶಿ ಅಷ್ಟೇ ಶಾಂತವಾಗಿ ಹೇಳಿದಳು: "ಇಲ್ಲ, ಖಂಡಿತ ಇಲ್ಲ. ನಾನು ಹೆಂಗುಸು, ನಿರುಪಾಯ ಸ್ಥಿತಿ, ಆದರೂ ಸ್ತ್ರೀಯ ಅಧಿಕಾರವನ್ನು ಕೊಂಚವೂ ಸಡಿಲಾಗಗೊಡುವುದಿಲ್ಲ. ಅವರು ಗಂಡಸರು, ಅವರಿಗೆ ಬಲ ಇದೆ, ಆ ಬಲವನ್ನು ಹದಿನಾರಾಣೆ ಒರೆಗೆ ಹಚ್ಚಿದೆ ನನ್ನಿಂದ ಅವರು ಏನನ್ನೂ ಪಡೆಯಲಾರರು. ಅವರಿಗೆ ಒಂದು ಹಿಡಿ ಮಣ್ಣೂ ಸಿಕ್ಕಲಾರದು. ನಿರ್ಮಲಬಾಬೂ, ನಾನು ಹೆಂಗುಸಾಗಿರುವುದೇ ನನ್ನ ವ್ಯಂಗವೆಂದು ಅವರು ಭಾವಿಸಿದ್ದಾರೆ. ಆದರೆ ಅದು ತಪ್ಪು; ಈ ಭ್ರಮೆಯನ್ನು ಬಿಟ್ಟು ಬಿಡುವುದೇ ಅವರಿಗೆ ಲೇಸು."

ಅವಳ ಭಾಷಣವನ್ನು ಕೇಳಿ ಇಬ್ಬರೂ ಸಾವಧಾನವಾದರು. ಅಲ್ಲಿ ದೀಪ ಹಚ್ಚಿರಲಿಲ್ಲ ಇನ್ನೂ. • ಮಬ್ಬುಗತ್ತಲೆಯಲ್ಲಿ ಅವಳ ಮುದ್ರೆ, ಅವಳ ಕಣ್ಣು, ಅವಳ ಕ್ಷೀಣಶರೀರದ ಅಸ್ಪಷ್ಟ ಋಜುತೆಗಳ ಹೊರತು ಬೇರಾವುದೂ ಅವರಿಗೆ ಕಾಣಿಸಲಿಲ್ಲ. ಆದರೂ ಅವಳ ಶಾಂತಗಂಭೀರ ಕಂಠಸ್ವರದಲ್ಲಿ ಹೊರಟುದು ಪೊಳ್ಳು ಬೆದರಿಕೆಯಲ್ಲವೆಂದು ಇಬ್ಬರಿಗೂ ಮನವರಿಕೆಯಾಯಿತು.

ಹತ್ತಿರದ ಬೀದಿಯ ಮುರುವಿನಲ್ಲಿ ಏನೋ ಜನರ ಸದ್ದು ಕೇಳಿಸಿತು. ಮುಂದೆ ಹಿಂದೆ ದೀವಿಗೆ ಹಿಡಿಸಿಕೊಂಡು ಎರಡು ಪಲ್ಲಕ್ಕಿಗಳು ಹೊರಟಿದ್ದವು. ದಿಟ್ಟಿಸಿ ನೋಡಿ ನಿರ್ಮಲನೆಂದ; "ಜಮೀದಾರರ ಪಾದಧೂಳಿ ಇಂದೂ ಬಿದ್ದಿರುವಂತೆ ಕಾಣುತ್ತದೆ."

ಷೋಡಶಿ ಆಶ್ಚರ್ಯಚಕಿತಳಾಗಿ ಒಳಗಿನಿಂದ ನುಡಿದಳು: "ಜಮೀ

ದಾರ ಬಾಬು! ಅವರು ಬರುವವರಿದ್ದರೇನು ?" ಎಂದೆನ್ನುತ್ತ ಅವಳು ಬಾಗಿಲ ಬಳಿ ಬಂದು ನಿಂತುಕೊಂಡಳು.

ನಿರ್ಮಲನೆಂದ: "ಹೌದು. ಹೊಳೆದಂಡೆಯ ಅವರ ನರಕಕುಂಡದ ಉಡುಗೋಣ ಸಾರಿಸೋಣ ನಡೆದಿತ್ತು. ಪ್ರಕೃತಿ ಸ್ವಾಸ್ಥ್ಯಕ್ಕಾಗಿ ಧನಿಯರು ಇಂದು ನಾಳೆ ಇಷ್ಟರಲ್ಲಿ ಬಂದು ತಮ್ಮ ಸ್ವರಾಜ್ಯದಲ್ಲಿ ತಳವೂರುವರೆಂದು ಏಕಕೌಡಿ ಎನ್ನುತ್ತಿದ್ದರು. ಹಾಗೇ ಆದಂತೆ ಕಾಣುತ್ತದೆ."

ಷೋಡಶಿ ನಿಶ್ಚಲಳಾಗಿ ಅಲ್ಲಿಯೇ ನಿಂತಿದ್ದಳು. ನಿರ್ಮಲನು ಬೀಳ್ಕೊಳ್ಳುತ್ತ "ನಾವು ದೂರ ಇರುತ್ತೇವೆ ನಿಜ. ಆದರೂ ನಾವಿರುವ ತನಕ ನೀವು ನಿರಾಧಾರರೆಂದು ತಿಳಿದುಕೊಳ್ಳಬೇಡಿರಿ" ಎಂದು ಹೈಮಳ ಕೈಯನ್ನು ಹಿಡಿದುಕೊಂಡು ಕತ್ತಲೆಯೊಳಗೆ ಹೊರಟುಹೋದ.

ಷೋಡಶಿ ಆ ಮಾತಿಗೆ ಉತ್ತರ ಕೊಡಲಿಲ್ಲ.

## ೧೨

ಆ ಪ್ರಕಾಂಡ ಮಂದಿರದ ಆವಾರಗೋಡೆಯ ಆಚೆಗೆ ಜಮೀನುದಾರ ಜೀವಾನಂದ ಚೌಧರಿಯ ಪಲ್ಲಕ್ಕಿಗಳೆರಡೂ ಮರೆಯಾದವು.

ಕತ್ತಲೆ ದಟ್ಟವಾಗಿ ಕವಿದಿತ್ತು. ಒಂದೆರಡು ದೀವಿಗೆಗಳ ಬೆಳಕು ಚೆನ್ನಾಗಿ ಕಾಣುವುದಕ್ಕೆ ಸಾಕಷ್ಟಿರಲಿಲ್ಲ. ಆದರೂ ಆ ಗೃಹಸ್ಥನು ತನಗೆ ಒಳ್ಳೇ ಸುಸ್ಪಷ್ಟವಾಗಿ ಕಾಣಿಸಿದನೆಂದು ಷೋಡಶಿಗೆ ಭಾಸವಾಯಿತು. ಬರೀ ಅವನೊಬ್ಬನೇ ಕಂಡನೆಂದಲ್ಲ. ಅವನ ಪಲ್ಲಕ್ಕಿಯ ಹಿಂದಿನ ಮುಸುಕು ಹಾಕಿದ ಪಲ್ಲಕ್ಕಿಯಲ್ಲಿ ಮೌನವಾಗಿ ಕುಳಿತಿದ್ದ ವ್ಯಕ್ತಿಯ ಸೀರೆಯ ಅಗಲ ವಾದ ಅಂಚು ಬಾಗಿಲ ಸಂದಿನೊಳಗಿಂದ ಹೊರಬಿದ್ದದ್ದೂ ಗೋಚರಿಸಿತು; ಅವಳ ಬಳೆಗಳ ಮೇಲೆ ಬೆಳಕು ಬಿದ್ದು ಅವು ಒಮ್ಮೆಲೆ ಮಿಂಚಿ ಕಾಣಿಸಿ ಕೊಂಡವು; ಅವಳ ಎರಡು ಕಿವಿಗಳಲ್ಲಿಯೂ ಪಚ್ಚೆಯ ಡೂಲುಗಳು ನೇತಾಡುತ್ತಿದ್ದವು; ಬೆರಳಲ್ಲಿಯ ಉಂಗುರದ ಹಸಿರು ಹರಳು ಮಿನುಗು ತ್ತಿತ್ತು-- ಇದೆಲ್ಲವನ್ನು ಕಲ್ಪಿಸಿಕೊಳ್ಳುತ್ತಿದ್ದಂತೆ ಅವಳು ಒಮ್ಮೆಲೆ ಬೆಚ್ಚಿ ಬಿದ್ದಳು.

ಈ ಎಲ್ಲ ವಸ್ತುಗಳನ್ನು ಹೈಮಳ ಪೈಮೇಲೆ ನೋಡಿದ್ದಂತೆ ಅವಳಿಗೆ ನೆನಪಾಯಿತು. ಒಡನೆ ಅವಳು ಆ ಕತ್ತಲೆಯೊಳಗೂ ಲಜ್ಜೆಯಿಂದ ಉಡುಗಿದಳು. 'ಚಂಡೀ! ಚಂಡೀ!' ಎಂದು ಎದುರಿನ ಗುಡಿಯನ್ನು ಅನುಲಕ್ಷಿಸಿ ಚೌಕಟ್ಟಿನ ಮೇಲೆ ಹಣೆಯಿಟ್ಟು ನಮಸ್ಕರಿಸಿದಳು. ಮನಸಿನೊಳಗಿನ ಎಲ್ಲ ಶಂಕೆ ಕುಶಂಕೆಗಳನ್ನು ಬಲಪೂರ್ವಕವಾಗಿ ಕೊಡವಿ, ಒಳಗೆ ಹೋಗಿ ನಿಂತುಕೊಂಡಳು. ಆಗ ಇನ್ನಿಬ್ಬರು ಸ್ತ್ರೀಪುರುಷರ ಚಿಂತೆಯಿಂದ ಅವಳ ಹೃದಯವು ಜಡವಾಗಿದ್ದಿತು.

ಕೆಲಹೊತ್ತಿನ ಮುಂಚೆ ಅವರ ಸಂಭಾಷಣೆ ನಡೆದಾಗ ಬಿರುಗಾಳಿ–ಮಳೆಗಳ ಭಯದಿಂದ ಅವಳ ಮನಸು ಅಸ್ವಸ್ಥವಾಗಿದ್ದಿತು. ಮೇಲೆ ಕಪ್ಪು ಮೋಡಗಳು ಕವ್ವನೆ ಕವಿದು ಬರುತ್ತಿದ್ದವು. ಇಷ್ಟರೊಳಗೇ ಗಾಳಿ ಬೀಸಲಾರಂಭಿಸಬಹುದೆಂದು ಎನಿಸುತ್ತಲಿತ್ತು. ನಿನ್ನೆ ರಾತ್ರಿಯ ಕ್ಲೇಶಗಳನ್ನು ಹೇಗೆ ಹೇಗೋ ಅವಳು ಸಹಿಸಿದ್ದಳು; ಉಳಿದ ರಾತ್ರಿಯನ್ನು ದೇವಸ್ಥಾನದ ಮುಚ್ಚಿದ ಬಾಗಿಲಿನ ಹೊರಗಡೆ ಅತಿ ಕಷ್ಟದಿಂದ ಕಳೆದಿದ್ದಳು. ಈ ಬಗೆಯ ಶಾರೀರಿಕ ಕ್ಲೇಶಗಳನ್ನು ಸಹಿಸಿ ಅವಳಿಗೆ ಅಭ್ಯಾಸವಿರಲಿಲ್ಲ. ಭೈರವಿಗೆ ಈ ತೆರದ ಕಷ್ಟಗಳನ್ನು ಸಹಿಸುವ ಅಗತ್ಯವೂ ಇರಲಿಲ್ಲ. ಆದರೂ ಆ ಬಗ್ಗೆ ಅವಳಿಗೆ ವಿಶೇಷವೇನೂ ಎನಿಸಲಿಲ್ಲ. ಮನೆಮಾರುಗಳನ್ನು ದೈವಗೇಡಿ ತಂದೆಗೆ ಸ್ವೇಚ್ಛೆಯಿಂದಲೇ ದಾನಮಾಡಿ ಬಂದಿದ್ದಳು; ಇಡೀ ದಿನ ಆ ಬಗ್ಗೆ ಅವಳು ಕೊಂಚವೂ ಯೋಚಿಸಿರಲಿಲ್ಲ. ಆದರೆ ಈಗ ತನ್ನ ಮನಸು ಅತ್ಯಂತ ನಿರ್ವಿಣ್ಣವಾಗಿರುವಂತೆ ಅವಳಿಗೆ ಭಾಸವಾಯಿತು.

ಊರಿನ ಕಡೆಯುಕ್ಕಡದಲ್ಲಿದ್ದ ಮುರುಕ ಮನೆಯೊಳಗೆ ಇಡೀ ರಾತ್ರಿಯನ್ನು ಕಳೆಯುವುದೆಂತು? ಅವಳು ಸುತ್ತುಕಡೆಯೂ ದಿಟ್ಟಿಸಿ ನೋಡಿದಳು. ದೀಪದ ಮಬ್ಬು ಬೆಳಕಿನಲ್ಲಿ ಮನೆಯ ಎರಡು ಮೂಲೆಗಳಲ್ಲಿ ಗೋಡೆ ಜರಿದಿರುವುದೂ ಅವುಗಳ ಮಧ್ಯಭಾಗದಲ್ಲಿ ತೆರೆದ ಕಗ್ಗಪ್ಪು ಕಣ್ಣುಗಳಂತೆ ಇಲಿಯ ಗುದ್ದುಗಳಿರುವುದೂ ಅವಳಿಗೆ ಕಾಣಿಸಿತು–ಅವನ್ನು ಮುಚ್ಚಬೇಕು.

ಚಪ್ಪರಕ್ಕೆ ಲೆಕ್ಕವಿಲ್ಲದಷ್ಟು ಕಂಡಿಗಳು. ಮಳೆ ಆರಂಭವಾದರೆ ಸಹಸ್ರ ಧಾರೆಗಳಾಗಿ ನೀರು ಒಳನುಗ್ಗುವುದು. ನಿಲ್ಲಲಿಕ್ಕೂ ಇಂಬು ಉಳಿಯಲಿಕ್ಕಿಲ್ಲ. ಯಾರಿಗಾದರೂ ಹೇಳಿ ಸರಿಮಾಡಿಸಿಕೊಳ್ಳಬೇಕು.

ಬಾಗಿಲ ಸಂದು ಕೀಲಗಳು ಸಿಥಿಲವಾಗಿವೆ. ಅವು ಮೊದಲು ಭದ್ರವಾಗಬೇಕು. ಹಗಲು ಹೊತ್ತು ಇವೆಲ್ಲ ಹೇಗೆ ತನ್ನ ಗಮನಕ್ಕೆ ಬರಲಿಲ್ಲವೋ ಎಂದೆನಿಸಿತು ಷೋಡಶಿಗೆ. ಅವಳು ಅಧೀರಳಾದಳು. ಎಲ್ಲೆಲ್ಲಿಯೂ ಯಾರು ಯಾರ ಆಸರವೂ ಇಲ್ಲದೆ ಈ ಹಾಳು ಗುಡಿಸಲಲ್ಲಿ – ಇಂದಿನ ಒಂದು ದಿನವನ್ನಲ್ಲ – ದಿನದ ಮೇಲೆ ದಿನದಂತೆ ಆಯುಷ್ಯವನ್ನು ಹೇಗೆ ಕಳೆಯುವುದು?

ಅವಳಿಗೆ ನೆನಪಾಯಿತು: "ಇದೀಗ ಬೀಳ್ಕೊಡುವಾಗ ನಿರ್ಮಲನ ಮಾತಿಗೆ ತಾನು ಉತ್ತರವನ್ನು ಕೊಡದಿದ್ದುದು, ಇನ್ನು ಮೇಲೆ ಅವನ ಭೆಟ್ಟಿ ಬೇಗನೆ ಆಗುವ ಸಂಭವವಿಲ್ಲವೆಂಬುದು, ತಾನು ನಿರಾಧಾರಳೆಂದು ಎನಿಸಿಕೊಳ್ಳಲಾಗದೆಂದು ಅವನು ಭರವಸೆಯಿತ್ತುದು. ಅಲ್ಲಿಗೆ ಹೋದ ಬಳಿಕ ಸಾವಿರ ಕೆಲಸಗಳಲ್ಲಿ ಈ ಮಾತು ಅವನಿಗೆ ಜ್ಞಾಪಕದಲ್ಲಿ ಉಳಿಯಲಿಕ್ಕೂ ಇಲ್ಲ; ಉಳಿದರೂ ಪಶ್ಚಿಮದಲ್ಲಿ ಎಲ್ಲಿಯೋ ದೂರದ ಊರಲ್ಲಿದ್ದು ಅವನು ಯಾವ ಸಹಾಯವನ್ನು ಮಾಡಬಲ್ಲ? ಆ ಸಹಾಯವನ್ನು ತಾನು ಸ್ವೀಕರಿಸುವುದಾದರೂ ಯಾವ ಸಂಬಂಧದಿಂದ?"

ಹೈಮಳ ನೆನಪಾಯಿತವಳಿಗೆ. ಹೊರಡುವಾಗ ಅವಳು ಒಂದು ಶಬ್ದವನ್ನೂ ಮಾತನಾಡಲಿಲ್ಲ. ಆದರೆ ಗಂಡನು ಕರೆಯುತ್ತಲೇ ಅವಳು ಅವನ ಕೈಹಿಡಿದು ಹೊರಟುಹೋದಾಗ, ಗಂಡನ ಪ್ರತಿಯೊಂದು ಮಾತನ್ನೂ ಮೌನವಾಗಿ ಅನುಮೋದಿಸಿದಳೆಂದೇ ಷೋಡಶಿ ಭಾವಿಸಿದಳು. ಗಂಡನು ತಾನಾಡಿದ ಮಾತನ್ನು ಮರೆತರೂ ಮರೆತಾನು, ಆದರೆ ಹೆಂಡತಿ ಆಡದಿದ್ದ ಮಾತನ್ನು ಮರೆಯಲಾರಳು ಎಂದು ಷೋಡಶಿಯ ಮನಸಿಗೆ ಪೂರ್ಣ ಭರವಸೆ.

ಷೋಡಶಿಗೆ ಹೈಮಳ ಪರಿಚಯವು ಬಹಳ ದಿನಗಳದಲ್ಲ. ಅಷ್ಟು ಘನಿಷ್ಠವೂ ಅಲ್ಲ. ಆದರೂ ಬಾಗಿಲಿಕ್ಕಿ ಕಂಬಳಿ ಚೆಲ್ಲಿಕೊಂಡು ಅಡ್ಡಾದೊಡನೆ ಅವಳಿಗೆ ಮತ್ತೆ ಮತ್ತೆ ಹೈಮಳ ನೆನಪೇ ಆಗತೊಡಗಿತು. ಮೊದಲ ದಿನವೇ ತನ್ನ ದುಃಖದ ಅರ್ಧ ಪಾಲನ್ನು ಅವಳು ತೆಗೆದುಕೊಂಡಿದ್ದಳು. ಅವಳೇ ಇವಳಲ್ಲವೆ? ಊರಲ್ಲಿಯ ಎಲ್ಲ ವಿರೋಧಿಶಕ್ತಿಯ ವಿರುದ್ಧವಾಗಿ, ತಂದೆಯ ವಿರುದ್ಧವಾಗಿ, ಸಂಭವತಃ ಇನ್ನೂ ಒಂದು ವ್ಯಕ್ತಿಯ ವಿರುದ್ಧವಾಗಿ ಅವಳು ಗುಪ್ತಕಲಹವನ್ನೇ ಹೂಡಿದ್ದಳು. ಈಗವಳು ಹೊರಟು

ಹೋದಳು. ತನ್ನ ಬೆಂಬಲಕ್ಕೆ ಇನ್ನು ಯಾರೂ ಉಳಿಯಲಿಲ್ಲ. ಪ್ರತಿಕೂಲತೆ ದಿನದಿನಕ್ಕೆ ಹೆಚ್ಚುತ್ತಲೇ ಹೋಗುವುದು; ತನ್ನವರೆಂಬವರು, ಸಮಾಧಾನದ ಒಂದು ಮಾತನ್ನಾಡುವವರು ತನಗೆ ಯಾರೂ ಲಭಿಸಲಾರರು. ವಿರೋಧದ ಝಂಝಾವಾತವು ಎಲ್ಲಿಯವರೆಗೆ ಬೀಸುವುದೆಂಬುದೂ ಅವಳೆಣಿಕೆಗೆ ಸಿಲುಕಲಿಲ್ಲ.

ಹೀಗೆ ಜನರಹಿತವಾದ ಮಿತ್ರಶೂನ್ಯವಾದ ಮನೆಯೊಳಗೆ, ನಾಲ್ಕು ಸಿಟ್ಟುಗಳಿಂದಲೂ ಕವಿದಿರುವ ಕತ್ತಲೆಯಲ್ಲಿ ಷೋಡಶಿ ಒಬ್ಬೊಂಟಿಗಳಾಗಿ ಕುಳಿತುಕೊಂಡು, ನಿಶ್ಚಿತವಾಗಿ ಬರಲಿದ್ದ ಮುಂದಿನ ಸಂಕಟದ ಚಿತ್ರಗಳನ್ನು ಅವಳು ಕಣ್ತುಂಬ ಕಾಣತೊಡಗಿದಳು. ಆದರೆ ಆ ಅತಿಶಯ ಕ್ಲೇಶ ಭಯಗಳನ್ನು ಗೊತ್ತಾಗದ ಹಾಗೆ ಬದಿಗೆ ಸರಿಸಿ, ಅಭಿನವ ಅಪರಿಜ್ಞಾತ ಭಾವನೆಯ ತರಂಗಗಳು ಅವಳ ವಿಕ್ಷುಬ್ಧ ಚಿತ್ತದಲ್ಲಿ ಯಾವಾಗ ಹುಟ್ಟಿತೋ ಅವಳಿಗರಿದು.

ಈವರೆಗೆ ಜೀವನದಲ್ಲಿ ಯಾವ ಘಟನೆ ಹೇಗೆ ಸಂಭವಿಸುತ್ತಿದ್ದಿತೋ ಅವಳು ಅದನ್ನು ಅದೇ ಭಾವನೆಯಿಂದಲೇ ಸ್ವೀಕರಿಸುತ್ತ ಬಂದಿದ್ದಳು. ಅವಳು ಚಂಡಿಯ ಭೈರವಿ. ಆ ಪದವಿಯಲ್ಲಿ ಒಂದು ಹೊಣೆಯಿದ್ದಿತು, ಕರ್ತವ್ಯವಿದ್ದಿತು, ಸಂಪತ್ತಿದ್ದಿತು, ವಿಪತ್ತಿದ್ದಿತು. ಸ್ಮರಣಾತೀತ ಕಾಲದಿಂದ ಈ ಪದವಿಯಲ್ಲಿದ್ದ ವ್ಯಕ್ತಿಯ ಕಾಲಕೆಳಗಿನ ಹಾದಿ ಒಂದು ಕಡೆ ಪ್ರಶಸ್ತ, ಒಂದು ಕಡೆ ಅಪ್ರಶಸ್ತ. ಕೆಲವು ಕಡೆ ಸರಳವಾದ ಕಾಲುದಾರಿಯಿದ್ದರೆ, ಒಮ್ಮೊಮ್ಮೆ ಅಡ್ಡಹಾದಿ ಬಿದ್ದುದೂ ಪರಂಪರೆಯ ಇತಿಹಾಸದಲ್ಲಿ ಉಲ್ಲೇಖಿತವಾಗಿದೆ. ಆ ಇತಿಹಾಸದಲ್ಲಿ ಬರೆಯದುಳಿದ ಪುಟಗಳು ದಂತಕಥೆಗಳಾಗಿ ಪ್ರಚುರವಾಗಿವೆ. ಅವುಗಳಲ್ಲಿ ಕೆಲವು ಸದಾಚಾರದ ಪುಣ್ಯಕಥೆಗಳಾದರೆ, ಕೆಲವಕ್ಕೆ ವ್ಯಭಿಚಾರದ ಕಳಂಕದ-ಕಪ್ಪು ಬಳಿದಿವೆ. ಆದರೂ ಭೈರವಿಯ ಜೀವನದ ನಿಶ್ಚಿತ ರೂಪರೇಷೆ ಎಲ್ಲೆಲ್ಲಿಯೂ ಕೊಂಚವೂ ಅಳಿಸಿಲ್ಲ.

ಯಾತ್ರೆಗೆ ಹೊರಟ ಮನುಷ್ಯನು ಸಹಜವಾದ ಅಥವಾ ಸುಗಮವಾದ, ಸಂಕಟದ ಅಥವಾ ಬಿಕ್ಕಟ್ಟಿನ ಅನೇಕ ಸಂದಿಗೊಂದಿಗಳಲ್ಲಿ ಹಾಯಬೇಕಾಗುತ್ತದೆ; ಸುಖದುಃಖಗಳನ್ನೂ ಕಡಿಮೆ ಅನುಭವಿಸಬೇಕಾಗುವುದಿಲ್ಲ.

ಆಧರೆ ಅದೇಕೆ, ಏತಕ್ಕಾಗಿ ಎಂದು ಯಾರೂ ಎಂದೂ ಕೇಳುವುದಿಲ್ಲ, ಆ ಹಾದಿಯನ್ನು ಬಿಟ್ಟು ಬೇರೊಂದನ್ನು ಹುಡುಕಬೇಕೆಂಬ ಪ್ರವೃತ್ತಿಯೂ ಅವರಿಗುಂಟಾಗುವುದಿಲ್ಲ.

ದೈವವಶದಿಂದ ಹಿಡಿದ ಈ ಪರಿಚಿತ ಕಾಲುದಾರಿಯನ್ನು ನಡೆಯುತ್ತಲೇ ಷೋಡಶಿಯ ಇಪ್ಪತ್ತು ವರುಷಗಳ ಬಾಳು ಕಳೆದಿದೆ. ಭೈರವಿಯ ಜೀವನವೆಂದರೆ ಇದೇ ಎಂದು ಅವಳ ಖಂಡಿತ ಅಭಿಪ್ರಾಯವಾಗಿತ್ತು. ತನ್ನ ಜೀವನವೂ ಒಂದು ಸ್ತ್ರೀಜೀವನವೆಂಬ ಕಲ್ಪನೆ ಎಂದೂ ಅವಳ ಮನಸಿನೊಳಗೆ ಉದಿಸಿರಲಿಲ್ಲ. ಹತ್ತಿರದ ದೂರದ ಊರುಗಳ ಅಸಂಖ್ಯ ಜನಸಮೂಹದಲ್ಲಿ ಅವಳು ಚಂಡಿಯ ಸೇವಿಕೆಯೆಂದು ವ್ಯವಹರಿಸುತ್ತಿದ್ದಳು. ಅನೇಕ ಸ್ತ್ರೀಯರನ್ನು ಆಕೆ ನೋಡಿದ್ದಳು—ಕೆಲವರು ಚಿಕ್ಕವರು, ಕೆಲವರು ಹಿರಿಯರು ಕೆಲವರು ಹಿರಿಗೆಯವರು. ಅವರಿಗೆ ಅದೆಷ್ಟು ಬಗೆಯ ಸುಖದುಃಖಗಳು, ಎಷ್ಟು ಬಗೆಯ ಆಶೆ ಆಕಾಂಕ್ಷೆಗಳು, ಎಷ್ಟು ಬಗೆಯಿಂದ ನಿರಾಶೆಗಳು! ಅದ್ವಿತೀಯ ಆಕಾಶಕುಸುಮದ ಕಲ್ಪನೆಯಲ್ಲಿಯ ಎಷ್ಟೋ ಸೀರವ ನಿರ್ವಿಕಾರ ಸ್ತ್ರೀಯರ ಜೀವನಗಳಿಗೆ ಅವಳು ಸಾಕ್ಷಿಯಾಗಿದ್ದಳು; ದೇವಿಯ ದಯೆಯನ್ನು ಕೋರಿ ಎಷ್ಟೋ ಮಂದಿಎಷ್ಟೋ ವಿಷಯಗಳನ್ನು ಅವಳೆದುರಿಗೆ ಬಿಚ್ಚಿ ಹೇಳಿದ್ದರು; ತಮ್ಮ ದುಃಖಮಯ ಜೀವನದ ಕಳ್ಳಮೂಲೆಯಲ್ಲಿಯ ಅಧ್ಯಾಯವನ್ನು ನಿಷ್ಕಪಟವಾಗಿ ಅವಳೆದುರಿಗೆ ತೆರೆದಿಟ್ಟು ದೇವಿಯ ಪ್ರಸಾದವನ್ನು ಬೇಡಿದ್ದರು.

ಇವೆಲ್ಲವನ್ನು ಅವಳು ಕಣ್ಣಾರೆ ಕಂಡಿದ್ದಳು. ಆದರೆ ಸ್ತ್ರೀಹೃದಯದ ಆಳದಿಂದ ಹೊರಹುಮ್ಮುತಲಿದ್ದ, ಆ ಕರುಣಾಸ್ಪದ ಅಭಾವದ ಕಳವಳ ಸ್ವರವು ಅವಳ ಕಿವಿಯ ಒಳಗಡೆ ಪ್ರವೇಶಿಸಿರಲಿಲ್ಲ. ಆ ಘಟನೆಗಳಾಗಲಿ ಪ್ರವೃತ್ತಿಗಳಾಗಲಿ ಅವಳ ಮಟ್ಟಿಗೆ ಬೇರೆ ಯಾವುದೋ ಜಗತ್ತಿನವಾಗಿದ್ದವು. ಅವುಗಳನ್ನು ಅರಿತುಕೊಳ್ಳುವುದು ಅಗತ್ಯವೆಂದೂ ಅವಳಿಗೆ ತೋರಿರಲಿಲ್ಲ. ಆ ಆಗತ್ಯದ ಅರಿವು ಅವಳಿಗೆ ಮೊಟ್ಟಮೊದಲಾದುದು ಈ ಮುರಕ ಮನೆಯಲ್ಲಿ ಕತ್ತಲೆಯಲ್ಲಿ ಬಿದ್ದುಕೊಂಡಾಗ.

ಹಿಂದಿನ ರಾತ್ರಿ ಅವಳು ನಿರ್ಮಲನನ್ನು ಕೈ ಹಿಡಿದು ಕರೆತಂದಿದ್ದಳು. ಅವರಿಬ್ಬರ ಹೊರತು ಈ ಸಂಗತಿ ಯಾರಿಗೂ ತಿಳಿದಿರಲಿಕ್ಕಿಲ್ಲ; ಮತ್ತೆ ಇದೀಗ

ಅವಳು ನೋಡಿದ್ದಾಳೆ – ಮಂದ ದೃಷ್ಟಿಯ ಆ ಮನುಷ್ಯನು ಕರೆಯುತ್ತಲೇ ಹೈಮಳು ಅವನ ಕೈಹಿಡಿದುಕೊಂಡು ನಡೆದಳು. ಇದೂ ನಮ್ಮ ನಾಲ್ಕುಜನರ ಹೊರತು ಇನ್ನೊಬ್ಬರಿಗೆ ಗೊತ್ತಾಗಿರಲಿಕ್ಕಿಲ್ಲ. ಆದರೂ ಒಂದೇ ತೆರನಾಗಿ ಕಾಣುವ ನಿನ್ನಿನ ಮತ್ತು ಇಂದಿನ ಪ್ರಸಂಗಗಳಲ್ಲಿ ಎಷ್ಟೊಂದು ಅಂತರ!

ಹೈಮಳ ಪತ್ತಲದ ಅಂಚು, ಅವಳ ಪಚ್ಚೆಯ ಉಂಗುರ, ಅವಳ ಕಿವಿಯೊಳಗಿನ ಹಸಿರಿನ ಡೂಲು ಮತ್ತೊಮ್ಮೆ ಷೋಡಶಿಯ ಕಣ್ಮುಂದೆ ಹಾಯ್ದವು. ಸರ್ವಪ್ರಕಾರದ ದುರ್ಭೇದ್ಯವಾದ ಆವರಣಗಳನ್ನು, ಅಂಧಕಾರವನ್ನು ಭೇದಿಸಿ ಅವಳ ತೀಕ್ಷ್ಣದೃಷ್ಟಿ, ಆ ದೃಷ್ಟಿಯ ಆಚೆಗಿದ್ದ ಆ ಸ್ತ್ರೀಯ ಪ್ರತಿಯೊಂದು ಕಾಲು ಹಾದಿಯನ್ನು ಅನುಸರಿಸಿ ಹೋಯಿತು. ಗಂಡನ ಕೈಯನ್ನು ಬಿಟ್ಟು ಸರಕ್ಕನೆ ಕಳ್ಳ ಹೆಜ್ಜೆಯಿಂದ ಅವಳು ಮನೆಯೊಳಗೆ ಹೊಕ್ಕಿದ್ದಾಳು; ಚಿಂತೆಯಿಂದ ವ್ಯಾಕುಲರಾದ ತಂದೆತಾಯಿಗಳ ಸಾವಿರ ದೋಷಾರೋಪಗಳನ್ನು ಮೌನದಿಂದ ತಾಳಿಕೊಂಡು, ಮೋರೆ ಬಗ್ಗಿಸಿಕೊಂಡು ತನ್ನ ಕೋಣೆಯೊಳಗೆ ಓಡಿದ್ದಾಳು; ಅಲ್ಲಿ ಒಂದುವೇಳೆ, ಅವಳ ಮಲಗಿದ್ದ ಮಗು ಎಚ್ಚತ್ತು ಅಳುತ್ತಿದ್ದೀತು; ಅದನ್ನು ಸಮಾಧಾನ ಪಡಿಸಿ ಪ್ರಯತ್ನಪಟ್ಟು ಪುನಃ ಮಲಗಿಸುತ್ತಿದ್ದಾಳು. ಇಷ್ಟೇ ಸರಿಯೆ? ಇನ್ನೂ ಎಷ್ಟೋ ಕೆಲಸ ಬೊಗಸೆ ಉಳಿದಿರಬಹುದು – ಗಂಡನ ಊಟ ಸರಿಯಾಗಿ ಆಯಿತೇ ಇಲ್ಲವೆ? ಅದರಲ್ಲಿ ಕುಂದುಕೊರತೆ ಆಗಿರಲಿಕ್ಕಿಲ್ಲ ತಾನೆ? ಮಗುವನ್ನೆಬ್ಬಿಸಿ ನೊಲೆಗೊಡಬೇಕು, ಹಸಿದುದನ್ನು ಹಾಗೇ ಬಿಡುವುದೆ? ತನ್ನ ಊಟವನ್ನು ಅಂತೂ ಇಂತೂ ಪೂರಯಿಸಿ ಮಲಗಿದ್ದಾಳು; ಮತ್ತೆ ದೊಡ್ಡ ನಸುಕಿನಲ್ಲೆದ್ದು ಊರಿಗೆ ಹೊರಡುವ ಏರ್ಪಾಡು ಮಾಡಬೇಕು. ಅದಕ್ಕಾಗಿ ಗಡಿಬಿಡಿ ಎಷ್ಟು! ಅದೆಷ್ಟು ಒಡವೆಗಳನ್ನು ಕಲೆಹಾಕಿ ಕಟ್ಟಡಬೇಕು! ಒಬ್ಬಳೇ ಅಲ್ಲ, ಗಂಡ ಮಗ ಆಳುಹೋಳುಗಳನ್ನು ಕರೆದುಕೊಂಡು ಹೋಗುವ ಏರ್ಪಾಡಾಗಬೇಕು! ಇಷ್ಟು ದೂರದ ಪ್ರಯಾಣ, ಹಾದಿಯಲ್ಲಿ ಏನೇನು ಬೇಕಾಗುವುದೆಂಬುದನ್ನು ಯೋಚಿಸಿ ಎಲ್ಲವನ್ನು ಸೌರಿಸಿಕೊಳ್ಳಬೇಕು!

ಎರಡನೆಯವರ ಜೀವನದೊಂದಿಗೆ ತನ್ನ ಜೀವನವನ್ನು ತುಲನೆ ಮಾಡಿ ಷೋಡಶಿ ಇದುವರೆಗೂ ನೋಡಿರಲಿಲ್ಲ; ತುಲನೆ ಮಾಡಬೇಕೆಂದು ಅವಳಿಗೆ ನಿಸಿರಲೂ ಇಲ್ಲ. ಆದರೂ ಗೃಹಿಣಿಯ ಎಲ್ಲ ಬಗೆಯ ಹೊಣೆಗಾರಿಕೆ,

ತಾಯಿಯ ಕರ್ತವ್ಯ. ನಾನಾ ತೆರದ ಚಿಂತೆ ಯೋಚನೆಗಳನ್ನು ಯಾರೋ ಒಳ್ಳೆಯ ಕೌಶಲದಿಂದ ಅವಳಂತರಂಗದಲ್ಲಿ ರಚಿಸಿಟ್ಟಿದ್ದರೇನೋ. ಅಂತೆಯೇ ಯಾವುದೂ ಗೊತ್ತಿಲ್ಲದೆ ಅವಳಿಗೆಲ್ಲವೂ ತಿಳಿಯಿತು. ಎಲ್ಲಿಯೂ ಕಲಿತಿಲ್ಲವಾದರೂ ಹೈಮವತಿ ಮಾಡುತ್ತಿರುವ ಕೆಲಸಗಳನ್ನೆಲ್ಲ ತಾನೂ ಮಾಡಬಲ್ಲೆನೆಂದು ಅವಳಿಗೆನಿಸಿತು.

ಕಟ್ಟೆಗೆಯ ತುಂಡಿನ ಮೇಲಿಟ್ಟಿದ್ದ ಹಣತೆಯ ದೀಪವು ಮಿಣಿಮಿಣಿಯಾಗಿತ್ತು. ಅವಳು ಸಹಜವಾಗಿಯೆ ಹೋಗಿ ಅದನ್ನು ಚಾಚಿದಳು. ಅವಳ ತನ್ಮಯತೆ ಭಗ್ನ ವಾಯಿತು. ತಾನು ಭೈರವಿ ಎಂಬುದು ಅವಳಿಗೆ ನೆನಪಾಯಿತು. ಆ ಭಾಗದಲ್ಲಿ ಅವಳಷ್ಟು ಸನ್ಮಾನನೀಯ ವ್ಯಕ್ತಿ, ಅಧಿಕಾರೀ ವ್ಯಕ್ತಿ ಯಾರೂ ಇಲ್ಲ. ಸಾಮಾನ್ಯ ಸ್ತ್ರೀಯೊಬ್ಬಳ ಸಾಧಾರಣ ಗೃಹ ಕೃತ್ಯದ ಕ್ಷುದ್ರ ಕಲ್ಪನೆಯಲ್ಲಿ ತನ್ನ ಮನಸು ವಿಕಲವಾದುದಕ್ಕಾಗಿ ಅವಳಿಗೆ ಅತ್ಯಂತ ನಾಚಿಕೆಯೆನಿಸಿತು.

ಆ ಹೊತ್ತಿನಲ್ಲಿ ಮನೆಯೊಳಗೆ ಅನ್ಯರು ಯಾರೂ ಇರಲಿಲ್ಲ. ಅವಳ ಮನಸಿನಲ್ಲಿ ಜಾಗೃತವಾದ ಕ್ಷಣಿಕ ದೌರ್ಬಲ್ಯವು ಯಾರಿಗೂ ತಿಳಿಯುವಂತಿರಲಿಲ್ಲ. ಅವಳು ದೇವಿಯನ್ನುದ್ದೇಶಿಸಿ ಕೈಜೋಡಿಸಿ, ತಲೆವಾಗಿ ನಮಸ್ಕರಿಸಿ ನುಡಿದಳು: 'ತಾಯಿ, ನಿಷ್ಫಲ ವಿಚಾರದಲ್ಲಿ ವ್ಯರ್ಥಹೊತ್ತುಗಳೆದೆ, ಕ್ಷಮಿಸು.'

ರಾತ್ರಿ ಎಷ್ಟಾಯಿತೆಂಬುದನ್ನು ತಿಳಿಯಲು ಅಲ್ಲಿ ಸಾಧನವಿರಲಿಲ್ಲ. ಖಂಡಿತ ಬಹಳ ರಾತ್ರಿಯಾಗಿರಬೇಕು. ಹಾಸುಗೆಯನ್ನು ಇನ್ನಷ್ಟು ಬಿಚ್ಚಿ ಹಾಸಿ, ಹಣತೆಗೆ ಮತ್ತೆ ತುಸ ಎಣ್ಣೆಹಾಕಿ ಪೋಪಸಿ ಅಡ್ಡಾದಳು. ಕಣ್ಣು ಮುಚ್ಚಿದೊಡನೆಯೆ ಅವಳಿಗೆ ತಡವಿಲ್ಲದೆ ನಿದ್ದೆ ಬರಬಹುದಿತ್ತು. ಹೊರಗೆ ಯಾರದೋ ಸದ್ದಾಗಲು ಅವಳು ಚಟ್ಟನೆದ್ದು ಕುಳಿತಳು. ಗಾಳಿಯ ಅಬ್ಬರವೂ ಇತ್ತು; ನಾಯಿನರಿಗಳಿದ್ದರೂ ಇರುವ ಸಂಭವವಿತ್ತು. ಅವಳು ಕ್ಷಣಹೊತ್ತು ಕಿವಿಗೊಟ್ಟು ಆಲಿಸಿ ಅಂಜುತ್ತಂಜುತ್ತ ಕೇಳಿದಳು: "ಯಾರವರು ?"

"ಅಂಜುವ ಕಾರಣವಿಲ್ಲ ತಾಯಿ. ಕುಶಲವಾಗಿ ನಿದ್ದೆ ಮಾಡಿರಿ. ನಾನು ಸಾಗರ."

"ಇಷ್ಟು ರಾತ್ರಿಯಲ್ಲಿ ಏಕೆ ಬಂದೆಯೊ ?"

"ಜಮೀದಾರರು ಬಂದಿದ್ದಾರೆಂದು ಹರಕಕ್ಕ ಹೇಳಿದ. ರಾತ್ರಿಯ ಹೊತ್ತು, ಗಾಳಿ ಮಳೆ ಸುರುವಾಗಿದೆ, ಇಲ್ಲಿ ನೀವೊಬ್ಬರೇ. 'ಹೋಗೊ ಸಾಗರ, ಬಡಿಗೆ ತೆಗೆದುಕೊಂಡು ಹೋಗಿ ಅಲ್ಲಿ ಕೂತುಕೋ' ಎಂದ. ನೀವು ಆರಾಮವಾಗಿ ಮಲಗಿಕೊಳ್ಳಿರಿ ತಾಯಿ. ನಾನು ಬೆಳಗಾಗುವ ತನಕ ಹೋಗುವುದಿಲ್ಲ."

"ಅದೇನೋ ಸರಿ ಸಾಗರ; ಆದರೆ ನೀನೊಬ್ಬನೇ ಏನು ಮಾಡುವವನಪ್ಪ?"

ಸಾಗರನು ನಕ್ಕು ನುಡಿದ: "ಒಬ್ಬನೇ ಏಕೆ? ಕಕ್ಕನನ್ನು ಕೂಗುತ್ತೇನೆ. ಈ ಮಗನ ಕೈಯಲ್ಲಿ ಬಡಿಗೆಯಿದ್ದರೆ ಏನಾದೀತೆಂಬುದು ಎಲ್ಲರಿಗೂ ಗೊತ್ತಿದೆ. ಆವೊತ್ತಿನ ವಿಷಯಕ್ಕೇ ನನಗೆ ನಾಚಿಕೆಯಾಗುತ್ತದೆ. ಆಗ ನೀವು ಅಪ್ಪಣೆ ಕೊಟ್ಟಿದ್ದರೆ. ."

ಈ ಕಕ್ಕ ಮಗ – ಹರಿಹರ ಮತ್ತು ಸಾಗರ – ದರೋಡೆಯ ಆರೋಪದಿಂದ ವರುಷೆರಡು ವರುಷ ಸೆರೆಮನೆಯ ಅತಿಥಿಗಳಾಗಿದ್ದರು. ಸೆರೆಮನೆಯಲ್ಲಿರುವವರೆಗೂ ಅವರು ನೆಮ್ಮದಿಯಾಗಿಯೇ ಇದ್ದರು. ಬಿಟ್ಟು ಬಂದ ಬಳಿಕ ಒಂದು ಕಡೆ ಜಮೀದಾರ, ಒಂದು ಕಡೆ ಪೋಲೀಸರು ಅವರನ್ನು ಪೀಡಿಸತೊಡಗಿದ್ದರು. ಎಲ್ಲಿಯಾದರೂ ಏನಾದರೂ ಗಲಭೆಯೆದ್ದರೆ ಸಾಕು, ಇಬ್ಬರನ್ನೂ ಮತ್ತೆ ಹಿಡಿದು ತೊಂದರೆಗೀಡು ಮಾಡುತ್ತಿದ್ದರು. ಹೆಂಡಿರು ಮಕ್ಕಳೊಡನೆ ಸುಖರೂಪವಾಗಿ ಬಾಳುವೆ ಮಾಡಿಕೊಂಡಿರುವುದು ಅವರಿಗೆ ಕಠಿಣವಾಗಿತ್ತು. ಕಾರಣವಿಲ್ಲದೆ ಆಗುತ್ತಿದ್ದ ಆ ತೊಂದರೆ ಕಾಟಗಳಿಂದ ಅವರನ್ನು ಷೋಡಶಿ ತನಗೆ ಸಾಧ್ಯವಿದ್ದಮಟ್ಟಿಗೆ ರಕ್ಷಿಸಿದ್ದಳು. ಬೀಜಗಾವ ಜಮೀದಾರಿಯ ಸೀಮೆಯಿಂದ ಅವರನ್ನು ಇಲ್ಲಿಗೆ ಕರೆತಂದು ತನ್ನಲ್ಲಿ ಆಶ್ರಯ ಕೊಟ್ಟಿದ್ದಳು. ಒಂದಿಲ್ಲೊಂದು ಉಪಾಯದಿಂದ ಪೋಲಿಸರನ್ನು ಸಮಾಧಾನಗೊಳಿಸಿ ಅವರ ಜೀವನವನ್ನು ಕೆಲಮಟ್ಟಿಗೆ ನಿಷ್ಕಂಟಕವಾಗಿ ಮಾಡಲು ಅವಳು ಪ್ರಯತ್ನಿಸುತ್ತಿದ್ದಳು.

ಅಂದಿನಿಂದ ಕಕ್ಕ ಮಗ ಇಬ್ಬರೂ ಷೋಡಶಿಯ ಭಕ್ತರು. ಹೊತ್ತು ವೇಳೆ ಬಂದಾಗ ಅವರು ಅವಳ ಬೆನ್ನ ಹಿಂದಿರುತ್ತಿದ್ದರು. ಅಸ್ಪೃಶ್ಯರೆಂಬ ಸಂಕೋಚದಿಂದ ದೂರ ದೂರ ಇರುತ್ತಿದ್ದರು ಅಷ್ಟೆ. ಅವರನ್ನು ಹತ್ತಿರ

ಕರೆದು ಸಲಿಗೆ ತೋರಿಸಲು ಷೋಡಶಿಯೂ ಪ್ರಯತ್ನಿಸುತ್ತಿರಲಿಲ್ಲ. ಈ ವರೆಗೆ ಅವಳು ಅವರ ನೆರವನ್ನು ಎಂದೂ ಪಡೆದಿರಲಿಲ್ಲ, ಅಗತ್ಯವೂ ಉಂಟಾಗಿರಲಿಲ್ಲ. ಈ ನಿರ್ಜನ ರಾತ್ರಿಯ ಸಮಯದಲ್ಲಿ ಸಂದೇಹ ಸಂಕಟಗಳು ಮುತ್ತಿರುವಾಗ, ಸದಿಲ್ಲದೆ ಕೇವಲ ಸ್ನೇಹದಿಂದ ಅವರು ಸೇವೆಗೆ ಧಾವಿಸಿ ಬಂದುದನ್ನು ಕಂಡು ಷೋಡಶಿಯ ಕಣ್ಣುಗಳಲ್ಲಿ ನೀರೂರಿತು.

"ಏನೋ ಸಾಗರ, ನಿಮ್ಮ ಮಂದಿಯೊಳಗೆ ಕೂಡ ನನ್ನ ವಿಷಯ ಆಡಿಕೊಳ್ಳುತ್ತಾರೆ, ಅಲ್ಲವೆ? ಏನೆನ್ನುತ್ತಾರೆ ಅವರು?" ಕಣ್ಣೊರಸಿಕೊಂಡು ಅವಳು ಕೇಳಿದಳು.

ಸಾಗರನು ತುಚ್ಛ ಭಾವನೆಯಿಂದ ಉತ್ತರವಿತ್ತ: "ಛಲೆ! ನನ್ನ್ನಿವರಿಗೇ? ಎರಡು ಹೊತ್ತಿಗೆ ದಿಕ್ಕೆಟ್ಟು ಓಡಬೇಕಾದೀತು,-- ಗೊತ್ತಿಲ್ಲವೇ ಅವರಿಗೆ?"

ಷೋಡಶಿಗೆ ನಾಚಿಕೆಯಾಯಿತು. ಇಂತಹ ಪ್ರಶ್ನೆಯನ್ನು ಅವನೆದುರು ಎತ್ತಬಾರದಿತ್ತೆಂದು ಅವಳಿಗೆನಿಸಿತು. ಅವಳು ಮುಂದೆ ಮಾತನಾಡಲಿಲ್ಲ. ಆದರೆ ನಿದ್ದೆಯೊಂದು ಬರಬೇಕಲ್ಲ. ಕೆಲಹೊತ್ತು ಸುಮ್ಮನಿದ್ದು ಅವಳು ಮತ್ತೆ ಮಾತನಾಡಲಾರಂಭಿಸಿದಳು.

"ಮಳೆ ಬಂದರೆ ನಿನಗೆ ತ್ರಾಸವಾದೀತು, ಸಾಗರ. ಇಲ್ಲಿ ನಿಂತುಕೊಳ್ಳಲಿಕ್ಕೂ ಇಂಬಿಲ್ಲ."

"ಇಲ್ಲದಿದ್ದರಿಲ್ಲ. ಇನ್ನು ರಾತ್ರಿ ಬಹಳ ಉಳಿದಿಲ್ಲ. ಒಂದೆರಡು ಪ್ರಹರ ತೋಯಿಸಿಕೊಂಡರೂ ನನಗೇನು ಧಾಡಿಯೂ ಆಗುವುದಿಲ್ಲ."

ವಾಸ್ತವವಾಗಿಯೂ ಅವನಿಗೆ ತೋಯಿಸಿಕೊಳ್ಳದೆ ಬೇರೆ ಉಪಾಯವಿರಲಿಲ್ಲವೆಂದು, ಕೆಲಹೊತ್ತು ಸುಮ್ಮನಿದ್ದು ಷೋಡಶಿ ಬೇರೆ ಮಾತನ್ನೆತ್ತಿದಳು: "ಆ ದಿವಸ ಜಮಿನಾದಾರರ ಜನ ನನ್ನನ್ನು ಬಲಾತ್ಕಾರದಿಂದ ಹಿಡಿದುಕೊಂಡು ಹೋದರೆಂದು ನಿಜವಾಗಿಯೂ ಎನಿಸುತ್ತದೇನು ನಿಮಗೆ?"

ಸಾಗರನು ಅನುತಪ್ತ ಸ್ವರದಿಂದ ಹೇಳಿದ; "ಏನು ಮಾಡಬೇಕು ಅಮ್ಮಾ, ನೀವಾದಿರಿ ಒಬ್ಬರೇ, ಹೆಣ್ಣುಮಕ್ಕಳು. ಈ ಭಾಗದಲ್ಲಿ ಮನುಷ್ಯರೆಂಬವರು ಯಾರೂ ಇಲ್ಲ. ನಾವು ಕಕ್ಕ ಮಗ ಇಬ್ಬರೂ ಆಗ ಪೇಟೆಗೆ

ಹೋಗಿದ್ದೆವು. ಇಲ್ಲದಿದ್ದರೆ ಅವರಿಗೆ ನಿಮ್ಮ ಮೇಲೆ ಕೈಮಾಡಲು ಧೈರ್ಯ ವಾಗುತ್ತಿತ್ತೆ ?"

ಈ ವಿಷಯವನ್ನು ತೆಗೆದದ್ದೂ ಸರಿಯಾಗಲಿಲ್ಲವೆಂದು ಷೋಡಶಿ ಗೆನಿಸಿತು. ಮಾತಾಡುತ್ತಾಡುತ್ತ ಅವನ ಬಾಯಿಂದ ಏನು ಕೇಳಿಕೊಳ್ಳ ಬೇಕಾಗುವುದೋ ಯಾರಿಗೆ ಗೊತ್ತು? ಆದರೆ ಸುಮ್ಮನಿರುವುದು ಶಕ್ಯ ವಿರಲಿಲ್ಲ. ಅವಳೆಂದಳು: "ಇಂಥವರು ನೀವಾದರೂ ಎಷ್ಟು ಜನರಿದ್ದೀರಿ? ನೀವಿಬ್ಬರೇ. ಅವರನ್ನು ಹೇಗೆ ತಡೆಯುತ್ತಿದ್ದಿರಿ ?"

ಹೊರಗಿನಿಂದ ಸಾಗರನ ಅಸ್ಪಷ್ಟ ಹುಂಕಾರವು ಕೇಳಿಸಿತು. ಅವನೆಂದ "ಸುಮ್ಮನೆ ಮನಸಿನ ದುಃಖವನ್ನು ಹೆಚ್ಚಿಸಿಕೊಂಡರೆ ಏನಾಗುವುದು ತಾಯಿ? ಧನಿಯರೂ ಬಂದಿದ್ದಾರೆ -- ನಮಗೂ ಎಲ್ಲ ಗೊತ್ತಿದೆ. ದೇವರ ದಯೆಯಿಂದ ಪುನಃ ಪ್ರಸಂಗ ಬಂದರೆ ಇದಕ್ಕೆ ಉತ್ತರಕೊಡುತ್ತೇವೆ. ಹರ ಕಕ್ಕ ಮುದುಕನಾದ ಮಾತ್ರಕ್ಕೆ ಸತ್ತಿರುವನೆಂದು ತಿಳಿಯಬೇಡಿರಿ. ಅವ ನನ್ನು ಮಾತುಭೈರವಿ ಬಲ್ಲಳು, ಶಿರೋಮಣಿ ಠಾಕುರರು ಬಲ್ಲರು. ಜಮೀ ದಾರರ ಕಡೆ ಆಳುಗಳು ಪೇದೆಗಳು ತುಂಬ ಇದ್ದಾರೆ, ನಮಗೆ ಗೊತ್ತಿದೆ. ನಾವು ಬಡವರು, ಆದ್ದರಿಂದ ಅವರು ನಮ್ಮನ್ನು ಕಡಿಮೆ ಕಾಡುವುದಿಲ್ಲ, -- ಇದನ್ನೂ ಬಲ್ಲೆವು. ಎಷ್ಟೆಂದರೂ ನಾವು ಕೀಳು ಜನ, ಸಮ್ಮ ಚಿಂತೆ ನಮ ಗಿಲ್ಲ. ನೀವೊಮ್ಮೆ ಅಪ್ಪಣೆ ಕೊಟ್ಟು ನೋಡಿರಿ ಅವ್ವಾ, ಭೈರವಿಯ ಮೈಗೆ ಕೈ ಹಚ್ಚಿದ್ದಕ್ಕೆ ಏನು ಫಲ ಸಿಕ್ಕುವುದೋ! ರಾತ್ರಿಯೇ ಧನಿಯರ ಕೊರಳಿಗೆ ಹಗ್ಗ ಹಚ್ಚಿ ಎಳೆದುಕೊಂಡು ಒಂದು ದೇವಿಯ ಮುಂದೆ ಹೇಗೆ ಬಲಿ ಕೊಡುತ್ತೇನೋ ನೋಡಿರಿ. ಯಾರೂ ಅಡ್ಡ ಬರಲಾರರು ಅದ ರೊಳಗೆ!"

ಷೋಡಶಿ ಒಳಗೊಳಗೆ ರೋಮಾಂಚಿಕೆಯಾದಳು. ಅವಳೆಂದಳು: "ಇದೇನು ಎನುತ್ತಿದ್ದೀ ಸಾಗರ! ನೀವಿಷ್ಟು ನಿರ್ದಯರೆ? ಇಂಥ ಭಯಂಕರ ಕೆಲಸವನ್ನು ಮಾಡಬೇಕೆಂದು ನಿಮಗೆನಿಸುತ್ತದೇನು? ಸಣ್ಣ ಮಾತಿಗಾಗಿ ಮನುಷ್ಯರ ಕೊಲೆ ಮಾಡಲು ನಿಮ್ಮ ಮನಸಾಗುವುದೇ ?"

"ಸಣ್ಣ ಮಾತು ಹೇಗೆ? ಅದಕ್ಕಾಗಿಯೇ ನಿಮ್ಮ ಪಾಡು ಹೀಗಾಯಿ ತಲ್ಲವೆ? ಜಮೀದಾರರು ಬಂದದ್ದು ತಿಳಿದಾಗಿನಿಂದಲೂ ಕಕ್ಕನು ಬುಸು

ಗುಟ್ಟುತ್ತಿದ್ದಾನೆ. ನೀವೇನೂ ಚಿಂತೆ ಮಾಡಬೇಡಿರಿ ಅವ್ವಾ. ಮತ್ತೇನಾದರೂ ಒಂದೇ ಆಗಲಿ, ಅಲ್ಲಿಗೇ ಮುಗಿಯುವುದು ಎಲ್ಲ ಕಾರಬಾರ!"

"ಏನೋ ಸಾಗರ ನೀನೆಂದಾದರೂ ಪಂಡಿತರ ಶಾಲೆಯೊಳಗೆ ಕಲಿತಿರುವೆಯಾ ?"

ಹೊರಗೆ ಕುಳಿತಿದ್ದ ಸಾಗರನು ನಾಚಿಕೊಂಡಂತೆ ತೋರಿತು. ಅವನೆಂದ: "ನಿಮ್ಮ ಆಶೀರ್ವಾದದಿಂದ ಭಾರತ ರಾಮಾಯಣಗಳ ಹಾಳೆ ತಿರುವಿ ಹಾಕಲು ಬರುತ್ತದೆ. ಇದೇತಕ್ಕೆ ಬೇಕಾಗಿತ್ತು ತಾಯಿ ?"

"ನಿನ್ನ ಮಾತು ಕೇಳುತ್ತಿರಲಾಗಿ, ನಿಮ್ಮ ಕಕ್ಕನಿಗೆ ತಿಳಿಯದಿದ್ದರೂ, ನೀನು ತಿಳಿವಳಿಕೆ ಉಳ್ಳವನೆಂದು ನನಗೆನಿಸಿತು. ಕೇಳು ಸಾಗರ, ಆ ದಿವಸ ಯಾರೂ ನನ್ನನ್ನು ಒಡಿದುಕೊಂಡು ಹೋಗಲು ಬಂದಿರಲಿಲ್ಲ. ನನ್ನ ಮೈಮೇಲೆ ಯಾರೂ ಕೈ ಹಾಕಿರಲಿಲ್ಲ, ಸಿಟ್ಟಿನ ಭರದಲ್ಲಿ ನಾನೇ ಅಲ್ಲಿಗೆ ಹೋದೆ."

"ಅದನ್ನು ನಾವೂ ಕೇಳಿದ್ದೇವೆ. ಆದರೆ ಇಡೀ ರಾತ್ರಿ ತಿರುಗಿ ಬರಲೇ ಇಲ್ಲ, ಅದೂ ಸಿಟ್ಟಿನಿಂದಲೇ ಏನು ?"

ಇದಕ್ಕೆ ನೇರವಾಗಿ ಉತ್ತರಕೊಡುವ ಷೋಡಶಿಯೆಂದಳು: "ಎಂದರೆ ಅಷ್ಟಕ್ಕೇ ನೀವು ಇಷ್ಟು ಸಿಟ್ಟಿಗೆದ್ದಿದ್ದೀರೇನು? ಆ ಪ್ರಸಂಗ ನಾನೇ ತಂದುಕೊಂಡೆ. ಈಪೊತ್ತು ಕೂಡ ಸ್ವಸಂತೋಷದಿಂದಲೇ ಅಪ್ಪನಿಗೆ ಮನೆಯನ್ನೊಪ್ಪಿಸಿ ನಾನು ಇಲ್ಲಿಗೆ ಬಂದಿದ್ದೇನೆ....."

"ಆದರೆ ಈವರೆಗೆ ಎಂದೂ ನಿಮಗೆ ಈ ರೀತಿ ಎನಿಸಿರಲಿಲ್ಲವಲ್ಲ, ಅವ್ವಾ?–" ಎಂದು ಸಾಗರನು ಕೊಂಚಹೊತ್ತು ಸುಮ್ಮನಾದ, ಅವನ ದನಿಯೇರಿ ಉಗ್ರವಾಯಿತು. ಅವನೆಂದ: "ತಾರದಾನ ಭಟ್ಟರ ಮೇಲೆ ನಮ್ಮ ಸಿಟ್ಟಿಲ್ಲ. ರಾಯಮಹಾಶಯರಿಗೂ ನಾವು ಹೆಸರಿಡುವುದಿಲ್ಲ. ಆದರೆ ಹೊತ್ತು ಬಂದರೆ ಜಮಾದಾರರನ್ನು ಸಹಜವಾಗಿ ಬಿಡುವವರಲ್ಲ. ಗೊತ್ತಿದೆಯೇ ಅವ್ವ, ನಮ್ಮ ವಿಪಿನನಿಗೆ ಅವರು ಮಾಡಿದ್ದು ? ಅವನು ಮನೆಯಲ್ಲಿ ಇದ್ದಿಲ್ಲ, ಅವರ ಆಳುಗಳು ಒಳಗೆ ಹೊಕ್ಕು........"

ಅವನನ್ನು ನಡುವೆಯೇ ತಡೆದು ಷೋಡಶಿಯೆಂದಳು: "ಅದಿರಲಿ ಸಾಗರ, ಅದನ್ನು ಹೇಳಬೇಡ ನನಗೆ"

ಸಾಗರನು ಸುಮ್ಮನೆ ಕುಳಿತ. ಎಷ್ಟೋ ಹೊತ್ತು ಷೋಡಶಿಯೂ ಮಾತನಾಡಲಿಲ್ಲ. ಕೊನೆಗೆ ಸಾಗರನು ಮತ್ತೆ ಮಾತನಾಡತೊಡಗಿದಾಗ ಅವನ ಸ್ವರದಲ್ಲಿ ಅಡಗಿದ್ದ ಆಶ್ಚರ್ಯವು ಅವಳಿಗೆ ನಿಚ್ಚಳವಾಗಿ ಗೋಚರಿಸಿತು.

"ಅವ್ವಾ, ನಾವು ನಿಮ್ಮ ಕುಳ, ನಮ್ಮ ಸುಖ ದುಃಖಗಳನ್ನು ನಿಮ್ಮ ಹೊರತು ಯಾರು ಕೇಳುವವರು?" ಎಂದ ಸಾಗರ.

"ಕೇಳಿದರೆ ಆಗುವುದೇನು? ಇಷ್ಟು ದೊಡ್ಡ ಜಮೀದಾರರ ವಿರುದ್ಧ ನನ್ನಿಂದೇನು ಮಾಡಲಿಕ್ಕಾದೀತಪ್ಪ?"

"ಒಮ್ಮೆ ಮಾಡಿದ್ದೀರಿ. ಮತ್ತೆ ಸಮಯ ಬಂದರೆ ನೀವೊಬ್ಬರೇ ಏನಾದರೂ ಮಾಡಬಲ್ಲಿರಿ. ನೀವು ನಮ್ಮ ಬೆನ್ನು ಕಟ್ಟದಿದ್ದರೆ ನಮ್ಮನ್ನು ಕಾಯುವವರು ಯಾರೂ ಇಲ್ಲ, ಅವ್ವ"

"ಹೊಸ ಭೈರವಿ ಯಾವಳಾದರೂ ಬರುತ್ತಾಳಲ್ಲ. ಅವಳ ಮುಂದೆ ತೋಡಿಕೊಳ್ಳಿರಿ ನಿಮ್ಮ ದೂರು."

"ಎಂದರೇನು ನಿಜವಾಗಿಯೂ ನೀವು ನಮ್ಮನ್ನು ಬಿಟ್ಟು ಹೋಗುವಿರೇನು? ಊರ ತುಂಬ ಜನರೆನ್ನುತ್ತಾರೆ --" ಎಂದು ಸಾಗರನು ತಟ್ಟನೆ ಸುಮ್ಮನಾದ. ಆದರೂ ಷೋಡಶಿಗೆ ತತ್ಕಾಲದಲ್ಲಿ ಉತ್ತರ ಕೊಡುವುದಾಗಲಿಲ್ಲ.

ಕೆಲಹೊತ್ತು ನೀರವವಾಗಿದ್ದು ಸಾವಧಾನವಾಗಿ ಅವಳೆಂದಳು: "ಇಲ್ಲಿ ನೋಡು ಸಾಗರ ನಿಮ್ಮ ಮುಂದೆ ಈ ವಿಷಯ ಮಾತನಾಡಲಿಕ್ಕೆ ಸಂಕೋಚವಾಗುತ್ತಿದೆ. ನನ್ನ ಬಗ್ಗೆ ಏನೇನು ಆಡಿಕೊಳುತ್ತಿದ್ದಾರೆ, ನೀನು ಕೇಳಿದ್ದೀಯಲ್ಲವೆ? ಊರಿನ ಮಿಕ್ಕ ಹತ್ತು ಜನರ ಹಾಗೆ - ನನಗೆನಿಸುತ್ತದೆ - ನೀವೂ ನಂಬುತ್ತಿರಬಹುದು ಅದನ್ನು. ಇನ್ನು ಮೇಲೆಯೂ ನಾನು ದೇವಿಯ ಭೈರವಿಯಾಗಿರಬೇಕೆನ್ನುವೆಯಾ?"

"ಎಷ್ಟೆಷ್ಟೋ ಕೇಳಿದ್ದೇನೆ ಅವ್ವ. ಮಿಕ್ಕ ಹತ್ತು ಜನರಂತೆ ನಮಗೂ, ನೀವು ಆ ರಾತ್ರಿ ಮನೆಗೇಕೆ ತಿರುಗಿ ಬರಲಿಲ್ಲ? ಮುಂಜಾನೆ ಸಾಹೇಬರ ದವಡೆಯಿಂದ ಧನಿಯರನ್ನೇಕೆ ಉಳಿಸಿದಿರಿ? ಎಂಬುದೇ ತಿಳಿಯಲೊಲ್ಲದು. ಅದೇನೇ ಇರಲೊಲ್ಲದೇಕೆ ಅವ್ವ, ನಾವು - ಕೀಳು ಜಾತಿಯ ನಾಲ್ಕು ಮನೆಗಳ ಜನ - ನಿಮ್ಮನ್ನು ತಾಯಿಯೆಂದೇ ತಿಳಿದಿರುವೆವು. ನೀವು ಹೋದಲ್ಲಿ

ನಾವೂ ಸಂಗಡ ಬರುವವರು. ಹೋಗುವ ಮುಂಚೆ ನಮಗೆ ಸ್ವಲ್ಪ ತಿಳಿಸಿರಷ್ಟೆ."

"ಆದರೆ ನೀವು ನನ್ನ ಕುಳಗಳಲ್ಲ ಚಂಡೀದೇವಿಯ ಕುಳ. ನನ್ನಂಥ ಭೈರವಿಯರು ಎಷ್ಟೋ ಜನ ಆಗಿ ಹೋದರು, ಮುಂದೆಷ್ಟೋ ಜನ ಬರುತ್ತಾರೆ. ಇಷ್ಟಕ್ಕೆ ನೀವು ಮನೆಮಾರು ತೊರೆದು ಹೋಗಬೇಕೆ ? ಸುಮ್ಮನೆ ಜಗಳ ಅದು ನನಗೆ ಸೇರುವುದಿಲ್ಲವೆಂಬುದು ನಿಮಗೆ ಗೊತ್ತಿಲ್ಲವೆ ?"

"ಸೇರುವುದಿಲ್ಲವೆ ?"

"ಇದರಲ್ಲೇನು ಆಶ್ಚರ್ಯವೋ ಸಾಗರ ? ಮನುಷ್ಯನ ಮನಸು ಬದಲಾಗುವುದಿಲ್ಲವೆ ?"

ಉತ್ತರ ರೂಪವಾಗಿ ಒಮ್ಮೆ ಹುಂಕರಿಸಿ ಸಾಗರನು ಕೊಂಚಹೊತ್ತು ಮೌನದಿಂದಿದ್ದು ಬಳಿಕ ನುಡಿದ : "ಇನ್ನು ರಾತ್ರಿ ಸ್ವಲ್ಪ ಉಳಿದಿದೆ ಅವ್ವಾ. ಮೋಡವೂ ಹರಿಯುತ್ತಾ ಬಂದಿದೆ. ಕೊಂಚ ನಿದ್ದೆ ಮಾಡಿರಿ."

ಇದೆಲ್ಲವನ್ನೂ ಚರ್ಚಿಸುವುದು ಷೋಡಶಿಗೆ ಸಮಂಜಸವಾಗಿ ತೋರುತ್ತಿರಲಿಲ್ಲ. ಆದರಿಂದ ಅವಳಿಗೊಂದು ಬಗೆಯ ದಣಿವುಂಟಾಗಿತ್ತು. ಸಾಗರನು ಹಾಗೆ ಹೇಳಿದ ಬಳಿಕ ಅವಳು ಸುಮ್ಮನೆ ಕಣ್ಮುಚ್ಚಿಕೊಂಡು ಮಲಗಿದಳು.

ಕಣ್ಣು ಮುಚ್ಚಿದರೂ ನಿದ್ದೆ ಹತ್ತುವವರೆಗೂ ಒಂದು ವಿಷಯ ಅವಳ ಮನಸಿನಲ್ಲಿ ಒಂದೇ ಸಮನೆ ಕಟೆಯುತ್ತಿತ್ತು– ನಿದ್ದೆಯನ್ನು ತೊಡೆದಟ್ಟಿ ತನ್ನ ಕಾವಲಿಗೆ ಕುಳಿತಿದ್ದ ಮನುಷ್ಯನನ್ನು ಅವಳು ಚಿಕ್ಕಂದಿನಿಂದಲೂ ನೋಡುತ್ತ ಬಂದಿದ್ದಳು. ಅಸ್ಪೃಶ್ಯನಲ್ಲವೆ ? ಆ ವರ್ಗಕ್ಕೆ ತಕ್ಕುವಾದ ಕಿರುಕುಳ ಕೆಲಸ ಮಾಡುತ್ತಿದ್ದ. ಮಾನವ ಸ್ಥಾನ ಅವನಿಗೆಂದೂ ಸಿಕ್ಕಿರಲಿಲ್ಲ. ನಡತೆ ನಡಾವಳಿಯೆಂದರೇನೆಂಬ ಕಲ್ಪನೆ ಅವನ ಕನಸಿನಲ್ಲಿಯೂ ಇರಲಿಲ್ಲ. ಈ ಸಂಕಟ ಸಮಯದಲ್ಲಿ ಅವನ ಬಾಯಿಂದ ಹೊರಬಿದ್ದ ಅನೇಕ ಸಂಗತಿಗಳ ಚೆಲೋ ಕೆಟ್ಟಗಳನ್ನು ಲೆಕ್ಕಮಾಡುವ ದಿವಸ ಒರ್ಮಿಲ್ಲೊಮ್ಮೆ ಬಂದೇ ಬರುವುದು. ಆದರೆ ಕೀಳಾಗಿ ಗಣಿಸಲ್ಪಟ್ಟ ಮನುಷ್ಯನ ಲೆಕ್ಕದಲ್ಲಿ ಇದು ಅತಿಶಯ ಕ್ಷುದ್ರವೆಂದು ಎಣಿಸಲ್ಪಡಲಾರದೆಂಬುದು ಖಂಡಿತ.

ಮರುದಿನ ಬೆಳಗ್ಗೆ ಅವಳು ಎಚ್ಚತ್ತಳು. ಬಾಗಿಲು ತೆರೆದು ಹೊರಗೆ

ಬಂದು ನೋಡಿದಳು, ಮುಂಜಾವು ತಿರುಗಿತ್ತು, ಹೊತ್ತು ಬಹಳ ಏರಿತ್ತು. ಸಮೀಪದಲ್ಲಿ ಬಹಳ ಜನ ನೆರೆದಿದ್ದರು. ಏನಾದರೂ ತಮಾಷೆ ನಡೆಯುವು ದೆಂಬ ಅಪೇಕ್ಷೆಯಿಂದ ಅವಳ ಮನೆಯ ಬಾಗಿಲ ಕಡೆಗೇ ನೋಡುತ್ತ ನಿಂತಿದ್ದರು. ಎಲ್ಲಿಯೂ ಮುಚ್ಚುಮರೆ ಇರಲಿಲ್ಲ, ಮರ್ಯಾದೆ ಮುಚ್ಚಿಕೊಳ್ಳಲು ಸ್ಥಳವಿರಲಿಲ್ಲ. ಕೂಡಲೆ ಬಾಗಿಲನ್ನು ಇಟ್ಟುಕೊಳ್ಳದಿದ್ದರೆ ಜನರ ಉತ್ಸುಕ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲವೆಂದು ಅವಳಿಗೆನಿಸಿತು. ಆ ಸಣ್ಣ ಮನೆ ಜೀರ್ಣವಿರಲಿ, ಮುರುಕವಿರಲಿ, ಜಗತ್ತಿನಲ್ಲಿ ಅವಳಿಗೆ ಆತ್ಮ ರಕ್ಷಣೆಯ ಸ್ಥಾನವು ಅದರ ಹೊರತು ಮತ್ತೊಂದಿಲ್ಲ.

ತತ್‌ಕ್ಷಣದಲ್ಲಿಯೇ ಜನಸಂದಣಿಯಲ್ಲಿ ದಾರಿ ಮಾಡಿಕೊಂಡು ಏಕ ಕೌಡಿ ಬಂದು ಅವಳ ಎದುರಿಗೆ ನಿಂತುಕೊಂಡ. "ಊರಿಗೆ ಧನಿಯರ ಸವಾರಿ ಬಂದಿದೆ, ತಮಗೆ ಗೊತ್ತಿದೆಯಲ್ಲವೆ?" ಅತ್ಯಂತ ಗೌರವದಿಂದ ಅವನು ಕೇಳಿದ.

ಜಮೀದಾರರ ಕರಣಿಕ ಏಕಕೌಡಿ ಹಿಂದೆಂದೂ ಅವಳನ್ನು ತಾವು ಎಂದು ಸಂಬೋಧಿಸಿದವನಲ್ಲ. ಅವನ ಆ ವಿನಯವನ್ನು, ಮಾತಿನ ರೀತಿಯ ಪರಿವರ್ತನೆಯನ್ನು ಚೆನ್ನಾಗಿ ಗಮನಿಸಿದಳು. ಅವಳು ಉತ್ತರ ಕೊಡಬೇಕೆಂದಿದ್ದಳು. ಅಷ್ಟರಲ್ಲಿ ಅದೇ ಗೌರವದೊಡನೆ ಏಕಕೌಡಿ ಮತ್ತೆ ಹೇಳಿದ: "ಧನಿಯರು ತಮ್ಮನ್ನು ನೆನಸಿದರು."

"ಎಲ್ಲಿ?"

"ಇಲ್ಲಿಯೇ ಚಾವಡಿಯಲ್ಲಿ. ಮುಂಜಾನೆಯಿಂದ ಅವರು ಪ್ರಜೆಗಳ ಕಷ್ಟಗಳನ್ನು ವಿಚಾರಿಸಲು ಕುಳಿತಿದ್ದಾರೆ. ತಾವು ಹೂಂ ಎಂದರೆ ಪಲ್ಲಕ್ಕಿ ಕಳಿಸುತ್ತೇನೆ."

ಎಲ್ಲ ಜನರು ಆ ಎಂದು ಬಾಯಿಬಿಟ್ಟುಕೊಂಡು ನೋಡುತ್ತಿದ್ದರು. ಈ ಮಾತನ್ನು ಕೇಳಿ ಅವರು ಬರುತ್ತಿದ್ದ ನಗೆಯನ್ನು ಹತ್ತಿಡುತ್ತಿರುವಂತೆ ಅವಳಿಗೆನಿಸಿತು. ಅವಳ ಅಂತರಂಗದಲ್ಲಿ ಕಿಚ್ಚು ಭುಗಿಲ್ಲನೆ ಹೊತ್ತಿತು. ಆತ್ಮಸಂಯಮನ ಮಾಡಿಕೊಂಡು ಅವಳೆಂದಳು: "ಅವರೇ ಹೇಳಿದರೋ, ಏನು ನಿಮ್ಮದೇ ಮುಂಗಾಲ್ಪುಟಿಗೆಯೋ ಏಕಕೌಡಿ?"

"ಹಂ. ನಾನು ಸೇವಕ. ಇದು ಸ್ವಂತ ಧನಿಯರ ಆಜ್ಞೆ.

ಷೋಡಶಿ ನಕ್ಕಳು. "ನಿಮ್ಮ ಧನಿಯರ ಗ್ರಹಚಾರ ಒಳ್ಳೇದು. ಕಾಂತೆಯೇ ಸೆರೆಮನೆಯೊಳಗೆ ಬೀಸುವ ಬದಲು ಪಲ್ಲಕ್ಕಿಯಲ್ಲಿ ಕೂತು ತಿರುಗುತ್ತಿದ್ದಾರೆ. ತಮ್ಮ ಮಟ್ಟಿಗೇ ಅಲ್ಲ, ಎರಡನೆಯವರ ಸಲುವಾಗಿಯೂ ಆ ವ್ಯವಸ್ಥೆ ಮಾಡುತ್ತಿದ್ದಾರೇನೋ! ಅವರಿಗೆ ಹೇಳಿರಿ ಏಕಕೌಡಿ, ಪಲ್ಲಕ್ಕಿಯಲ್ಲಿ ಕೂಡಲು ನನಗೆ ಸಮಯವಿಲ್ಲ. ಕೆಲಸ ಬಹಳ ಇವೆ."

"ಹೀಗೊ? ಈವೊತ್ತು ಸಂಜೆಯ ಮುಂದೆ, ಅಥವಾ ನಾಳೆ ಮುಂಜಾನೆ ಪುರಸತ್ತಾಗಲಿಕ್ಕಿಲ್ಲವೆ?"

"ಇಲ್ಲ."

"ಬಂದಿದ್ದರೆ ನೆಟ್ಟಗಿತ್ತು. ಮಿಕ್ಕ ಹತ್ತು ಜನ ರೈತರು ತಮ್ಮ ಸುಖ ದುಃಖ ಹೇಳಿಕೊಳ್ಳುತ್ತಿರುವರಲ್ಲವೆ?"

ಷೋಡಶಿ ಕಠೋರವಾಗಿ ಉತ್ತರವಿತ್ತಳು: "ನಿಮ್ಮ ಧನಿಯರಿಗೆ ನ್ಯಾಯ ಬುದ್ಧಿ ಇದ್ದಿದ್ದರೆ ತಮ್ಮ ರೈತರಿಗೆ ನ್ಯಾಯದಾನ ಮಾಡಲಿಕ್ಕೆ ಹೇಳಿರಿ. ನಾನೇನೂ ನಿಮ್ಮ ಧನಿಯರ ಪ್ರಜೆ ಅಲ್ಲ. ನನ್ನ ದೂರುಗಳನ್ನು ವಿಚಾರಿಸಲಿಕ್ಕೆ ರಾಜನ ಕೋರ್ಟು ಇದೆ." ಎಂದು ಹೇಳಿದವಳೇ ಕೈಯೊಳಗಿನ ಪಂಜೆಯನ್ನು ಹೆಗಲಮೇಲೆ ಚೆಲ್ಲಿಕೊಂಡು ಲಗುಬಗೆಯಿಂದ ಕೆರೆಯ ಕಡೆ ಹೊರಟಳು.

## ೧೩

ಜಮೀನದಾರನ ಶಾಂತಿಕುಂಜದ ಒಳಭಾಗವನ್ನು ಸರಿಪಡಿಸಲು ಮೂರು ನಾಲ್ಕು ದಿನಗಳು ಕಳೆದವು. ಸ್ವಾಸ್ಥ್ಯಲಾಭಕ್ಕಾಗಿ ಧನಿಯರು ಎರಡು ತಿಂಗಳು ಚಂಡೀಗಡದಲ್ಲಿ ಇರುವರೆಂದು ಸುದ್ದಿ. ಉತ್ತರದ ಕಡೆಯ ದೊಡ್ಡ ಭವನದಲ್ಲಿ ಇಂದು ಮುಂಜಾನೆಯೇ ಸಭೆ ಕೂಡಿತ್ತು. ಕೋಣೆಯ ತುಂಬ ಕಾರ್ಪೆಟ್ ಹಾಸಿತ್ತು, ಅದರ ಮೇಲೆ ಬಿಳಿಯ ಜಾಜಮು ಹಾಸಿತ್ತು. ಆ ಕಡೆ ಈ ಕಡೆ ನಾಲ್ಕಾರು ದೊಡ್ಡ ಒರಗು ದಿಂಬುಗಳನ್ನು ಇಡಲಾಗಿತ್ತು.

ಒಂದು ಕಡೆ ಊರಿನ ಪ್ರತಿಷ್ಠಿತ ಸದ್ಗೃಹಸ್ಥರು ವಿರಾಜಮಾನರಾಗಿದ್ದರು. ಜಮೀನದಾರರ ಕಡೆ ಅವರ ದೂರುಗಳೆಷ್ಟೋ ಇದ್ದವು. ರಾಯ

ಮಹಾಶಯು ಬಂದಿದ್ದ, ಶಿರೋಮಣಿಯಿದ್ದ, ಘೋಷನಿದ್ದ, ಬೋಸನಿದ್ದ; ಇಷ್ಟೇ ಅಲ್ಲ, ತಾರಾದಾಸ ಠಾಕುರನು ಕೂಡ ಅವರ ಮರೆಯಲ್ಲಿ ತಲೆ ತಗ್ಗಿಸಿಕೊಂಡು ಕುಳಿತಿದ್ದ.

ಬಂದಿದ್ದ ಇನ್ನುಳಿದವರೂ ತೀರ ಸಾಮಾನ್ಯರಲ್ಲ. ಅವರೂ ಅವರ ಹೆಸರುಗಳ ಪಟ್ಟಿಯನ್ನು ಕೊಡದಿದ್ದರೆ ಓದುಗರಿಗೆ ಅಷ್ಟೇನೂ ನಷ್ಟವಾಗ ಲಾರವೆಂದು ಅವರನ್ನು ಉಲ್ಲೇಖಿಸುವುದಿಲ್ಲ.

ದೂರುಗಳ ಭೂಮಿಕೆ ಅವರೆಲ್ಲರು ಒಮ್ಮತದಿಂದ ಗೊತ್ತುಮಾಡಿ ಕೊಂಡು ಬಂದುದೇ ಇತ್ತು. ಆದರೂ ಅದೇಕೋ ಏನೋ, ವಿಷಯದ ಆರಂಭವಾಗುತ್ತಾಗುತ್ತಲೆ ಅಲ್ಲಿಂದಲ್ಲಿಯೇ ನಿಲ್ಲುತ್ತಿತ್ತು. ತುದಿ ತುಟಿಗೆ ಬಂದ ಮಾತನ್ನು ಹೊರಗೆ ಹಾಕಲು ಯಾರೂ ಸಿದ್ಧರಾಗುತ್ತಿರಲಿಲ್ಲ.

ಜೀವಾನಂದ ಚೌಧರಿ ಎಲ್ಲರ ಮಧ್ಯದಲ್ಲಿ, ಸ್ವಲ್ಪ ಅಂತರದಲ್ಲಿ ತಕ್ಕೆ ಗಾತು ಕುಳಿತು ಎಲ್ಲವನ್ನೂ ಮನಸುಗೊಟ್ಟು ಕೇಳಿಕೊಳ್ಳುತ್ತಲಿದ್ದ. ಅವನ ಮುಖವು ಪ್ರಫುಲ್ಲವಾಗಿತ್ತು. ಅದು ತೀರ ಸ್ವಾಭಾವಿಕವೆಂದೆನಿಸದಿದ್ದರೂ ತೀರ ಕೃತ್ರಿಮವೆಂದು ಹೇಳುವಂತಿರಲಿಲ್ಲ. ಮದ್ಯದ ಬುರುಗು ಇನ್ನೂ ಅವನ ಮೆದುಳಿನ ಸಂದಿಗೊಂದಿಗಳಲ್ಲಿ ತಳವೂರಿರಲಿಕ್ಕಿಲ್ಲ.

ತೆರೆದ ದೊಡ್ಡ ದೊಡ್ಡ ಕಿಡಿಕಿಗಳಿಂದ ಬಾರುಈ ನದಿಯ ಒಣ ಮಣಲು ತೊಯ್ದು ಮಣ್ಣುಗಳ ವಾಸನೆ ಗಾಳಿಯೊಡನೆ ಒಳಗೆ ಬರುತ್ತಲಿತ್ತು. ಬದಿಯ ಕೋಣೆಯೊಳಗ ಅಡಿಗೆ ನಡೆದಿರಬೇಕು. ಮುಚ್ಚಿದ ಬಾಗಿಲ ಬಿರುಕಿನೊಳಗಿಂದ ಒಂದು ಬಗೆಯ ಸಪ್ಪಳ, ಗಮಗಮ ವಾಸನೆ ನುಗ್ಗಿ ಬಂದು ಆಗಾಗ ಸಭಿಕರ ಕಿವಿಮೂಗುಗಳಿಗ ಎರಗುತ್ತಿದ್ದವು. ನೆರೆದವರಲ್ಲಿ ಅನೇಕರಿಗೆ ಆ ವಾಸನೆ ರುಚಿಕರವೆನಿಸಿದ್ದರೂ ಶಿರೋಮಣಿ ಮಹಾಶಯನು ಮಾತ್ರ ಅಸ್ವಸ್ಥನಾಗಿದ್ದ. ಅವನು ಒಮ್ಮೆಲೆ ಎರಡು ಬಾರಿ ಉಹ್‌ಕರಿಸಿ, ಉಬ್ಬಳಿಸಿ, ಬಟ್ಟೆಯಿಂದ ಗಟ್ಟಿಯಾಗಿ ಮೂಗನ್ನು ಮುಚ್ಚಿಕೊಂಡು, ಖೇಕ ರಿಸಿ ಬದಿಗೆ ಸರಿದು ಕೂಡುತ್ತಲೆ ಜೀವಾನಂದನು ನಕ್ಕು, “ ಶಿರೋಮಣಿ ಮಹಾಶಯರ ಅರ್ಧ ಊಟ ಆಯಿತೆಂದು ಕಾಣುತ್ತದೆ ? ” ಎಂದ.

ಬಹು ಜನರು ಗಟ್ಟಿಯಾಗಿ ನಕ್ಕರು. ಶಿರೋಮಣಿ ಮಹಾಶಯನ ಮೋರೆ ಅವನ ಮೂಗಿನ ತುದಿಯಂತೆಯೇ ಕೆಂಪಾಯಿತು. ಜೀವಾ

ನಂದನು ಮತ್ತೆ ನಕ್ಕು ಹೇಳಿದ: “ ಗಾಬರಿಯಾಗಬೇಡಿರಿ ಠಾಕೂರ, ಜಾತಿ ಯೇನೂ ಹೋಗುವುದಿಲ್ಲ ನಿಮ್ಮದು. ನಿಮ್ಮ ಚಂಡೀದೇವಿಯ ಮಹಾ ಪ್ರಸಾದವದು. ಆದರೆ ಅಡಿಗೆಯವರ ಗೋತ್ರ ಮಾತ್ರ ಸರಿಯಾಗಿ ಗೊತ್ತಿಲ್ಲ – ಒಂದಕ್ಕಿಂತ ಹೆಚ್ಚು ಗೋತ್ರಗಳಿದ್ದರೂ ಇರಬಹುದು. ”

ತಕ್ಕಮಟ್ಟಿಗೆ ಸಾವರಿಸಿಕೊಂಡು ಶಿರೋಮಣಿ ಮಾತನಾಡಿದ: “ ಇರ ಬಹುದು ಇರಬಹುದು. ಬ್ರಾಹ್ಮಣ ಅಡಿಗೆಯವಳಿಂದ ಮೇಲೆ ಬಡವ ಳಾದರೂ ಗೋತ್ರ ಇದ್ದೇ ಇರುತ್ತದೆ. ”

ಜೀವಾನಂದನು ಗಹಗಹಿಸಿ ನಕ್ಕು, “ ಅದೆಲ್ಲ ಗೊಂದಲ ಇದೆಯೋ ಇಲ್ಲವೋ ಹೇಳಲಿಕ್ಕೆ ಬರುವಂತಿಲ್ಲ ಠಾಕೂರ. ಆದರೆ ಕಾಜಿನ ಬಳೆಗಳೊ ಡನೆ ಬಂಗಾರ ಬಳೆಗಳು ಗಿಲಿಗಿಲಿಸಿದರೆ ಆ ನಾದವೇನೋ ಬಲು ಸವಿ – ಮತ್ತಾ ಕೈಗಳಿಂದಲೇ ಬಡಿಸಿದರೆ – ಅಂಥದೊಂದು ಔತಣ ಸಿಕ್ಕರೆ – ” ಎಂದು ಕೋಣೆಯೆಲ್ಲ ಗದಗಮಿಸುವಂತೆ ಮತ್ತೊಮ್ಮೆ ಗಟ್ಟಿಯಾಗಿ ನಕ್ಕ.

ಶಿರೋಮಣಿ ಮುಖ ತಗ್ಗಿಸಿದ. ಒಳಗಿನ ಗೊಂದಲವು ಎಲ್ಲರಿಗೂ ಗೊತ್ತಿದ್ದುದೇ. ಆದರೂ ತೀರ ಅನಪೇಕ್ಷಿತವಾಗಿ ಜೀವಾನಂದನು ತೀರ ನಾಚಿಕೆ ಬಿಟ್ಟು ಪ್ರಕಟವಾಗಿ ಉಲ್ಲೇಖಿಸಿದ್ದರಿಂದ, ಕೂಡಿದವರಲ್ಲಿ ಯಾರ ಕಡೆಗೆ ನೋಡುವುದೂ ಅವನಿಗೆ ಅಸಹ್ಯವಾಯಿತು.

ನಗುವುದು ತೀರಿದ ಬಳಿಕ ಜೀವಾನಂದನೆಂದ: “ ಕಾವ್ಯಶಾಸ್ತ್ರ ವಿನೋದವಂತೂ ಆದಂತಾಯಿತು. ಹೀಗೆಯೇ ಮೇಲಿಂದ ಮೇಲೆ ತಾವು ದಯವಿಟ್ಟು ಬರುತ್ತಿದ್ದರೆ ಯಾವಾಗಲೂ ಆಗುವುದು. ಇನ್ನು ನಿಮ್ಮ ದೂರುಗಳೇನೋ ಹೇಳುವಂಥವರಾಗಿರಿ. ”

ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಎಲ್ಲರೂ ಕುಳಿತಂತೆ ಕುಳಿತಿದ್ದರು.

“ ನಿಮಗೆ ಮಾತನಾಡಲಿಕ್ಕೆ ನಾಚಿಕೆಯಾಗುತ್ತದೇನೋ ! ” ಜೀವಾ ನಂದನೆಂದ.

ಆಗ ರಾಯಮಹಾಶಯನು ಮುಖವನ್ನೆತ್ತಿ ನುಡಿದ: “ ನಂದಿ ಮಹಾ ಶಯರಿಗೆ ಎಲ್ಲವೂ ಗೊತ್ತಿದೆ. ಅವರು ಧನಿಯರ ಕಿವಿಗೆ ಹಾಕಲಿಲ್ಲವೆಂದು ತೋರುತ್ತದೆ. ”

"ಹೇಳಿದ್ದರೂ ಹೇಳಿರಬಹುದೆನ್ನಿರಿ. ಆದರೆ ನನಗೆ ನೆನಪಾಗ ಲೊಲ್ಲದು. ಅಲ್ಲದೆ, ಅವರ ಹೇಳಿಕೆಯ ಮೇಲೆಯೇ ಇಷ್ಟೊಂದು ಭಾರ ಹಾಕುವುದೇಕೆ ಎಂದು ನಾನೆನ್ನುವುದು. ನೀವೇ ಹೇಳಿರಲ್ಲ, ಏನೆಂಬು ವನ್ನು. ದ್ವಿರುಕ್ತಿಯಾದೀತು ನಿಜ, ಆದರೆ ಉಪಾಯವಿಲ್ಲ. ದಿವಾಣಜೀ, ಇವರ ಮುಖದಿಂದಲೇ ಕೇಳಿಕೊಳ್ಳುವುದು ನೆಟ್ಟಗೆ ಅಲ್ಲವೆ?''

ಏಕಕೌಡಿಯ ವಿಷಯದಲ್ಲಿ ಧನಿಯರ ಬಾಯಿಂದ ಗೌರವದ ಮಾತನ್ನು ಕೇಳಿ ರಾಯಮಹಾಶಯನಿಗೆ ಒಳಗೊಳಗೆ ಆನಂದವಾಯಿತು. ಆದರೂ ಯಾವ ಬಗೆಯ ಚಾಂಚಲ್ಯವನ್ನೂ ತೋರಗೊಡದೆ ಗಂಭೀರವಾಗಿ ಅವನು ಹೇಳಿದ: "ಧನಿಯರು ಎಲ್ಲ ಬಲ್ಲವರೇ ಇದ್ದಾರೆ. ತಮ್ಮ ಸೇವಕ ರಿಗೆ ಅವರು ಬೇಕಾದ ಅಪ್ಪಣೆ ಕೊಡಬಹುದು. ಆದರೆ ನಮ್ಮ ದೂರೇ ನೆಂದರೆ—"

"ಎಂಥ ದೂರು?"

"ನಾವು, ಊರಿನ ಹದಿನಾರಾಣೆ ಮಂದಿ, ಉಚ್ಚನೀಚರೆಲ್ಲರೂ ಸೇರಿ—"

ಜೀವಾನಂದನು ನಸುನಕ್ಕ: "ಅದು ಕಾಣುತ್ತಲೇ ಇದೆ. ಭೈರವಿಯ ತಂದೆ ತಾರಾದಾಸ ಆತನೇ ಅಲ್ಲವೆ?" ಎಂದು ಅವನ ಕಡೆ ಬೆರಳು ಮಾಡಿದ. ತಾರಾದಾಸನು ಉತ್ತರ ಕೊಡಲಿಲ್ಲ. ನೆಲದಲ್ಲಿ ನೋಟವಿಟ್ಟು ಸುಮ್ಮನೆ ಕುಳಿತಿದ್ದ. ರಾಯಮಹಾಶಯನ ಮುಖವನ್ನು ನಿರಾಶೆಯ ನೆರಳು ಆವರಿಸಿತು.

ಆದರೆ ಆ ಸಮಯದಲ್ಲಿ ಶಿರೋಮಣಿ ತಮ್ಮ ಪಕ್ಷವನ್ನು ಸಾವರಿಸಿ ಕೊಂಡ. ನಮ್ರತೆಯಿಂದ ಅವನೆಂದ: "ರಾಜನಿಗೆ ಪ್ರಜರು ಮಕ್ಕಳಂತೆ. ತಪ್ಪುಮಾಡಿದರೂ ಮಕ್ಕಳು; ಮಾಡದಿದ್ದರೂ ಮಕ್ಕಳು. ಈ ಪ್ರಕರಣ ಒಂದು ರೀತಿಯಿಂದ ಅವನಿಗೆ ಸಂಬಂಧಿಸಿದ್ದೇ. ಅವನ ಮಗಳು ಷೋಡಶಿ ಯನ್ನು ಇನ್ನು ಮುಂದೆ ಭೈರವಿಯಾಗಿ ಖಂಡಿತ ಇಡಬಾರದೆಂದು ನಾವು ತೀರ್ಮಾನಿಸಿದ್ದೇವೆ. ಧನಿಯರನ್ನು ನಾವು ಬೇಡಿಕೊಳ್ಳುವುದಿಷ್ಟೇ—ಅವ ಳನ್ನು ಆ ಪದವಿಯಿಂದ ಕಿತ್ತುಹಾಕಲು ಅಪ್ಪಣೆ ದಯಪಾಲಿಸಬೇಕು."

ಜಮಿೂದಾರನು ಚಕಿತನಾಗಿ ಕೇಳಿದ: "ಅದೇಕೆ? ಅವಳ ತಪ್ಪೇನು?"

ಇಬ್ಬರು ಮೂವರು ಒಮ್ಮೆಗೆಲೆ ಒಂದುಸರಿನಿಂದ ಉತ್ತರವಿತ್ತರು: "ತಪ್ಪು ಅತ್ಯಂತ ಭಯಂಕರವಿದೆ"

ಜೀವಾನಂದನು ಕ್ರಮವಾಗಿ ಅವರ ಒಬ್ಬೊಬ್ಬರ ಮುಖದ ಕಡೆಗೂ ನೋಡುತ್ತ, ಜನಾರ್ದನನ ಮುಖದಲ್ಲಿ ನೋಟವನ್ನು ನಿಲ್ಲಿಸಿ "ರಾಯ ಮಹಾಶಯ, ಅಂಥ ಯಾವ ಭಯಂಕರ ತಪ್ಪನ್ನು ಮಾಡಿದಳೆಂದು ಅವಳನ್ನು ತೆಗೆಯಬೇಕೆನ್ನುತ್ತೀರಿ ನೀವು?" ಎಂದು ಪ್ರಶ್ನಿಸಿದ.

ಜನಾರ್ದನನು ಮೇಲೆ ನೋಡಿ ಶಿರೋಮಣಿಗೆ ಮಾತನಾಡಲು ಕಣ್ಣುಸನ್ನೆ ಮಾಡಿದ. ಜೀವಾನಂದನು ಅದನ್ನು ಆಕ್ಷೇಪಿಸಿ ಹೇಳಿದ: "ಛೆ ಛೆ, ಅವರು ಬಹಳ ದಣಿದಿದ್ದಾರೆ. ಮುದುಕ ಮನುಷ್ಯರಿಗೆ ಸುಮ್ಮನೆ ಏಕೆ ತೊಂದರೆ ಕೊಡುತ್ತೀರಿ? ನೀವೇ ಏನೆಂಬುದನ್ನು ತಿಳಿಸಿ ಹೇಳಿರಿ."

ರಾಯಮಹಾಶಯನ ಮುಖದಲ್ಲಿ ಸಂಕೋಚ ಭಾವ ಕಾಣಿಸಿಕೊಂಡಿತು. ಅವನ ಮನಸು ಹೊಯ್ದಾಡುತ್ತಿತ್ತು. ಅವನು ಮೆಲ್ಲನೆ ಹೇಳಿದ: "ಬ್ರಾಹ್ಮಣರ ಹುಡುಗಿ— ಈ ವಿಷಯದಲ್ಲಿ ನನ್ನನ್ನು ಒತ್ತಾಯಪಡಿಸಬೇಡಿರಿ."

ನಗುತ್ತ ಜೀವಾನಂದನೆಂದ: "ದೇವದ್ವಿಜರ ವಿಷಯದಲ್ಲಿ ನಿಮಗಿದ್ದ ಅಚಲ ಭಕ್ತಿ ಈ ಭಾಗದಲ್ಲಿ ಎಲ್ಲರಿಗೂ ಗೊತ್ತಿದೆ. ಈ ಬ್ರಾಹ್ಮಣ ಶೂದ್ರರೆಲ್ಲರನ್ನೂ ಕಲೆಹಾಕಿಕೊಂಡು ನನ್ನ ಕಡೆ ನೀವು ಬಂದಿರುವುದನ್ನು ಕಂಡೇ ಈ ಪ್ರಕರಣ ಅತಿ ಮಹತ್ವದ್ದೆಂದು ನಾನು ಭಾವಿಸಿಕೊಂಡಿದ್ದೇನೆ. ಅದಕ್ಕೇ ಅದರ ಸಾದ್ಯಂತ ಸಮಾಚಾರವನ್ನು ನಿಮ್ಮ ಬಾಯಿಂದಲೇ ಅರಿತುಕೊಳ್ಳಬೇಕಾಗಿದೆ."

ಜನಾರ್ಧನ ರಾಯನು ಅಷ್ಟು ಸಹಜವಾಗಿ ಬಲೆಗೆ ಬೀಳುವ ಮನುಷ್ಯನಲ್ಲ. ಶಿರೋಮಣಿಯನ್ನು ಸಿಟ್ಟುಸಿಟ್ಟಿನಿಂದ ನೋಡುತ್ತ ಅವನೆಂದ: "ಧನಿಯರೇ ಕೇಳಬೇಕೆಂದು ಆಗ್ರಹ ಪಡುತ್ತಿರುವಾಗ ಭೀತಿ ಏತರದು ಠಾಕೂರ? ನಿರ್ಭಯರಾಗಿ ಎಲ್ಲವನ್ನೂ ಹೇಳಿಬಿಡಿರಲ್ಲ."

ವೃದ್ಧ ಶಿರೋಮಣಿ ಇದರ ಮರ್ಮವನ್ನು ಸರಿಯಾಗಿ ಗ್ರಹಿಸಿದ. ಅಸ್ವಸ್ಥನಾಗಿ ಅವನೆಂದ: "ಸತ್ಯ ಹೇಳುವುದಕ್ಕೆ ಯಾರ ಹೆದರಿಕೆಯೇನು ಜನಾರ್ಧನ? ತಾರಾದಾಸನ ಮಗಳನ್ನು ಇನ್ನು ಭೈರವಿಯಾಗಿ ಇಡುವುದಕ್ಕೆ

ನಾವು ಸಿದ್ಧರಿಲ್ಲ. ಧನಿ ಸುರೇ. ಅವಳ ನಡತೆ ಸರಿಯಾಗಿಲ್ಲ, ಇಷ್ಟೇ ತಮಗೆ ಅರಿಕೆಮಾಡಿಕೊಳ್ಳುವುದಿದೆ."

ಜೀವಾನಂದನ ಮುಖದಲ್ಲಿಯ ಹಾಸ್ಯದ ಕಳೆ ಜಾರಿಟು ಹೋಗಿ ಗಂಭೀರ ಕಠೋರತೆ ಅದನ್ನು ಆವರಿಸಿತು. "ಅವಳ ನಡತೆ ಕೆಟ್ಟದ್ದು ನಿಮಗೆ ನಿಶ್ಚಿತವಾಗಿ ಗೊತ್ತಾಗಿದೆಯೇ?" ಕ್ಷಣಹೊತ್ತು ಮೌನವಾಗಿದ್ದು ಅವನು ಕೇಳಿದ.

"ಏನೇನೂ ಸಂದೇಹವಿಲ್ಲ. ಊರ ತುಂಬ ಎಲ್ಲರಿಗೂ ತಿಳಿದುಬಿಟ್ಟಿದೆ" ಎಂದೆಲ್ಲರೂ ಒಂದುಸಾರಿಗೇ ಹೇಳಿದರು.

ಜನಾರ್ಧನನು ಮಾತನಾಡದಿದ್ದರೂ ತಲೆ ಹಾಕಿ ಸಮ್ಮತಿಯನ್ನು ಸೂಚಿಸಿದ.

ಜೀವಾನಂದನು ಮತ್ತೆ ಕ್ಷಣ ಹೊತ್ತು ಸುಮ್ಮನೆ ಕುಳಿತಿದ್ದು, ಬಳಿಕ ಜನಾರ್ದನನ ಕಡೆ ನೋಡಿ, "ಹೀಗೇನು? ನ್ಯಾಯವನ್ನು ದೊರಕಿಸುವ ಆಶೆಯಿಂದ ನೀವೆಲ್ಲರೂ ಒಟ್ಟುಗೂಡಿ ಭೀಷ್ಮದೇವನ ಕಡೆ ಬಂದಿರೇನು, ರಾಯಮಹಾಶಯ? — ಇದರಿಂದ ವಿಶೇಷ ಪ್ರಯೋಜನವಾದೀತೆಂದು ನನಗೆ ತೋರುವುದಿಲ್ಲ" ಎಂದ

ಅವನ ಈ ಉದ್ಗಾರದ ಅರ್ಥವು ಎಲ್ಲರಿಗೂ ತಿಳಿಯಿತೋ ಇಲ್ಲವೋ ಸಂಶಯ. ಜನಾರ್ದನ ಶಿರೋಮಣಿಗಳು ಮಾತ್ರ ತಿಳಿದುಕೊಂಡರು. ಶಿರೋಮಣಿ ಉತ್ತರವಿತ್ತ: "ತಾವು ಈ ಊರ ದೊರೆಗಳು. ನ್ಯಾಯವೆನ್ನಿರಿ ಬೇಕಾದರೆ ಅನ್ಯಾಯವೆನ್ನಿರಿ, ಏನಾದರೂ ತಾವೇ ಮಾಡಬೇಕು. ನಾವು ಅವನ್ನು ಮೌನವಾಗಿ ಶಿರಸಾವಹಿಸುವೆವು. ಇದೀ ಚಂಡೀಗಡ ತಮ್ಮದೇ ಇದೆ."

ಇದನ್ನು ಕೇಳಿ ಜೀವಾನಂದನ ಮುಖಭಾವವೇ ಬದಲಾಯಿತು; ಕೊಂಚ ಸ್ವಾಭಾವಿಕವಾಯಿತು. ಕುತ್ಸಿತವಾಗಿ ನಕ್ಕು ಅವನೆಂದ: "ಇಲ್ಲಿ ಕೇಳಿರಿ ಶಿರೋಮಣಿಯವರೇ, ತಮ್ಮಂಥವರು ಅತಿವಿನಯದಿಂದ ಹೆಜ್ಜೆ ಬಾಗುವ ಕಾರಣವಿಲ್ಲ. ಅತಿರೇಕವಾಗಿ ಗೌರವಿಸಿ ನನ್ನನ್ನು ಕಡಲೆಗಿಡದ ಮೇಲೆ ಹತ್ತಿಸುವುದಕ್ಕೆ ವ್ಯರ್ಥವಾಗಿ ಹೆಣಗಾಡಬೇಡಿರಿ. ಈ ಮಾರು ಸತ್ಯವಾದದ್ದೇ ಎಂಬುದನ್ನು ನನಗೆ ಹೇಳಿರಿ ಸಾಕು."

ಈ ಪ್ರಶ್ನೆ ರಾಯಮಹಾಶಯನ ಮುಖದಮೇಲೆ ಆಸೆಯ ಕಳೆಯನ್ನು ತಂದಿತು. ಶಿರೋಮಣಿಯಂತೂ ಚಂಚಲನಾದ. ಅವನೆಂದ: " ದೂರೇ? ಸತ್ಯವೇ ಅಲ್ಲವೇ ಎಂದು ಸಂದೇಹವೇ? ಒಳ್ಳೇದು, ನಮ್ಮ ಮಾತು ಇರಲಿ, ಆದರೆ ಈ ತಾರದಾಸ– ತಾರದಾಸ, ನೀನೇ ಹೇಳಲ್ಲ. ಇದು ರಾಜದ್ವಾರ. ಯಥಾ ಧರ್ಮವಾಗಿ ಹೇಳು—"

ತಾರಾದಾಸನ ಮುಖವು ಒಮ್ಮಿಗಿಲೆ ಬಿಳುಪಿಟ್ಟಿತು ; ತಿರುಗಿ ಒಮ್ಮೆಲೆ ಕೆಂಪಗೆ ಕುಂಕುಮವಾಯಿತು. ಅವನು ಎದ್ದು ನಿಂತ. ದೃಷ್ಟಿ ಇದ್ದವರೆಲ್ಲರೂ ದೃಷ್ಟಿಯಿಂದಲೇ ಅವನನ್ನು ಹುರಿದುಂಬಿಸುತ್ತಿದ್ದರು. ಉಗುಳು ನುಂಗಿ ಕೆಮ್ಮಿ ಖೇಕರಿಸಿ ಕೊರಳನ್ನು ಸರಿಪಡಿಸಿಕೊಂಡು ನಾಯಲಾದ ಸ್ವರದಲ್ಲಿ ಅವನೆಂದ : " ಧನಿಯರೇ—"

ಜೀವಾನಂದನು ಕೈಸನ್ನೆಯಿಂದ ಅವನನ್ನು ಅಷ್ಟಕ್ಕೆ ಸುಮ್ಮನಿರಿಸಿ ನುಡಿದ: " ತಡೆಯಿರಿ, ಯಥಾಧರ್ಮ ಏನೇ ಇರಲಿ, ಮಗಳ ಅಪಕೀರ್ತಿಯನ್ನು ತಂದೆಯ ಬಾಯೊಳಗೆ ಯಾರಾದರೂ 'ಯಥಾಧರ್ಮ' ವಾಗಿ ಹೇಳುವವರಿದ್ದರೆ ಅವರನ್ನು ಕರೆಯಿರಿ."

ಸಭೆಯ ಜನರು ಮತ್ತೆ ತಣ್ಣಗಾದರು. ಆದರೀಗಿನ ನೀರವತೆಯಲ್ಲಿ ಚಟುವಟಿಕೆಯ ಲಕ್ಷಣವು ಅಸ್ಫುಟವಾಗಿ ಕಂಡುಬರುತ್ತಿತ್ತು. ಪಕ್ಕದ ಬಾಗಿಲಿಂದ ಸೇವಕನೊಬ್ಬನು ಬಂದು ವ್ಹಿಸ್ಕಿ ಸೋಡಾ ಗ್ಲಾಸನ್ನು ಧನಿಯ ಕೈಯಲ್ಲಿ ಕೊಟ್ಟ. ಒಂದೇಟಿಗೇ ಗ್ಲಾಸನ್ನು ಬರಿದುಮಾಡಿ ಸೇವಕನ ಕೈಗೆ ತಿರುಗಿ ಕೊಟ್ಟು ಜೀವಾನಂದನೆಂದ: " ಉಃ! ಬದುಕಿದೆ!" ಎಂದು ಕೊಂಚ ನಕ್ಕು ಜನರ ಕಡೆ ನೋಡಿ ಮಾತನಾಡಿದ: "ಮುಂಜಾನೆಯಿಂದ ತಮ್ಮೆಲ್ಲರ ವಚನಾಮೃತವನ್ನು ಕುಡಿದು ಕುಡಿದು ನೀರಡಿಕೆಯಿಂದ ನನ್ನ ಜೀವ ಒದ್ದಾಡುತ್ತಿತ್ತು! – ಎಲಾ, ನೀವೇಕೆ ಸುಮ್ಮನಾದಿರಿ? ನಿಮ್ಮ 'ಯಥಾ ಧರ್ಮ' ಏನಾಯಿತು?"

ಶಿರೋಮಣಿ ಹತಬುದ್ಧಿಯಾಗಿ ಮಾತನಾಡಿದ : "ಅದೇ ಎನ್ನುತ್ತೇನೆ ಧನಿಯರೆ, ಯಥಾಧರ್ಮ ಏನೆಂಬುದನ್ನು ಹೇಳುತ್ತೇನೆ"

ಜೀವಾನಂದನು ಗೋಣುಹಾಕುತ್ತ ನುಡಿದ : " ಶಕ್ಯವಿದೆ! ತಾವು ಶಾಸ್ತ್ರಜ್ಞರು, ವಯೋವೃದ್ಧರು, ಬ್ರಾಹ್ಮಣರು. ಆದರೆ ನೋಡಿರಿ, ಒಬ

ಹೆಣ್ಣುಮಗಳ ಕುಚರಿತ್ರೆಯನ್ನು ಅವಳಿಲ್ಲದಾಗ ಹೇಳುವುದು ತಮ್ಮ ದೃಷ್ಟಿಯಿಂದ 'ಯಥಾ' ಎಂದೆನಿಸಿದರೂ 'ಧರ್ಮ' ಎಲ್ಲಿ ಉಳಿಯಿತು? ಅದಕ್ಕೆ ನನ್ನದೇನೂ ಆತಂಕವಿಲ್ಲ. ನಾನೆಂದೋ ಧರ್ಮಾಧರ್ಮಗಳ ಆಚೆಗೆ ಹೋಗಿದ್ದೇನೆ. ಆದರೂ ಇದೇನು ಯೋಗ್ಯವಾಗಲಾರದೆಂದು ನಾನು ಹೇಳುವುದು. ನಾನು ಕೇಳಿದ ಪ್ರಶ್ನೆಗೆ ಮೊದಲು ಉತ್ತರ ಕೊಡಿರಿ. ಈಗಿನ ಈ ಭೈರವಿಯನ್ನು ತಮಗೆ ಕಿತ್ತುಹಾಕುವುದಿದೆಯಲ್ಲವೆ?"

ಎಲ್ಲರೂ ಒಮ್ಮೆಲೆ ತಲೆಹಾಕಿ ಹೂಗೊಟ್ಟರು.

"ಇನ್ನು ಈ ಭೈರವಿಯಿದ್ದರೆ ನಡೆಯದು, ಅಲ್ಲವೆ?"

ಜನಾರ್ದನನು ಮೊಗವೆತ್ತಿ ವಿರೋಧವನ್ನು ತೋರಿಸುವ ಪರಿಯಲ್ಲಿ ಮಾತನಾಡಿದ: "ನಡೆಯಲಾರದು ಎಂದೇನೂ ಅಲ್ಲ. ಹಾಗಾಗುವುದು ಊರಿನ ಕಲ್ಯಾಣದ ದೃಷ್ಟಿಯಿಂದ ಅಗತ್ಯವಾಗಿದೆ."

ಜೀವಾನಂದನು ಒಮ್ಮೆಲೆ ನಕ್ಕುಬಿಟ್ಟ. "ಸರಿ ಸರಿ. ಊರಿನ ಒಳಿತು ಕೇಡುಗಳ ಪ್ರಶ್ನೆಯನ್ನು ನಿಶ್ಚಿತವಾಗಿ ನಿರ್ಧರಿಸಲು ಬರುವುದಿಲ್ಲ. ಏನಾದರೂ ಇದ್ದೇ ಇರುವುದೇ. ಅವಳನ್ನು ತೆಗೆಯುವ ಅಧಿಕಾರ ನನಗುಂಟೋ ಇಲ್ಲವೋ ಗೊತ್ತಿಲ್ಲ; ಆದರೆ ಅದಕ್ಕೆ ನನ್ನ ವಿರೋಧವಿಲ್ಲ. ಆದರೆ ಇದಕ್ಕಿಂತಲೂ ಬೇರೊಂದು ಯುಕ್ತಿ ಹೂಡಲಿಕ್ಕೆ ಬರುವುದೋ ಹೇಗೆ, ಒಮ್ಮೆ ಪ್ರಯತ್ನಮಾಡಿ ನೋಡಿರಿ. ಇಲ್ಲದಿದ್ದರೆ ನಮ್ಮ ಏಕಕೌಡಿಯವರನ್ನು ನಿಮ್ಮ ಸಂಚಿನಲ್ಲಿ ಕೂಡಿಸಿಕೊಳ್ಳಿರಿ. ಇದರೊಳಗೆ ಇವರ ಖ್ಯಾತಿ ಬಹಳ."

ಜೀವಾನಂದನ ಈ ಉದ್ಗಾರದಿಂದ ಸಕಲರೂ ಸ್ತಂಭಿತರಾದರು. ಕ್ಷಣ ಹೊತ್ತು ತಡೆದು ಮತ್ತೆ ಅವನೇ ಮಾತನಾಡಿದ: "ಇವಳ ಸತೀತ್ವದ ಕಥೆ ಬಹಳ ಪ್ರಾಚೀನವಾದದ್ದು. ಬಹಳ ಪ್ರಸಿದ್ಧವಾದದ್ದು. ಆದ್ದರಿಂದ ಆ ಪ್ರಕರಣದಲ್ಲಿ ಕೈಹಾಕುವುದು ಒಳಿತಲ್ಲ. ಭೈರವಿಯಿದ್ದಲ್ಲಿ ಭೈರವ ಇರುವವನೇ. ಭೈರವಿಯಿಲ್ಲದೆ ಭೈರವನಿಗೆ ಸಾಗುವುದಿಲ್ಲ; ಇದು ಸನಾತನ ಸಂಪ್ರದಾಯ; ಸಹಜವಾಗಿ ಅಳಿಯಲಾರದು. ಊರಿನ ಭಕ್ತಮಂಡಲಿಯೆಲ್ಲಾ ಉರಿದೆದ್ದೀತು. ಒಂದು ವೇಳೆ, ಸಾಕ್ಷಾತ್ ದೇವಿಯೂ ಕೋಪಗೊಂಡಾಳು. ವ್ಯರ್ಥವಾಗಿ ಗಲಭೆಯೆದ್ದೀತು. ಮಾತಂಗಿ ಭೈರವಿಗೆ ನಾಲ್ಕೈದು ಜನ ಭೈರವರಿದ್ದರೆಂದು ಹೇಳುತ್ತಾರೆ. ಮತ್ತವಳ ಹಿಂದಿನ

ಭೈರವಿಯರಿಗೆ ಎಷ್ಟೆಷ್ಟು ಜನರಿದ್ದರೋ ಲೆಕ್ಕವಿಲ್ಲ. ಹೌದಲ್ಲವೋ ಶಿರೋಮಣಿ ಮಹಾಶಯ? ತಾವು ಈ ಕಡೆಯ ಹಳಬರೊಳಗೆ ಹಳಬರು. ಎಲ್ಲವೂ ಗೊತ್ತಿದೆಯಲ್ಲವೇ ತಮಗೆ?" ಎಂದು ಅವನು ಶಿರೋಮಣಿಗಿಂತ ಹೆಚ್ಚಾಗಿ ರಾಯಮಹಾಶಯನನ್ನು ಉದ್ದೇಶಿಸಿಯೇ ಮಾತನಾಡಿದ.

ಈ ಮಾತಿಗೆ ಉತ್ತರವನ್ನು ಕೊಡಬೇಕೆ ಬೇಡವೆ, ಕೊಟ್ಟರೆ ಹೇಗೆ ಕೊಡಬೇಕು ಎಂಬ ವಿಚಾರದಲ್ಲಿಯೇ ಎಲ್ಲರೂ ಬಿದ್ದರು. ಈ ಮಾತು ಸರಳವೋ ವಕ್ರವೋ, ಸತ್ಯವೋ ಅಸತ್ಯವೋ, ವ್ಯಂಗ್ಯವೋ ವಿನೋದವೋ, ನಗೆಚೇಟಿಕೆಯದೋ ಸಿಟ್ಟಿನದೋ ಎಂಬುವನ್ನು ನಿರ್ಧರಿಸುವುದು ಯಾರಿಗೂ ಸಾಧ್ಯವಾಗಲಿಲ್ಲ.

ಚೊಕ್ಕಟವಾದ ವೇಷ ಧರಿಸಿದ, ರುಚಿಪ್ರಿಯ ತರುಣನೊಬ್ಬನು ಒಳಗೆ ಬಂದ. ಅವನ ಕೈಯೊಳಗೆ ಕೆಲವು ಆಂಗ್ಲ ಬಂಗಾಲಿ ಪತ್ರಿಕೆಗಳೂ ಇದೀಗ ಬಂದ ಕಾಗದಗಳೂ ಇದ್ದುವು. "ಯಾರು, ಪ್ರಫುಲ್ಲನೇ? ಇಲ್ಲಿಯೂ ಪೋಸ್ಟಾಫೀಸಿದೆ ಕಾಣುತ್ತದೆ? ಛೆ! ಇದೆಲ್ಲ ಎಂದು ನಿಲ್ಲುವುದೊ!" ಎಂದ ಜೀವಾನಂದ.

ಗೋಣು ಹಾಕುತ್ತ ಪ್ರಫುಲ್ಲನೆಂದ: "ನಿಜ ನಿಜ. ಇದು ನಿಂತು ಹೋದರೆ ನಿಮಗೆ ಸುಖವಾಗುವುದು. ಆದರಿನ್ನೂ ನಿಂತಿಲ್ಲವಲ್ಲ. ಇವನ್ನು ಸ್ವಲ್ಪ ನೋಡಲು ಸಮಯವುಂಟೆ?"

ಯಾವ ತೆರದ ಉತ್ಸುಕತೆಯನ್ನೂ ತೋರಿಸದೆ ಜೀವಾನಂದನು ಹೇಳಿದ: "ಇಲ್ಲ. ಈಗಲೂ ಸಮಯವಿಲ್ಲ, ಯಾವಾಗಲೂ ಇಲ್ಲ. ಹೊರಗಿನಿಂದ ನೋಡಿದರೇ ಎಲ್ಲ ತಿಳಿಯುತ್ತದೆ. ಅದೋ, ಹೀರಾಲಾಲ ಮೋಹನಲಾಲರ ಅಂಗಡಿಯ ಮುದ್ರೆ ಕಾಣುತ್ತಿದೆ. ಪತ್ರ ಅವನ ವಕೀಲನದೋ, ಏನು ನೇರವಾಗಿ ಕೋರ್ಟಿನಿಂದ ಬಂದದ್ದೋ? ಆ ಕವರು ಸಾಲೋಮನ್ ಸಾಹೇಬನದೇನೋ. ಅವನೇನು ನಮ್ಮ ರಾಜದೇಹವನ್ನು ಹಿಡಿದು ಅತ್ತ ಇತ್ತ ಕೂಡಿಯೇ ಜಗ್ಗಾಡಬೇಕೆನ್ನುತ್ತಾನೊ? ಏನು ಬರೆದಿದ್ದಾನೆ ಅವ? ಪೂರ್ವಕಾಲದ ಬ್ರಾಹ್ಮಣರ ತೇಜಸ್ಸು ಈಗ ಬಾಕಿ ಉಳಿದಿದ್ದರೆ ಈ ಯಹೂದಿ ನನ್ನ ಮಗನನ್ನು ಸುಟ್ಟು ಬೂದಿಮಾಡಿ ಬಿಡುತ್ತಿದ್ದೆ–ಎಂದರೆ ಮದ್ಯದ ಋಣವನ್ನು ತೀರಿಸಬೇಕಾಗುತ್ತಿರಲಿಲ್ಲ."

" ಹೀಗೇಕೆನ್ನುತ್ತೀರಿ ಅಣ್ಣಾ ? ಸದ್ಯ ಇರಲಿ. ಇದನ್ನು ಸಾವಕಾಶ ವಿಚಾರ ಮಾಡುವ" ಎಂದು ನುಡಿದು ಅಸ್ವಸ್ಥನಾದ ಪ್ರಫುಲ್ಲನು ಹೊರಡು ತ್ತಿರುವುದನ್ನು ಕಂಡು ಜೀವಾನಂದನು ನಗುನಗುತ್ತ ನುಡಿದ: " ಎಲಾ, ಇವರೊಳಗೇನು ನಾಚಿಕೆ ತಮ್ಮಾ? ಇವರೆಲ್ಲ ನಮ್ಮ ಮಂದಿಯೇ. ತೀರ ಏಕಜಾತಿಯವರು. ಮಣಿಮಾಣಿಕ್ಯದ ಈ ಬದಿ ಆ ಬದಿ ಎಂದರೂ ಆದೀತು. ಅಲ್ಲದೆ ನಿಮ್ಮ ಅಣ್ಣನೆಂದರೆ ಶುದ್ಧ ಕಸ್ತೂರಿ ಮೃಗ. ಇವನು ಸುಗಂಧ ವನ್ನು ಎಲ್ಲಿ ಹೇಗೆ ಮುಚ್ಚಿಡಬಲ್ಲ ತಮ್ಮಾ? ದುಡ್ಡು, ದುಡ್ಡು! ಇವರ ದಾವೆ, ಅವರ ದಾವೆ! ಅಂಥವರ ಮೊಕದ್ದಮೆ, ಇಂಥವರ ಡಿಕ್ರಿ! ಎಲಾ ಏ ತಾರಾದಾಸ, ಆವೊತ್ತು ನಿನ್ನ ಹೊಂಚು ಸಫಲವಾಗಲಿಲ್ಲ. ಆದರೆ ಪೂರಾ ಆಶೆ ಬಿಡಬೇಡ! ಇವೆಲ್ಲ ನಡೆದಿವೆಯಲ್ಲ, ಇವುಗಳಿಂದ ನಿನ್ನ ಇಚ್ಛಾಪೂರ್ತಿಯಾಗಲು ವಿಳಂಬವಾಗುವುದಿಲ್ಲ. ಪ್ರಫುಲ್ಲ, ನೀನು ಕೋಪಿಸಿ ಕೊಳ್ಳಬೇಡ ತಮ್ಮಾ. ನಮ್ಮವರೆಂಬವರನ್ನು ಯಾರನ್ನೂ ಕಾಯ್ದು ಕೊಂಡಿಲ್ಲ ನಾನು -- ನಾಲ್ವತ್ತು ವರುಷಗಳ ಅಭ್ಯಾಸ ಹೇಗೆ ಹೋದೀತು? ಅದೇನೂ ಸಾಧ್ಯವೆಂದು ತೋರುವುದಿಲ್ಲ. ಅದಕ್ಕಿಂತ ಕೃತ್ರಿಮ ನೋಟು ಮಾಡುವವರು ಯಾರಾದರೂ ಸಿಕ್ಕರೆ ನೋಡು."

ಪ್ರಫುಲ್ಲನು ಬಹಳ ವಿಚಲಿತನಾಗಿದ್ದರೂ ವಕ್ಕು ನುಡಿದ: " ಇಲ್ಲಿ ನೋಡಿರಿ, ನಿಮ್ಮ ಮಾತು ಇವರಿಗೆ ತಿಳಿಯುವುದಿಲ್ಲ. ಇದೆಲ್ಲ ನಿಜವೆಂದೇ ಭಾವಿಸಿಕೊಂಡು ಕೂತಾರು."

" ನಿಜಕ್ಕೂ ಅಂಥ ಮನುಷ್ಯನನ್ನು ಯಾರಾದರೂ ಹುಡುಕಿಕೊಂಡು ಬಂದರೆ ಬದುಕಿಕೊಳ್ಳುವೆ, ಪ್ರಫುಲ್ಲ. ರಾಯಮಹಾಶಯ, ನೀವೊಬ್ಬೀ ವಿಚಕ್ಷಣ ಮನುಷ್ಯರೆಂದು ಕೇಳಿದ್ದೇನೆ. ಅಂಥವರು ಯಾರಾದರೂ ಇದ್ದಾ ರೇನು, ನಿಮ್ಮ ಗೊತ್ತಿನಲ್ಲಿ? " ಗಾಂಭೀರ್ಯದೊಡನೆ ಜೀವಾನಂದನೆಂದ.

ರಾಯಮಹಾಶಯನ ಮೋರೆ ಇಳಿಯಿತು. ಚಟಕ್ಕನೆ ಎದ್ದು ನಿಂತು ಅವನೆಂದ: " ಹೊತ್ತಾಯಿತು; ತಮ್ಮ ಅಪ್ಪಣೆಯಾದರೆ ಹೊರಡುತ್ತೇನೆ ನಿನ್ನು."

ಕೊಂಚ ಗಾಬರಿಗೊಂಡು ಜೀವಾನಂದನೆಂದ: "ಕೂಡಿರಲ್ಲ. ಇಲ್ಲ ದಿದ್ದರೆ ಈ ಪ್ರಫುಲ್ಲನಿಗೆ ವಿಷಾದವಾಗುವುದು. ಇದಲ್ಲದೆ, ಭೈರವಿಯು

ಪ್ರಕರಣ ಇನ್ನೂ ಪೂರ್ತಿಯಾಗುವುದಿದೆ. ಇಲ್ಲಿ ನೋಡಿರಿ, ನಾನು ಹೋಗೆಂದಾಕ್ಷಣ ಅವಳು ಹೋಗುವಳೆ?"

ರಾಯಮಹಾಶಯನು ಕುಳಿತುಕೊಳ್ಳದೆ ಸಂಕ್ಷೇಪವಾಗಿ ತಿಳಿಸಿದ: "ಅದನ್ನು ನಾವು ನೋಡಿಕೊಳ್ಳುತ್ತೇವೆ."

"ಮತ್ತೆ ಆ ಸ್ಥಳಕ್ಕೆ ಯಾರನ್ನಾದರೂ ನಿಯಮಿಸಬೇಕಲ್ಲವೆ? ಅದನ್ನು ತೆರವಿಡಲಿಕ್ಕೆ ಬರುವುದಿಲ್ಲ."

ಈ ಮಾತಿಗೆ ಬಹು ಜನರು ಒಟ್ಟಾಗಿ ಉತ್ತರವಿತ್ತರು: "ಅದನ್ನೂ ನೋಡಿಕೊಳ್ಳುತ್ತೇವೆ."

ಜೀವಾನಂದನು ಉಸಿರ್ಗರೆದ. "ಹೊಡೆಯಿರಿ, ಆಗಿಬಿಡಲಿ. ಅವಳು ಹೋಗಿಯೇ ಹೋಗುವಳು. ಇಷ್ಟೆಲ್ಲ ಜನರು ಶಂಖವಾದ್ಯ ಹೊಡೆದರೂ ಸಾಕು, ಭೈರವಿಯನ್ನೇ ಏಕೆ, ಸಾಕ್ಷಾತ್ ಚಂಡೀದೇವಿಯನ್ನು ರಕ್ಷಿಸು ವುದೂ ಅಸಾಧ್ಯವೆಂದು ನನಗೆ ಮನವರಿಕೆಯಾಯಿತು. ನಿಮ್ಮ ಲಾಭ ನಷ್ಟಗಳಂತೂ ನಿಮಗೆ ತಿಳಿದೇ ತಿಳಿಯುತ್ತವೆ. ಆದರೆ ಸದ್ಯದಲ್ಲಿ ನಾನು ಬಹಳ ತೊಂದರೆಯಲ್ಲಿದ್ದೇನೆ–ದುಡ್ಡಿಗಾಗಿ ನಾನು ಬೇಕಾದ್ದು ಮಾಡೇನು. ಏನಾದರೂ ವ್ಯವಸ್ಥೆಮಾಡಿ ನನಗಷ್ಟು ಸಿಗುವಂತೆ ಮಾಡಬೇಕು. ಒಳ್ಳೇದು, ಏ ಯಾರಾದರೂ ನೋಡಿರೋ, ಏಕಕೌಡಿ ಹೋದವರೋ ಇದ್ದಾರೋ? ಗಂಟಲೊಣಗಿ ಸಹರಾ ಅರಣ್ಯವಾಗಿದೆ."

ಆಳು ಧನಿಯ ಕೈಯೊಳಗೆ ಪೂರ್ಣಪಾತ್ರವನ್ನು ತಂದಿತ್ತು, ಏಕಕೌಡಿ ಚಾವಡಿ ಕೋಣೆಯಲ್ಲಿ ಬರೆಯುತ್ತ ಕುಳಿತುದನ್ನು ಅರುಹಿದ.

ಧನಿಯ ಅಪ್ಪಣೆಯ ಮೇರೆಗೆ ಕೆಲಹೊತ್ತಿನಲ್ಲಿ ಏಕಕೌಡಿ ಬಂದು, ವಿನಯದಿಂದ ಒಂದು ಕಡೆ ನಿಂತುಕೊಂಡ. ಒಣಗಿದ ಗಂಟಲನ್ನು ತೋಯಿ ಸುತ್ತ ಜೀವಾನಂದನು ಕೇಳಿದ: "ಆ ದಿವಸ ಭೈರವಿಯನ್ನು ಚಾವಡಿಗೆ ಕರೆದಿತ್ತು. ಅದನ್ನವಳಿಗೆ ಯಾರಾದರೂ ಹೋಗಿ ತಿಳಿಸಿದರೇನು?"

"ನಾನೇ ಹೋಗಿದ್ದೆ ಹೇಳಲಿಕ್ಕೆ."

"ಬಂದಿದ್ದಳೇನು?"

"ಇಲ್ಲ ಧನಿಯರೆ."

"ಏಕೆ?"

ಏನೂ ಮಾತನಾಡದೆ ಏಕಕೌಡಿ ನೆಲವನ್ನು ದಿಟ್ಟಿಸುತ್ತ ಸುಮ್ಮನಿದ್ದ. ಉತ್ಸುಕತೆಯಿಂದ ಜೀವಾನಂದನು ಪ್ರಶ್ನಿಸಿದ: "ಯಾವಾಗ ಬರುತ್ತಾಳಂತೆ? ಹೇಳಿದಳೇನು ಆಕೆ?"

ತಲೆ ತಗ್ಗಿಸಿಕೊಂಡು ನಿಂತಿದ್ದಹಾಗೆಯೇ ಏಕಕೌಡಿ ಬಾಯೊಳಗೇ ಹೇಳಿದ: "ಆಕೆ ಹೇಳಿದ ಉತ್ತರ ಇಷ್ಟು ಮಂದಿಯೊಳಗೆ ಹೇಳುವಂಥದಲ್ಲ ಧನಿಯರೆ."

ಕೈಯೊಳಗಿನ ಬರಿದಾದ ಗ್ಲಾಸನ್ನು ಕೆಳಗಿಟ್ಟು, ಒಮ್ಮೆಲೆ ಕಠೋರ ಭಾವವನ್ನು ತಾಳಿ ಜೀವಾನಂದನೆಂದ: "ಏಕಕೌಡಿ, ನಿಮ್ಮ ದಿವಾಣಗಿರಿ ಕಾಯಿದೆ ಒತ್ತಟ್ಟಿಗೆ ಇಡಿರಿ. ಆಕೆ ಬರುವಳೇ ಇಲ್ಲವೆ? ಇಲ್ಲವೆ?"

"ಇಲ್ಲ."

"ಏಕೆ?"

ಏಕಕೌಡಿ ಜಮಾದಾರಿ ಕಾಯಿದೆಯನ್ನು ಪೂರ್ಣವಾಗಿ ಹಾರಿಸಿ ಒಗೆಯದಿದ್ದರೂ ಎಲ್ಲರಿಗೆ ನಿಚ್ಚಳವಾಗಿ ಕೇಳಿಸುವಂತೆ ಹೇಳಿದ: "ಆಕೆ ಬರುವುದಿಲ್ಲವೆಂದು ಹೇಳಿದಳು. ಅಲ್ಲಿ ನೆರೆದ ಜನರೆಲ್ಲರೂ ಕೇಳಿದ್ದಾರೆ ಅದನ್ನು. ಅವಳೆಂದಳು – 'ನಿಮ್ಮ ಧನಿಯರಿಗೆ ಹೇಳು ಏಕಕೌಡಿ, ನ್ಯಾಯಬುದ್ಧಿ ಅವರಿಗಿದ್ದರೆ ಮೊದಲು ತಮ್ಮ ಪ್ರಜೆಗಳಿಗೆ ದಯಪಾಲಿಸಲಿ, ನನಗೆ ಸರಕಾರಿ ಕೋರ್ಟು ಇದೆ" ಎಂದಳು.

ಜಮಾದಾರನ ಈವರೆಗಿನ ವಿನೋದ, ಹಾಸ್ಯ, ಸರಳತೆ, ಔದಾರ್ಯ ಎಲ್ಲವೂ ಒಂದು ಕ್ಷಣದಲ್ಲಿ ಲುಪ್ತವಾದವು. ಕೊಂಚಹೊತ್ತು ಸ್ತಬ್ಧನಾಗಿ ಕುಳಿತಿದ್ದು ಮೆಲ್ಲಮೆಲ್ಲನೆ ಅವನೆಂದ: "ಒಳ್ಳೇದು, ಹೋಗಿರಿ ನೀವು" ಎಂದು "ಯಾವುದೋ ಸಕ್ಕರೆ ಕಂಪನಿ ಸಾವಿರ ಬಿಘೆ ಭೂಮಿ ಕೇಳುತ್ತಿತ್ತಲ್ಲವೆ? ಅದಕ್ಕೆ ಉತ್ತರ ಬರೆದಾಯಿತೆ?" ಎಂದು ಪ್ರಫುಲ್ಲನನ್ನು ವಿಚಾರಿಸಿದ.

"ಇಲ್ಲ."

"ಹಾಗಾದರೆ ಬರೆ, ಕೊಡುವೆವೆಂದು. ಹೋಗು ತಡ ಮಾಡಬೇಡ."

"ಹೂಂ. ಈಗಲೇ ಬರೆಯುತ್ತೇನೆ" ಎಂದು ಪ್ರಫುಲ್ಲನು ಏಕಕೌಡಿಯೊಡನೆ ಹೊರಟುಹೋದ.

ಮತ್ತೆ ಬಹಳ ಹೊತ್ತು ಸ್ತಬ್ಧತೆ ನೆಲಸಿತ್ತು. ಶಿರೋಮಣಿ ಎದ್ದು ಆಶೀರ್ವದಿಸುತ್ತ, "ಹಾಗಾದರೆ ನಾವಿನ್ನು ಬರೋಣವೆ?" ಎಂದ.

"ಬರ್‍ರಿ."

ಬಾಗಿ ನಮಸ್ಕರಿಸಿ ರಾಯಮಹಾಶಯನೆಂದ: "ಅಪ್ಪಣೆಯಾದರೆ ಇನ್ನೊಮ್ಮೆ ಬಂದು ಚರಣದರ್ಶನ ಪಡೆಯಬೇಕೆನ್ನುತ್ತೇನೆ."

"ಆಗಲಿ."

ಸಾವಕಾಶವಾಗಿ ಎಲ್ಲರೂ ತೆರಳಿದರು. ಎಷ್ಟೋ ದಾರಿ ನಡೆಯುವ ವರೆಗೆ ಯಾರು ಯಾರೊಡನೆಯೂ ಮಾತನಾಡಲಿಲ್ಲ. ಕೊನೆಗೆ ಕುತೂಹಲವನ್ನು ತಡೆಯಲಾರದೆ ಶಿರೋಮಣಿ ರಾಯನನ್ನು ಬದಿಗೆ ಎಳೆದು ಕೊಂಡು ಹೋಗಿ, "ಜನಾರ್ದನ, ನಿನಗೆ ಏನೆನಿಸಿತಪ್ಪ, ಈ ಜಮಿದಾರನ ಬಗ್ಗೆ?" ಎಂದು ಪ್ರಶ್ನಿಸಿದ.

"ಎನಿಸುವುದೇನು? ಬಹಳ ಎನಿಸಿತು." ಸಂಕ್ಷೇಪವಾಗಿ ಜನಾರ್ದನನು ಉತ್ತರವಿತ್ತ.

"ಮಹಾ ಪಾಪಿಷ್ಠ! ಕೊಂಚವೂ ನಾಚಿಕೆಯಿಲ್ಲ!"

"ಇಲ್ಲ."

"ಆದರೆ ಬಲು ಸರಳ! ಕುಡುಕನಲ್ಲವೆ! ನೋಡಿದೆಯಾ, ಇಡೀ ಜಡೀ ಸಾಲದಲ್ಲಿ ಮುಳುಗಿದ್ದಾನೆ, ಅದನ್ನೂ ಆಡಿಬಿಟ್ಟ ಮಗ."

"ಹೂಂ."

"ಏನೇನೂ ಉಳಿಯುವುದಿಲ್ಲ; ಎಲ್ಲವೂ ಧೂಳಿದ್ದು ಹೋಗುವುದು;—ನೋಡುವೆಯಂತೆ."

"ಸಂಭವವಿದೆ."

"ಹೆಚ್ಚು ದಿನ ಬದುಕುವುದೂ ಇಲ್ಲ."

"ಹಾಗೇನೋ ಎನಿಸುತ್ತದೆ."

ಮತ್ತೆ ಕೆಲಹೊತ್ತು ಮೌನವಾಗಿ ಸಾಗಿದರು.

"ತೀರ ನಾವು ಭಾವಿಸಿಕೊಂಡ ಹಾಗೇನೂ ಇಲ್ಲ; ತೀರ ಭೋಳೆ ಶಂಕರ ಕಾಣುವುದಿಲ್ಲ" ಶಿರೋಮಣಿಯೆಂದ.

"ಹೌದು" ಎಂದಿಷ್ಟೇ ಉದ್ಗರಿಸಿದ ರಾಯ.

" ಆದರೆ ಬಲು ವಾಚಾಳಿ. ಹಿರಿಯರ ಮಾನ ಮರ್ಯಾದೆಯನ್ನೂ ಲೆಕ್ಕಿಸುವುದಿಲ್ಲ."

ರಾಯನು ಮಾತನಾಡಲಿಲ್ಲ. ಉತ್ತರ ಬರುವುದಿಲ್ಲವೆಂದರಿತು ಶಿರೋಮಣಿ ಮತ್ತೆಂದ: " ಆದರೆ ಮಾತಿನ ರೀತಿ ನೋಡಿದೆಯಾ? ಅರ್ಥ ಮರ್ಥ ಮಾತು, ಸರಿಯಾಗಿ ತಿಳಿಯುವುದಿಲ್ಲ ಕೂಡ. ನಿಜವಾಗಿ ಹೇಳು ತ್ತೇನೆ– ನಮ್ಮನ್ನೇ ಮಂಗಮಾಡಿ ಕುಣಿಸುತ್ತಾನೋ ಏನೋ ಯಾರು ಬಲ್ಲರು! ಎಲ್ಲವೂ ಗೊತ್ತಿದೆ ಅವನಿಗೆ–ಏನೆಂದೆ?"

ಈ ವಿಷಯಕ್ಕೂ ರಾಯಮಹಾಶಯನು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಲಿಲ್ಲ. ಮತ್ತೆ ನೀರವವಾಗಿ ನಡೆದರು. ಮನೆ ಹತ್ತಿರವಾಗಲು ಶಿರೋಮಣಿಯ ಆತುರವು ಅನಿವಾರ್ಯವಾಯಿತು. ಮೆಲ್ಲಮೆಲ್ಲನೆ ನುಡಿದ: " ನೀನು ಬಹಳ ನಿರುತ್ಸಾಹಿಯಾದಂತೆ ಕಾಣುತ್ತದೆ ಜನಾರ್ದನ? ಯಾವುದೂ ಕೈಗೂಡುವುದಿಲ್ಲವೆಂದು ಹೆದರಿಕೆಯಾಗಿದೆಯೆ?"

ಸ್ವಲ್ಪ ಹೊತ್ತು ತಡೆದು ತೀರ ನಿರುಪಾಯನಾಗಿ ರಾಯಮಹಾ ಶಯನು ಮಾತನಾಡಿದ: " ದೇವಿಯ ಇಚ್ಛೆ!"

" ಅದೇನು ಬಿಡಿರಿ. ಅಂತೂ ಎಲ್ಲಾ ಕಲಕುಮುಲಕಾಗಿಬಿಟ್ಟಿದೆ. ಹಿಡಿಯುವುದಕ್ಕೂ ಸಿಕ್ಕಲಿಲ್ಲ, ಹೊಡೆಯುವುದಕ್ಕೂ ಸಿಕ್ಕಲಿಲ್ಲ. ನಿನಗೇ ನಪ್ಪ, ದುಡ್ಡಿನ ಬಲವಿದೆ. ಈ ಹುಲಿಯ ಗವಿಯೊಳಗೆ ಹಣಿಕಿ ಹಾಕಿದ್ದಕ್ಕೆ, ನಮ್ಮ ತಲೆ ಉಳಿದರೆ ಸಾಕಪ್ಪ ಎನಿಸುತ್ತದೆ ನಮಗೆ."

" ನೀವು ಬರುವಾಗ ಹೆದರಿಕೆ ಕಟ್ಟಿಕೊಂಡು ಬಂದಿರೇನೋ!" ಎಂದ ಜನಾರ್ದನನು ರುಕ್ಷಸ್ವರದಲ್ಲಿ.

" ಛೆ ಛೆ! ಹೆದರಿಕೆ ಏತರದು? ಹೆದರಿಕೆ ಏತರದು? ಮತ್ತೆ ನೀನು ಕೂಡ ಒಳ್ಳೇ ಸಂತೋಷದಿಂದ ಬಂದಿರುವಿರೆಂದು ನಿನ್ನ ಮೋರೆ ನೋಡಿದ ರಂತೂ ಎನಿಸುವುದಿಲ್ಲ. ಧನಿಯರು ಕಿವಿಗೊಯ್ದ ಶಿಪಾಯಿಯೆ. ಒಡಪ ದಂಥ ಮಾತನಾಡುತ್ತಾನೆ. ನಡತೆಯೂ ಬಲು ಹುಂಬತನದ್ದು. ಮೂಗು ಹಿಡಿದು ನಮ್ಮ ಬಾಯೊಳಗೆ ಹೆಂಡ ಹೊಯ್ಯಲಿಲ್ಲ, ಇದೇ ನಮ್ಮ ಭಾಗ್ಯ ವೆನ್ನಬೇಕು. ಭೈರವಿಯ ಬೆದರುಗುಂಡನ್ನು ಕೇಳಿದೆಯಲ್ಲವೆ, ಏಕಕೌಡಿಯ ಬಾಯಿಂದ? ನಾವು ಕೂಡ ಎಷ್ಟೋ ಮಾತು ಅವನೆದುರಿಗೆ ಆಡಿಬಿಟ್ಟೆ

ದ್ದೇವೆ. ಅದೇನೂ ಸರಿಯಾಗಲಿಲ್ಲ. ಯಾರಿಗೆ ಗೊತ್ತು–ಈ ಮಗ ಏಕಕೌಡಿ ಒಳಗೊಳಗೆ ಎಲ್ಲವನ್ನೂ ಹೇಳುತ್ತಿರಬಹುದು. ಇಬ್ಬರ ನಡುವೆ ನಾವು ನುಗ್ಗಾಗದಿದ್ದರೆ ಸಾಕು."

"ಚಂಡಿಯ ಇಚ್ಛೆ ಹೇಗಿದೆಯೋ!" ಎಂದು ಔದಾಶೀನ್ಯದಿಂದ ಜನಾರ್ದನನು ನುಡಿದ.

"ಹೊತ್ತು ಬಹಳವಾಯಿತು, ಬರುತ್ತೇನೆ."

"ಒಳ್ಳೇದು, ಬರ್ರಿ."

ಸಂದಿಯ ಮುರುವಿನಲ್ಲಿ ಹೊರಳುವಾಗ ಗುಡಿಯ ಕಡೆ ನೋಡಿ, ಕೈ ಜೋಡಿಸಿ ನಮಸ್ಕರಿಸಿ, ಕಿವಿಯ ಮೇಲೆ ಕೈಯಿಟ್ಟು ಗಲ್ಲಗಲ್ಲ ಬಡಿದು ಕೊಂಡ ಶಿರೋಮಣಿ. ಬಾಯೊಳಗೇ ಏನೆಂದು ಬೇಡಿಕೊಂಡನೋ ಕೇಳಿಸಲಿಲ್ಲ.

## ೧೪

ಮಿಕ್ಕ ಊರುಗಳಲ್ಲಿಯಂತೆಯೇ ಚಂಡೀಗಡದಲ್ಲಿಯೂ ಬೆಳಗಾಗು ತ್ತಿತ್ತು, ಸಂಜೆಯಾಗುತ್ತಿತ್ತು. ಹೊರಗೇನೂ ವಿಶೇಷ ಕಂಡುಬರುತ್ತಿರ ಲಿಲ್ಲ. ದೇವಿಯ ಪೂಜೆ ಅರ್ಚನೆಗಳು ಹಾಗೆಯೆ ಸಾಗಿದ್ದವು. ಊರೂ ರಿಂದ ಯಾತ್ರಿಕರು ಹಾಗೆಯೇ ಬರುತ್ತಿದ್ದರು, ಹೋಗುತ್ತಿದ್ದರು; ನವಸ ಮಾಡುತ್ತಿದ್ದರು, ಪೂಜೆ ಕಟ್ಟುತ್ತಿದ್ದರು, ಬಲಿ ಕೊಡುತ್ತಿದ್ದರು; ಪ್ರಸಾದದ ಪಾಲನ್ನು ಪಡೆಯುವುದಕ್ಕಾಗಿ ಎಂದಿನಂತೆಯೇ ಕಾದಾಡುತ್ತಿದ್ದರು; ಹಾಗೆಯೆ ಆತ್ಮಸ್ತುತಿ, ಪರನಿಂದೆ ಮಾಡುತ್ತ ತಮ್ಮ ದೇಹ ಮನಗಳ ಸ್ವಾಸ್ಥ್ಯ ಸ್ವಾಭಾವಿಕತೆಗಳಿಗೆ ಪ್ರಮಾಣಗಳನ್ನು ತೋರಿಸುತ್ತಿದ್ದರು.

ಹಾಗೆ ನೋಡಿದರೆ ಎಲ್ಲಿಯೂ ಯಾವ ವ್ಯತ್ಯಾಸವೂ ಕಂಡುಬರುತ್ತಿರ ಲಿಲ್ಲ. ಇಷ್ಟರೊಳಗೇ ವಾತಾವರಣವು ಬದಲಾಗಿದೆ, ಮಳೆ ಬರುವ ಪೂರ್ವ ದಲ್ಲಿಯಂತೆ ಚಂಡೀಗಡದ ಮೇಲಿನ ಆಕಾಶವು ಮೋಡಗಳಿಂದ ತುಂಬಿ ಹೋಗಿದೆ ಎಂಬುದು ಯಾರ ಕಲ್ಪನೆಯಲ್ಲಿಯೂ ಬರುವಂತಿರಲಿಲ್ಲ.

ಊರಿನ ಸರ್ವಸಾಧಾರಣ ಒಕ್ಕಲಿಗರಿಗೆ ಎಲ್ಲವೂ ನಿಶ್ಚಿತವಾಗಿ ತಿಳಿ

ದಂತೆಯೂ ಇರಲಿಲ್ಲ. ಆದರ್ಶ ಪುರುಷರೆಂದುಕೊಳ್ಳುವವರ ಮನಸಿನಲ್ಲಿ ಷೋಡಶಿಯ ಬಗ್ಗೆ ಯಾವ ಅಭಿಪ್ರಾಯವೇ ಇರಲಿ, ಆ ದೀನ ದುಃಖಿಗಳು ಅವಳಲ್ಲಿ ಪ್ರೀತಿಯಿಟ್ಟಿದ್ದರು, ಶ್ರದ್ಧೆ ಇಟ್ಟಿದ್ದರು. ಏಕಕೌಡಿ ಸಂದಿಯ ಬಲೆಯಿಂದ ಬಿಡುಗಡೆ ಹೊಂದುವುದಕ್ಕೆ ಅವರಿಗೆ ಅವಳೊಬ್ಬಳೇ ಆಧಾರ.

ಸಣ್ಣಪುಟ್ಟ ಸಾಲಗಳು ಎಲ್ಲಿಯೂ ಹುಟ್ಟದಿದ್ದಾಗ ಭೈರವಿಯ ಮುಂದೆ ಕೈಯೊಡ್ಡುವುದಕ್ಕೆ ಅವರಿಗೆ ಸಂಕೋಚವೆನಿಸುತ್ತಿರಲಿಲ್ಲ. ಅವಳು ಮನೆಯನ್ನು ಬಿಟ್ಟು ಬಂದುದಕ್ಕೆ ಅವರಿಗೆ ಅಷ್ಟೊಂದು ಖೇದವಾಗಿರಲಿಲ್ಲ. ಇಂದಿಲ್ಲ ನಾಳೆ ತಂದೆ ಮಗಳಲ್ಲಿಯ ಮನಸ್ತಾಪವು ಅಳಿಯಬಹುದೆಂದು ಅವರು ಬಗೆದಿದ್ದರು.

ಷೋಡಶಿಯ ದುರ್ನಾಮದ ಸಂಗತಿ ಮುಚ್ಚುಮರೆಯಲ್ಲಿ ಉಳಿದಿರಲಿಲ್ಲ. ಅವಳಾದುದರಿಂದಲೇ ಹೀಗಾಗಬಾರದಿತ್ತೆಂದು ಅವರಿಗೆನಿಸುತ್ತಿದ್ದಿತಲ್ಲದೆ, ದೇವಿಯ ಭೈರವಿಯ ನಡತೆಯ ಬಗ್ಗೆ ತಲೆ ಕೆಡಿಸಿಕೊಳ್ಳಬೇಕೆಂದು ಎಂದೂ ಯಾರಿಗೂ ಎನಿಸುತ್ತಿರಲಿಲ್ಲ. ಬಹುಕಾಲದ ರೂಢಿಯಿಂದ ಅದು ಕ್ಷುದ್ರ ವಿಷಯವಾಗಿದ್ದಿತು.

ಆದರೆ ಈ ಪ್ರಕರಣವು ಅದ್ಭುತವಾಗಿ ಬೆಳೆದು ಗುಡಿಯೊಳಗೆ ತುಮುಲಯುದ್ಧವಾಗುವುದು, ಊರ ಹಿರಿಯರು ತಾರಾದಾಸನನ್ನು ಕಟ್ಟಿಕೊಂಡು ಹಗಲುರಾತ್ರಿಯೆನ್ನದೆ ಧನಿಯರ ಕಡೆ ಎಡತಾಕಿ ಬುಡಮೇಲು ಮಾಡಲು ಸಂಚು ಮಾಡುತ್ತಿರುವರು, ಎಲ್ಲಿಯದೋ ಯಾವದೋ ಸಣ್ಣ ಹುಡುಗಿಯನ್ನು ತಂದು ಅಣಿಗೊಳಿಸುತ್ತಿರುವರು – ಎಂಬ ಸಂದೇಹಾಸ್ಪದವಾದ ವಾರ್ತೆ ಕ್ಷಣ ಕ್ಷಣಕ್ಕೂ ವಿದ್ಯುದ್ವೇಗದಿಂದ ಹಬ್ಬತೊಡಗಿದಾಗ ಇದರಿಂದ ಊರಿನ ಕಲ್ಯಾಣವಾಗುವುದಿಲ್ಲವೆಂದು ಅವರಿಗೆ ಎನಿಸಿತು. ಸಾಮಾನ್ಯ ಜನತೆಯಲ್ಲಿ ಭಯಂಕರ ಕೋಲಾಹಲವೆದ್ದಿತು.

ಅಷ್ಟಮಿಯ ದಿನ ಗುಡಿಯ ಅಂಗಳದಲ್ಲಿ ಬಹಳ ಜನರು ಸೇರಿದ್ದರು ಗರ್ಭಗುಡಿಯ ಹತ್ತಿರವೇ ವರಾಂಡದಲ್ಲಿ ಕುಳಿತು ಷೋಡಶಿ ಆರತಿಗಾಗಿ ಸವರಿಸುತ್ತಿದ್ದಳು. ಆ ಹೊತ್ತಿನಲ್ಲಿ ಹೊಸ ಹುಡುಗಿಯನ್ನು ಸಂಗಡ ಕರೆದುಕೊಂಡು ತಾರಾದಾಸ ಏಕಕೌಡಿ ಅಲ್ಲಿಗೆ ಹೋದರು. ಕೆಲಸದಲ್ಲಿ ಮೈಮರೆತ ಷೋಡಶಿ ಅವರ ಕಡೆ ನೋಡಲಿಲ್ಲ.

"ಮಂಗಲಾದೇವಿ, ನಿಮ್ಮ ಚಂಡಿಗೆ ನಮಸ್ಕಾರ ಮಾಡಮ್ಮ" ಎಂದ ಏಕಕೌಡಿ.

ಪೂಜಾರಿ ಏನೋ ಮಾಡುತ್ತಲಿದ್ದವನು ಲಗುಬಗೆಯಿಂದ ಎದ್ದುನಿಂತ. ಮೋರೆಯೆತ್ತಿ ನೋಡದಿದ್ದರೂ ಇದು ಷೋಡಶಿಯ ಲಕ್ಷ್ಯಕ್ಕೆ ಬಂದಿತು. ನಮಸ್ಕಾರ ಮಾಡಿ ಆ ಹುಡುಗಿ ಎದ್ದು ನಿಲ್ಲಲು ಪೂಜಾರಿ ನುಡಿದ: "ದೇವಿಯ ಸಂಧ್ಯಾರತಿಯನ್ನು ನೀನೇ ಮಾಡುವೆಯಲ್ಲವೆ? ಹಾಗಾದರೆ ದೇವಿಯ ಬಲಗಡೆಯ ಆ ಆಸನದ ಮೇಲೆ ಕೂತುಕೋ."

ಕೊನೆಗಣ್ಣಿಂದ ಷೋಡಶಿಯ ಕಡೆ ನೋಡಿ ನಕ್ಕು ಏಕಕೌಡಿಯೆಂದ: "ತನ್ನ ಸ್ಥಾನವನ್ನವಳು ತಾನೇ ಗುರುತಿಸುವಳು ಭಟ್ಟರೇ, ನೀವು ಹೇಳಿಕೊಡ ಬೇಕಾಗಿಲ್ಲ. ಆದರೆ ದೇವಿಯ ವಸ್ತು ಒಡವೆಗಳನ್ನೆಲ್ಲ ಒಂದುಸಲ ತೋರಿಸಿರಿ, ನೋಡುವ."

ಕೊಂಚ ನಾಚಿಕೆಪಟ್ಟುಕೊಂಡು ಪೂಜಾರಿ ಹೇಳಿದ: "ತೋರಿಸಲಿಕ್ಕೇ ಬೇಕಲ್ಲ! ಒಂದೊಂದಾಗಿ ಎಲ್ಲವನ್ನೂ ತೋರಿಸಬೇಕು. ಪಟ್ಟಿಯಂತೆ ಎಲ್ಲವೂ ಸರಿಯಾಗಿವೆ. ಏನೂ ಯೋಚನೆ ಬೇಡ. ಇಕಾ ಈ ದೊಡ್ಡ ಪೆಟ್ಟಿಗೆಯಲ್ಲಿ ಪೂಜೆಯ ಪಾತ್ರೆಗಳು, ತಾಮ್ರಹಿತ್ತಾಳೆಯ ಎಲ್ಲ ಉಪಕರಣಗಳು ಇವೆ. ಅಗತ್ಯವಿದ್ದಾಗ ಅವನ್ನು ಹೊರಗೆ ತೆಗೆಯುತ್ತೇನೆ. ಆ ಪಟ್ಟೆ ಬಡಿವ ಮರದ ಪೆಟ್ಟಿಗೆಯಲ್ಲಿ ಮುಕಮಲ್ಲಿನ ತೆಳುಪರದೆ, ಜಲ್ಲರೆ, ಮೊದಲಾದವಿವೆ. ಈ ಇದರೊಳಗೆ ಜಮಖಾನೆ, ಮೇಲುಹಾಸಿಕೆ ಕುಳಿತುಕೊಳ್ಳುವ ಆಸನಗಳೆಲ್ಲ–"

"ಮತ್ತೆ –"

"ಅದೋ, ಪೂರ್ವದಿಕ್ಕಿನ ಗೋಡೆಯಲ್ಲಿ ಕೀಲಿ ಹಾಕಿದ್ದು ಕಾಣುತ್ತದಲ್ಲ, ಅದು ಕಬ್ಬಿಣ ಪೆಟ್ಟಿಗೆ. ಅದನ್ನು ಗೋಡೆಯೊಳಗೇ ಕೂಡಿಸಿದೆ. ಅದರಲ್ಲಿ ಬಂಗಾರದ ಕಿರೀಟ, ರಾಮಪುರದ ಮಹಾರಾಣಿಯವರು ಕೊಟ್ಟ ಮುತ್ತಿನಹಾರ, ಬೀಜಗಾವದ ಜಮಿಾದಾರರು ಕೊಟ್ಟ ಬಂಗಾರದ ಭುಜಕೀರ್ತಿ, ಹಾರ, ಅಲ್ಲದೆ ಬೇರೆ ಬೇರೆ ಭಕ್ತರಿಂದ ಬಂದ ಹಲವು ಬೆಳ್ಳಿ ಬಂಗಾರದ ಅಲಂಕಾರಗಳು ಇವೆ. ಬೆಳ್ಳಿ ಬಂಗಾರದ ಪಾತ್ರೆಗಳು, ನಗದು ಹಣ, ಕಾಗದ ಪತ್ರಗಳು – ಒಟ್ಟಾರೆ ಬೆಲೆಯುಳ್ಳ ವಸ್ತುಗಳೆಲ್ಲಾ ಅದರೊಳಗೇ ಇವೆ."

"ನಾನೇನೂ ಊರಿಗೆ ಹೊಸಬನಲ್ಲ ಭಟ್ಟರೇ, ಎಲ್ಲಾ ಗೊತ್ತಿದೆ. ನೀವು ಹೇಳುತ್ತಿದ್ದೀರಲ್ಲ, ಅವೆಲ್ಲವೂ ಪೆಟ್ಟಿಗೆ ತೆರೆದರೆ ಸಿಕ್ಕುವವಲ್ಲವೆ? ಅವಳು ಇಲ್ಲಿಯೇ ಕೂತಿದ್ದಾಳೆ; ಕೈ ಇಸಿದು ಕೊಂಡು ತೆರೆದು ತೋರಿಸಿರಿ. ಊರಿನ ಹದಿನಾರಾಣೆ ಜನರ ವಿನಂತಿಯ ಮೇರೆಗೆ, ಧನಿಯರು ಏನಪ್ಪಣೆ ಕೊಟ್ಟಿದ್ದಾರೆ ಬಲ್ಲಿರೊ? ಚೈತ್ರಸಂಕ್ರಾಂತಿಯೊಳಗೆ ಎಲ್ಲವನ್ನೂ ರುಜುವಾತು ಪಡಿಸಿಕೊಳ್ಳಬೇಕು."

ಪಾಪ, ಪೂಜಾರಿ ಮುಂದುಗಾಣದೆ ನಿಂತುಕೊಂಡ. ಷೋಡಶಿಯ ಅಧಿಕಾರವನ್ನು ಕಸಿದುಕೊಳ್ಳಲಾಗಿದೆಯೆಂಬುದನ್ನು ಅವನು ಕೇಳಿದ್ದ. ಏಕಕೌಡಿ ಮಹಾಶಯನ ಪ್ರತ್ಯಕ್ಷ ಅಪ್ಪಣೆಯನ್ನು ಅಲ್ಲಗಳೆಯುವುದು ಮಹಾಭಯಂಕರ ಎಂಬುದೂ ಅವನಿಗೆ ಗೊತ್ತು. ಆದರೂ ಹತ್ತಿರವೇ ಕುಳಿತು, ಎಲ್ಲವನ್ನೂ ಕೇಳಿಯೂ ಕೇಳದಂತಿದ್ದ ಭೈರವಿಯ ಎದುರಿಗೆ ಹೋಗಿ ಮಾತನಾಡಲು ಅವನಿಗೆ ಧೈರ್ಯಸಾಲಲಿಲ್ಲ. ಅಂಜುಂತಂಜುತ್ತ ಅವನೆಂದ: "ಇನ್ನೂ ಅವಕಾಶವಿದೆಯಲ್ಲ ನಂದಿ ಮಹಾಶಯ, ಈಗ ಹೊತ್ತು ಮುಳುಗುತ್ತ –"

ಈವರೆಗೆ ತಾರಾದಾಸನು ಮಾತನಾಡಿರಲಿಲ್ಲ. ಬರೀ ಪೂಜಾರಿಯ ಮುಖದಲ್ಲಷ್ಟೇ ಸಂಕೋಚದೊಡನೆ ಭೀತಿಯ ಚಿಹ್ನ ಮೂಡಿರಲಿಲ್ಲ. ತಾರಾದಾಸನೂ ಮೆತ್ತಗೆ ನುಡಿದ: "ವಿವರವಾಗಿ ಎಲ್ಲವನ್ನೂ ರುಜುವಾತು ಪಡಿಸಿಕೊಳ್ಳಲಿಕ್ಕೆ ಬಹಳ ಹೊತ್ತಾಗುವುದು, ನಂದಿ ಮಹಾಶಯ. ಒಂದು ದಿನ ಸ್ವಲ್ಪ ಬೇಗ ಬಂದು ನೋಡಿಕೊಂಡರಾಗದೆ? ಹೇಗೆ?"

ಸ್ವಲ್ಪ ಹೊತ್ತು ಯೋಚಿಸಿ, "ಒಳ್ಳೇದೊಳ್ಳೇದು, ಹಾಗಾದರೆ ಹಾಗೇ ಮಾಡಿರಿ" ಎಂದು ನುಡಿದು ನಂದಿ ಪೂಜಾರಿಗೆ ಹೇಳಿದ: "ಇಲ್ಲಿ ಕೇಳಿರಿ ಚಕ್ರವರ್ತಿ, ಬರುವ ಶನಿವಾರವೇ ಸಂಕ್ರಾಂತಿ, ಗೊತ್ತಿದೆ ತಾನೆ? ಹದಿನಾರಾಣೆ ಪಂಚಾಯತಿ ಗುಡಿಯ ಸಭಾಮಂಡಲದಲ್ಲಿಯೇ ಕೂಡುವುದು. ಧನಿಯರು ಹಾಜರಿರುವರು. ಕೂಡುವುದಕ್ಕೆ ಉತ್ತಮ ವ್ಯವಸ್ಥೆ ಮಾಡಬೇಕು–"

ಏಕಕೌಡಿ ನಂದಿ ಸ್ವಲ್ಪ ಅಬ್ಬರದಿಂದಲೇ ಮಾತನಾಡುತ್ತಿದ್ದ. ವರಾಂಡದ ಕೆಳಗೆ ಅಂಗಳದಲ್ಲಿ ನೆರೆದ ಬಹು ಜನರು ಕೇಳುತ್ತಿರುವರೆಂಬುದನ್ನರಿತು, ದನಿಯನ್ನು ಇನ್ನಷ್ಟು ಏರಿಸಿ ಪೂಜಾರಿಗೆಂದ: "ಆ ದಿವಸ ಬಹಳ ಗದ್ದಲ

ಕೊಡುವುದು, ಪ್ರಕರಣ ಬಲು ಭಯಂಕರವಿದೆ –" ಬಳಿಕ ಮಂಗಳೆಯ ಮೈ ಪಡವುತ್ತ, "ಏನೇ ಹುಡುಗಿ, ಹೊಸ ಭೈರವಿ, ಈ ಕೆಲಸವನ್ನೆಲ್ಲ ನಿನಗೆ ಮಾಡಲಿಕ್ಕೆ ಬರುತ್ತದಲ್ಲವೆ? – ನಾನು ಬರುತ್ತೇನೆ ಹಾಗಾದರೆ. ಈವೊತ್ತಿ ನಿಂದ ಸ್ವತಃ ಧನಿಯರೇ ಇದನ್ನು ನೋಡಿಕೊಳ್ಳುವವರಿದ್ದಾರೆ. ಪ್ರಕರಣವೇ ಅಷ್ಟು ಬಿಕ್ಕಟ್ಟಿನದಲ್ಲವೆ? ಒಳ್ಳೇ ಜಾಣತನದಿಂದ ಹೋರಾಬೇಡಕಾಗಿದೆ." ಎಂದು ಅವನು ಷೋಡಶಿಯ ಕಡೆ ಅಡ್ಡನೋಟದಿಂದ ನೋಡಿದ.

ಅವಳು ಏಕಚಿತ್ತದಿಂದ ಪೂಜೆಯ ಏರ್ಪಾಡಿನಲ್ಲಿ ತೊಡಗಿರುವಳೆಂದ ರಿತು, ಅವನು ತಾರಾದಾಸನನ್ನು ಕುರಿತು ನಗುತ್ತ ಮಾನಾಡಿದ: "ಏನರಿ ಠಾಕೂರ ಮಹಾಶಯ, ಹೊಸ ಅಭಿಷೇಕದ ಮುಹೂರ್ತ ಎಂದು ಗೊತ್ತಾ ಗಿದೆ ಬಲ್ಲಿರೇನು? ಜನರು ನನ್ನನ್ನು ತುರುಬಿ ಕೇಳಿ ತಲೆತಿನ್ನುತ್ತಿದ್ದಾರೆ. ಉಣ್ಣಲಿಕ್ಕೆ ತಿನ್ನಲಿಕ್ಕೆ ಕೂಡ ಬಿಡಲೊಲ್ಲರು ನನ್ನ."

ತಾರಾದಾಸನು ಬಾಯೊಳಗೇ ಗುಣ ಗುಣ ಎಂದು ಉತ್ತರವಿತ್ತ, ಚೆನ್ನಾಗಿ ಕೇಳಿಸಲಲ್ಲ ಕೂಡ. ಅವರು ಹೊರಬಿದ್ದ ಬಳಿಕ ನೆರೆದವರಲ್ಲನೇಕರು ಅವರ ಹಿಂದೆಯೇ ಹೋದರು. ಅಂಗಳವನ್ನು ದಾಟುವವರೆಗೂ ಅವರ ಮಾತಿನ ಗಜಿಬಿಜಿ ಕೇಳುತ್ತಿತ್ತು. ಆರತಿಗಾಗಿ ಕಾದುಕೊಂಡು ನಿಂತಿದ್ದವರು ಷೋಡಶಿಯ ಆನತ ಮುಖದ ಕಡೆಗೇ ನೋಡುತ್ತಲಿದ್ದರು. ಇದಿರಿಗೆ ಹೋಗಿ ಮಾತನಾಡುವ ಧೈರ್ಯ ಯಾರಿಗೂ ಇಲ್ಲ.

ಯಥಾ ಸಮಯಕ್ಕೆ ಆರತಿಯಾಯಿತು. ಮಂದಿ ಪ್ರಸಾದವನ್ನು ಪಡೆದು ಹೊರಟಿತು. ಗುಡಿಯ ಬಾಗಿಲನ್ನು ಹಾಕುವುದಕ್ಕೆ ಪೇದೆ ಬಂದ. ಆಗ ಷೋಡಶಿ ಪೂಜಾರಿಯನ್ನು ಒತ್ತಟ್ಟಿಗೆ ಕರೆದು, "ಚಕ್ರವರ್ತಿ ಮಹಾ ಶಯ, ದೇವಿಯ ಸೇವಕರು ಯಾರು? ನಾನೋ ಏಕಕೌಡಿ ನಂದಿಯೋ?" ಎಂದು ಕೇಳಿದಳು.

ಚಕ್ರವರ್ತಿ ಲಜ್ಜಿತನಾದ. "ಇದನ್ನು ನೀವು ಕೇಳಲಿಕ್ಕ ಬೇಕೆ? ನೀವು ಭೈರವಿ."

"ಆದರೆ ನೀವು ಈದಿನ ವಿಪರೀತವಾಗಿ ವರ್ತಿಸಿದಿರಿ. ನಾನು ಇರು ವವರೆಗೂ ಈ ಗುಡಿಯ ಆವಾರದೊಳಗೆ ಈ ದಿವಾಣಜಿಗಿಂತ ನನ್ನ ಅಧಿ ಕಾರವೇ ಹೆಚ್ಚೆಂಬುದನ್ನು ನೀವು ಅರಿತಿರಬೇಕು ಏನೆನ್ನುತ್ತೀರಿ?"

“ ಇದರೊಳಗೇನು ಸಂದೇಹವೆ? ಆದರೆ –”

“ ಕೆಲವು ದಿವಸ ಈ ‘ ಆದರೆ ಗೀದರೆ ’ ಬಿಟ್ಟೇಬಿಡಬೇಕು ನೀವು!”

ಈ ತೆರದ ಶಾಂತ ಮಧುರ ವಚನಗಳನ್ನು ಕೇಳಿ ಅಭ್ಯಾಸವಿತ್ತು ೂಜಾರಿಗೆ. ಅವನು ಮೋರೆ ತಗ್ಗಿಸಿಕೊಂಡು ಸುಮ್ಮನಿದ್ದ ; ಷೋಡಶಿಯೂ ಚ್ಚಿಗೆ ಮಾತನಾಡಲಿಲ್ಲ. ಗುಡಿಯ ಬಾಗಿಲಿಗೆ ಕೀಲಿ ಹಾಕಿದ ಬಳಿಕ ೀಲಿಕೈ ಗೊಂಚಲನ್ನು ಇಸಿದುಕೊಂಡು ಸೆರಗಿಗೆ ಕಟ್ಟಿಕೊಂಡು ಅವಳು ೊರಬಿದ್ದಳು.

ಮರುದಿನ ಮುಂಜಾನೆ ಷೋಡಶಿ ಮೈತೊಳೆದುಕೊಂಡು ತಿರುಗಿ ಬರು ದ್ದಾಗ ದೂರದಿಂದಲೇ ನೋಡಿದಳು — ಎಷ್ಟೋ ಜನರು ಅವಳ ಮನೆ ುನ್ನು ಸುತ್ತುಗಟ್ಟಿ ಕುಳಿತಿದ್ದರು. ಅವಳು ಹತ್ತಿರಕ್ಕೆ ಬರುತ್ತಲೆ ಅವರು ವಳಿಗೆ ಸಾಷ್ಟಾಂಗ ನಮಸ್ಕಾರ ಹಾಕಿದರು. ಇಪ್ಪತ್ತು ಮೂವತ್ತು ಕೈಗಳು ವಳ ಪಾದಗಳನ್ನು ಮುಟ್ಟಲು ಮುಂದಾದವು. ಅವಳು ತುಸ ಹಿಂದಕ್ಕೆ ರಿದು ನಗುತ್ತ ನುಡಿದಳು: “ ಎಲಾ, ಪಾದಧೂಳಿ ಏಕೆ ತೆಗೆದುಕೊಳ್ಳುವಿರಿ? ನ್ನ ಪಾದಗಳಲ್ಲಿ ಅಷ್ಟೊಂದು ಧೂಳಿಯಿಲ್ಲ. ಪುನಃ ಸ್ನಾನಮಾಡಿಸಿ ಕೊಳ್ಳ ೇಡಿರಿ ನನ್ನ. ಗುಡಿಗೆ ಹೋಗುವ ಹೊತ್ತಾಗಿದೆ. ಏನು ಹೇಳುವುದು ಕೇಳಿರಿ.”

ಬಂದವರು ಅವಳ ಒಕ್ಕಲು. ಎಲ್ಲರೂ ಕೈ ಜೋಡಿಸಿ ಹೇಳಿದರು: ಅವ್ವಾ, ನಮಗೆ ಉರಲು ಬಂದಿದೆ, ಅಳಿಗಾಲ ಬಂದಿದೆ.”

ಎಲ್ಲರ ಮುಖಗಳೂ ಒಣಗಿ ಹೋಗಿದ್ದವು. ಕೆಲ ಕೆಲವರಂತೂ ಇಡೀ ಾತ್ರಿ ನಿದ್ದೆಯನ್ನೇ ಮಾಡಿರಲಿಕ್ಕಿಲ್ಲ. ಅವರ ಮೋರೆಯ ಕಡೆ ನೋಡಿದೊ ತನೆ ಷೋಡಶಿಯ ಮುಖದಲ್ಲಿಯ ಹಾಸ್ಯವು ಮಾಯವಾಯಿತು. ಮುದಕ ಿಪಿನ ಮಾಹತಿ ಎಲ್ಲರಿಗಿಂತ ಹಿರಿಯ. ಷೋಡಶಿ ಅವನನ್ನು ಕೇಳಿದಳು: ಒಮ್ಮಿಂದೊಮ್ಮೆಲೆ ಅದೆಂಥ ಅಳಿಗಾಲವೋ ವಿಪಿನ?”

ಯಾವನೋ ಮದ್ರಾಸೀ ಸಾಹೇಬ ಬಂದಿದ್ದಾನೆ. ದಕ್ಷಿಣ ದಿಕ್ಕಿನ ಹೊಲಗದ್ದೆಗಳನ್ನೆಲ್ಲ ಅವನು ಜಮೀದಾರರಿಂದ ಕೊಂಡುಕೊಂಡಿದ್ದಾನಂತೆ. ನಮಗಿದ್ದ ಸೊತ್ತೆಂದರೆ ಅದಷ್ಟೇ. ಅದು ಹೋದರೆ ಸತ್ತ ಹಾಗೆಯೇ — ಹೊಟ್ಟೆಗೆ ಬಟ್ಟೆಗೆ ಇಲ್ಲದೆ ಒರಲಿ ಸಾಯುವುದೇ ತಾಯೀ!”

ಹೀಗಾಗುವುದು ಅಸಂಭವವೆಂದು ಎನಿಸಿದುದರಿಂದ ಷೋಡಶಿ ನಕ್ಕು ಬಿಟ್ಟಳು. "ಹಾಗಾದರೆ ಒರಲಿ ಸಾಯಿರಿ ಒಂದುಸಾರೆ. ಹೋಗಿರಿ, ಮನೆಗೆ ಹೋಗಿರಿ. ನೆನ್ನ ಕೆಲಸಕ್ಕೆ ಸುಮ್ಮನೆ ಅಡ್ಡಿ ಮಾಡಬೇಡಿರಿ." ಎಂದಳು.

"ಇಲ್ಲ ತಾಯಿಯಾ, ಎಲ್ಲವೂ ಸಂಪೂರ್ಣ ಸತ್ಯ" ಎಂದೆಲ್ಲರೂ ಒಕ್ಕೊರಲಿನಿಂದ ಹೇಳಿದರು.

ಷೋಡಶಿಗೆ ನಂಬುಗೆಯುಂಟಾಗಲಿಲ್ಲ. ಅವಳೆಂದಳು: "ಇಲ್ಲರೋ ಇಲ್ಲ. ಹಾಗೆ ಹೇಗಾದೀತು? ಯಾರೋ ನಿಮಗೆ ಸುಳ್ಳೇ ಹೇಳಿರಬೇಕು."

ಅವಳಿಗೆ ನಂಬುಗೆ ಹುಟ್ಟದಿರುವುದಕ್ಕೆ ಕಾರಣಗಳೂ ಇದ್ದುವು. ಮೊದಲನೆಯದು: ಆ ಹೊಲಗದ್ದೆಗಳು ಆ ಜನರಿಗೆ ವಂಶಪರಂಪರೆಯಿಂದ ಭೋಗ್ಯವಸ್ತುಗಳಾಗಿದ್ದುವು. ಎರಡನೆಯದು: ಎಲ್ಲವೂ ಬೀಜಗಾವದ ಜಮೀದಾರರಿಗೆ ಸೇರಿದವಲ್ಲ; ಅವುಗಳಲ್ಲಿ ಕೆಲಭಾಗ ಚಂಡಿಯ ಇಸ್ಟೇಟಿಗೆ ಸೇರಿದುದು, ಮಿಕ್ಕದು ರಾಯಮಹಾಶಯನು ಕೊಂಡುದು. ಅಂತೂ ಜೀವಾನಂದನಿಗೊಬ್ಬನಿಗೇ ಮಾರುವ ಅಧಿಕಾರವಿರಲಿಲ್ಲ.

ವಿಪಿನ ಮಾಹತಿ ಮುಂದೆ ಬಂದು ವಿಷಯವನ್ನೆಲ್ಲ ವಿವರಿಸಿದ: ನಿನ್ನೆ ಎಲ್ಲರನ್ನೂ ಚಾವಡಿಗೆ ಕರೆಸಿ ಏಕಕಾಲಕ್ಕೆ ಡಿಯೇ ಈ ಸಂಗತಿಯನ್ನು ಸಾರಿದ. ಆಗ ರಾಯಮಹಾಶಯನೂ ತಾರಾದಾಸನೂ ಅಲ್ಲಿದ್ದರು. ಚಂಡಿಯ ಪರವಾಗಿ ತಾರಾದಾಸನು ವಿಕ್ರಯ ಪತ್ರಕ್ಕೆ ಅಂಕಿತ ಹಾಕಿದ್ದಾನೆ.

ಕೇಳಿ ಷೋಡಶಿ ಆಶ್ಚರ್ಯಚಕಿತಳಾದಳು; ಅಷ್ಟೇ ಸಿಟ್ಟು ಬೆಂಕಿಯಾದಳು. ಅವಳೆಷ್ಟೋ ಹೊತ್ತು ಸ್ತಬ್ಧಳಾಗಿದ್ದಳು. ಕೊನೆಗೆಂದಳು: "ಹೀಗೇನು? ಹಾಗಾದರೆ ನೀವು ಕೋರ್ಟಿನಲ್ಲಿ ದಾವೆ ಮಾಡಿರಿ."

ವಿಪಿನನು ತಲೆಯಲ್ಲಾಡಿಸುತ್ತ ನುಡಿದ: "ಹೀಗೆಂದಾದರೂ ಆಗುವುದುಂಟೇ ತಾಯಿಯಾ? ರಾಜನೊಡನೆ ವಾದ ಹೂಡಲಿಕ್ಕಾಗುತ್ತದೆಯೆ? ಮೊಸಳೆಯ ಹಗೆಯನ್ನು ಕಟ್ಟಿಕೊಂಡು ನೀರೊಳಗೆ ಇರಬಹುದೆ? – ಮನೆಯ ಗೋಡೆಗಳೂ ಉಳಿಯಲಿಕ್ಕಿಲ್ಲ."

"ಎಂದರೇನು? ಪಿತ್ರಾರ್ಜಿತ ಆಸ್ತಿಯನ್ನು ಸುಮ್ಮನೆ ಬಿಟ್ಟುಬಿಡು

ವುದೆ? ವಂಶಪರಂಪರೆಯ ಒಡೆತನವನ್ನು ಪಿಟ್ಟೆನ್ನದೆ ಮಂದಿಯ ಉಡಿಯಲ್ಲಿ ಹಾಕುವುದೇ ? ”

“ ನೀವೆ ನಮ್ಮನ್ನು ದಯೆಮಾಡಿ ಉಳಿಸಿಕೊಳ್ಳಬೇಕು. ನಾವು ಮೊದಲೇ ದೀನದರಿದ್ರರು. ಹೆಂಡಿರು ಮಕ್ಕಳನ್ನು ಕಟ್ಟಿಕೊಂಡು ಮರದ ಕೆಳಗೆ ಕೂಡಬೇಕಾದೀತು ನಾವು ! – ಅಂತೆಯೆ ನಿಮ್ಮ ಪಾದಕ್ಕೆ ಶರಣು ಬಂದೆವು.”

ಷೋಡಶಿ ಒಬ್ಬೊಬ್ಬರಂತೆ ಎಲ್ಲರ ಮುಖಗಳನ್ನೂ ನೋಡಿದಳು. ಯಾರ ಕೈಯಲ್ಲಿಯೂ ಸತ್ತೆಯಿರಲಿಲ್ಲವಾದುದರಿಂದ, ಅವರು ಯಾರ ಕೃಪೆಯಿಂದಲಾದರೂ ಬದುಕಿಕೊಳ್ಳಬೇಕಾಗಿದೆ. ಅದಕ್ಕಾಗಿ ಅವರು ಒಟ್ಟುಗೂಡಿ ಬಂದಿದ್ದರು. ನಿರುಪಾಯರಾದ ನಿಸ್ಸಹಾಯರಾದ ದೀನ ದುರ್ಬಲರ ವ್ಯಾಕುಲ ವಾಣಿಯನ್ನು ಕೇಳಿ ಅವಳ ಹೃದಯದಲ್ಲಿ ಕಿಚ್ಚು ಹೊತ್ತಿತು. ಅವಳೆಂದಳು : “ ನೀವಿಷ್ಟು ಜನ ಗಂಡುಸರು ಒಂದಾಗಿ ಸೇರಿದ್ದೀರಿ, ನಿಮ್ಮ ರಕ್ಷಣೆ ನೀವು ಮಾಡಿಕೊಳ್ಳಲಾರಿರಾ ? ನಾನೊಬ್ಬ ಹೆಂಗುಸು, ನಿಮ್ಮನ್ನುಳಿಸಲು ನಾನು ಬರಬೇಕೆ ? ಸಿಟ್ಟಾಗಬೇಡ ವಿಪಿನ, ನಾನೊಂದು ಮಾತು ಕೇಳುತ್ತೇನೆ – ಭೂಮಿಯ ವಿಚಾರ ಬಿಡು, ಜಮೀದಾರನು ಬಲಾತ್ಕಾರದಿಂದ ನಿಮ್ಮ ತಾಯಿಯನ್ನು ಯಾರಿಗಾದರೂ ಮಾರಿದರೆಂದು ತಿಳಿ, ಅವರು ಅವಳನ್ನು ವಶಪಡಿಸಿಕೊಳ್ಳಲಿಕ್ಕೆ ಬಂದರೆಂದು ತಿಳಿ, ಆಗ ನೀನೇನು ಮಾಡುವೆ ? ”

ಷೋಡಶಿಯ ಈ ಅದ್ಭುತ ಉಪಮೆಯಿಂದ ಅನೇಕರ ಮುಖಗಳಲ್ಲಿ ಅದುಮಿಟ್ಟ ನಗೆಯ ಕುರುಹು ತೇಲಿತು. ಮುದುಕನ ಕಣ್ಣುಗಳಲ್ಲಿ ಮಾತ್ರ ಕಿಡಿಗಳು ಹಾರತೊಡಗಿದವು. ಅವನು ಮನವನ್ನು ಅಂತಿಂತು ಸಾವರಿಸಿಕೊಂಡು ಶಾಂತವಾಗಿ ಮಾತನಾಡಿದ : “ ಅವ್ವಾ, ನಾನು ಮುದುಕನಾದೆ, ನನ್ನ ಮಾತಿರಲಿ. ಇನ್ನೂ ಐದಾರು ಜನ ಹರೆಯದ ಮಕ್ಕಳಿದ್ದಾರೆ. ಅವರು ಸೆರೆಮನೆಗಷ್ಟೇ ಏಕೆ, ಗಲ್ಲಿಗೆ ಹೋಗುವುದಕ್ಕೂ ಅಂಜುವುದಿಲ್ಲ. ಚಂಡಿಯ ಪಾದದಾಣೆಯಾಗಿ ಹೇಳುತ್ತೇನೆ— ”

ಅವನು ಇನ್ನೂ ಮಾತನಾಡುವವನಿದ್ದ. ಷೋಡಶಿ ನಡುವೆಯೇ ನುಡಿದಳು : “ ಇದು ನಿಜವಲ್ಲವೇ ವಿಪಿನ ? ಹಾಗಾದರೆ ಆ ಐದಾರು ಜನ

ಹರಯದ ಮಕ್ಕಳಿಗೆ ಹೇಳು – ಅಜ್ಜಮುತ್ತರ ಕಾಲದಿಂದಲೂ ಈ ಭೂಮಿ ತಾಯಿಯ ಸೇವೆ ಮಾಡುತ್ತ ಬಂದಿದ್ದೀರಿ; ಈ ತಾಯಿ ನಿಮ್ಮ ಮುಪ್ಪಿನ ತಾಯಿಗಿಂತ ಎಳ್ಳಷ್ಟೂ ಕಡಿಮೆಯಲ್ಲ; ಇಬ್ಬರನ್ನೂ ರಕ್ಷಿಸುವುದು ನಿಮ್ಮ ಧರ್ಮ.''

ತತ್‌ಕ್ಷಣ ಎದ್ದುನಿಂತು ಮುದುಕನು ಹೇಳಿದ: ''ಸರಿ ಸರಿ, ತಾಯಿ, ನೀವು ಹೇಳಿದ್ದು ಪೂರಾ ಸತ್ಯ. ಅವಳೇ ನಮ್ಮ ನಿಜವಾದ ತಾಯಿ. ನಾನೀಗಲೇ ಹೋಗಿ ಹುಡುಗರಿಗೆ ಹೇಳುತ್ತೇನೆ. ಆದರೆ ನೀವು ಮಾತ್ರ ನಮ್ಮ ಬೆನ್ನಿಗಿರಬೇಕು.''

'' ನಾನೊಬ್ಬಳೇ ಅಲ್ಲ, ಚಂಡೀಮಾತೆಯೂ ನಿಮ್ಮ ಬೆನ್ನಿಗಿರುತ್ತಾಳೆ. ಈಗ ಪೂಜೆಯ ಹೊತ್ತಾಯಿತು. ನಾನಿನ್ನು ಹೋಗುತ್ತೇನೆ'' ಎಂದು ಷೋಡಶಿ ಶೀಘ್ರಗತಿಯಿಂದ ಗುಡಿಸಲೊಳಗೆ ಹೋದಳು.

ವಿಪಿನನು ಎಲ್ಲರನ್ನೂ ಕರೆದು ಗುಡುಗು ದನಿಯಲ್ಲಿ ಹೇಳಿದ: ''ಕೇಳಿದಿರಲ್ಲವೇ ಹುಡುಗರಿರಾ, ಹಡೆದವಳೊಬ್ಬಳೇ ತಾಯಿಯಲ್ಲ, ಸಾಕಿ ಸಲಹುವವಳೂ ತಾಯಿಯೇ. ಏನಾದದ್ದು ಆಗಲಿ, ನಾವು ಕೈಕಟ್ಟಿಕೊಂಡು ಕೂತು ನಮ್ಮ ತಾಯಿಯನ್ನು ಹೆರವರ ಸೊತ್ತು ಮಾಡತಕ್ಕದ್ದಲ್ಲ.''

## ೧೫

ಚೈತ್ರ ಸಂಕ್ರಾಂತಿ ಸಮೀಪಿಸಿತು. ಚರಕ ಗಾಜನ ಉತ್ಸವಗಳಲ್ಲಿ ಒಕ್ಕಲಿಗರು ಮೈಮರೆತಿದ್ದರು. ಅವರಿಗದು ಒಳ್ಳೇ ದೊಡ್ಡ ಹಬ್ಬ.

ಇಡೀ ತಿಂಗಳು ಸಂನ್ಯಾಸವ್ರತದಿಂದಿದ್ದ ಸ್ತ್ರೀಪುರುಷರ ಕಾಷಾಯ ವಸ್ತ್ರಗಳಿಂದ ಊರಿನ ವಾತಾವರಣವೇ ವೈರಾಗ್ಯಮಯವಾದಂತೆ ಕಾಣುತ್ತಿತ್ತು; 'ಶಿವ ಶಂಭು' ಘೋಷಣೆ ಬೀದಿಬೀದಿಯಲ್ಲಿಯೂ ಅವಿರತವಾಗಿ ಕೇಳುತ್ತಿತ್ತು. ಚಂಡೀ ದೇವಾಲಯದಲ್ಲಿ ಜನರ ಗದ್ದಲಕ್ಕೆ ತೆರಪಿರಲಿಲ್ಲ. ಅಂಗಳಕ್ಕೆ ಹೊಂದಿದ್ದ ಶಿವದೇವಾಲಯದ ಸುತ್ತಲೂ ಅಸಂಖ್ಯ ಭಕ್ತರ ಕೋಲಾಹಲ ನಡೆದಿತ್ತು. ಪೂಜೆ ಕಟ್ಟುವುದು, ಆಟ ನೋಡುವುದು, ಮಾರುವುದು ಕೊಳ್ಳುವುದು ಮೊದಲಾದವುಗಳಿಗಾಗಿ ಯಾತ್ರಿಕರು ಒಂದೇ

ಸವನೆ ಬಂದು ಸೇರುತ್ತಲಿದ್ದರು. ಹೊರಬದಿಯಲ್ಲಿ ಅಂಗಡಿಗಳನ್ನು ಹೂಡು ವುದಕ್ಕಾಗಿ ಅಂಗಡಿಕಾರರಲ್ಲಿ ಗುದುಮುರಿಗೆ ನಡೆದಿತ್ತು. ಸ್ವಲ್ಪ ದಿನಗಳಲ್ಲಿ ಈ ತುದಿಯಿಂದ ಆ ತುದಿಯವರೆಗೆ ಊರಿಗೆ ಊರೇ ಜಾತ್ರೆಯ ಮೂಲಕ ಗದಗಮಿಸಿ ಹೋಗುವುದೆಂದು ದೃಷ್ಟಿಸಿದ ಮಾತ್ರಕ್ಕೇ ಕಂಡುಬರುತ್ತಿತ್ತು.

ಮನಸಿನ ಅಸ್ವಸ್ಥತೆಯನ್ನು ಬದಿಗಿಟ್ಟು ಷೋಡಶಿ ಪ್ರತಿ ವರುಷ ದಂತೆಯೇ ಕಾರ್ಯತತ್ಪರಳಾಗಿದ್ದಳು. ಬೆಳಗಿನಿಂದ ರಾತ್ರಿಯವರೆಗೂ ಎಲ್ಲ ಕಡೆ ನೋಡಿಕೊಳ್ಳಬೇಕಾಗುತ್ತಿತ್ತು. ಅವಳಿಗೆ ಗುಡಿಯನ್ನು ಬಿಟ್ಟು ಕದಲಲಾಗುತ್ತಿರಲಿಲ್ಲ. ಇಂದು ಮೂರನೆಯ ಪ್ರಹರದಲ್ಲಿ ಗುಡಿಯ ಚಾವಡಿ ಕೋಣೆಯಲ್ಲಿ ಕುಳಿತು ತನ್ಮಯತೆಯಿಂದ ಲೆಕ್ಕವನ್ನು ನೋಡುತ್ತಲಿದ್ದಳು. ಸುತ್ತಮುತ್ತಲಿನ ಗಲಾಟೆ ನಿತ್ಯದ ಅಭ್ಯಾಸವಾಗಿ ಅವಳ ಕಿವಿಗೆ ತಗಲು ತ್ತಲೇ ಇರಲಿಲ್ಲವೆನ್ನಬಹುದು. ಒಮ್ಮಿಗಿಲೆ ಎಲ್ಲ ಕಡೆಯೂ ಸ್ತಬ್ಧತೆ ಯುಂಟಾದುದರಿಂದ ಅವಳು ಎಚ್ಚರುಗೊಂಡಳು.

ಮುಖವೆತ್ತಿ ನೋಡಿದಳು. ಜೀವಾನಂದ ಚೌಧರಿ ನಿಂತಿದ್ದ. ಅವನ ಎಡಕ್ಕೆ ಬಲಕ್ಕೆ ಹಿಂದೆ ಅನೇಕ ಪರಿಚಿತ ಅಪರಿಚಿತ ಗೃಹಸ್ಥರಿದ್ದರು. ರಾಯ ಮಹಾಶಯ, ಶಿರೋಮಣಿ ಠಾಕೂರ, ತಾರಾದಾಸ ಚಕ್ರವರ್ತಿ, ಏಕಕೌಡಿ ನಂದಿ, ಊರಿನ ಇನ್ನೂ ಹಲವು ಜನರು ಅಂಗಳದಲ್ಲಿ ಬಂದಿದ್ದರು. ಮಿಕ್ಕ ಮೂರು ನಾಲ್ಕು ಜನರು ಅಪರಿಚಿತರು. ಅವರ ಉಡಿಗೆತೊಡಿಗೆಯ ರೀತಿ ಯಿಂದ ಅವರು ಕಲಕತ್ತೆಯವರಿರಬಹುದು, ಬಾಬೂಜಿಯೊಡನೆ ಬಂದಿರ ಬಹುದು ಎಂದು ಷೋಡಶಿ ಭಾವಿಸಿದಳು. ಹಳ್ಳಿಯೂರಿನ ಬಯಲುಗಾಳಿ ಯನ್ನೂ ನಿಸರ್ಗಸೌಂದರ್ಯವನ್ನೂ ಸವಿಯುವುದು ಅವರ ಆಗಮನದ ಉದ್ದೇಶವಿರಬಹುದು. ಅಲ್ಲದೆ ಮೂರು ನಾಲ್ಕು ಜನ ಭೋಜಪುರೀ ಶಿಪಾಯಿಗಳಿದ್ದರು. ಅವರ ತಲೆಯ ಮೇಲೆ ಬಣ್ಣದ ಮುಂಡಾಸು, ಹೆಗಲ ಮೇಲೆ ದೊಡ್ಡಬಡಿಗೆ ಇದ್ದುವು. ಅವರ ಉಡುಪಿನ ಮೇಲೆ ಮೊನ್ನೆಮೊನ್ನೆ ಯಾದ ಹೋಳಿಹಬ್ಬದ ಕುರುಹುಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಧನಿ ಯರ ಶರೀರ ರಕ್ಷಣೆಗಾಗಿ– ಅವರ ವೈಭವವು ಜನರ ಕಣ್ಣುತುಂಬಲೆಂದು– ಅವರು ಬಂದಿರಬೇಕು.

ಒಂದು ಕ್ಷಣಮಾತ್ರ ಕಣ್ಣೆತ್ತಿನೋಡಿ ಷೋಡಶಿ ಪುನಃ ಲೆಕ್ಕವನ್ನು

ನೋಡತೊಡಗಿದಳು. ಆದರೆ ಆವಳ ಮನಸ್ಸು ಲೆಕ್ಕವನ್ನು ಹಿಡಿಯಲಿಲ್ಲ. ಈ ಮೊದಲೆಂದೂ ಜೀವಾನಂದನು ಅಲ್ಲಿಗೆ ಬಂದಿರಲಿಲ್ಲ. ಅವನು ಆಕಡೆ ಈಕಡೆ ಕೌತುಕದಿಂದ ದಿಟ್ಟಿಸುತ್ತಿದ್ದ. ಹಳೆಯ ತಲೆಮಾರಿನ ಶಿರೋಮಣಿ ತನ್ನ ಅನೇಕ ವರ್ಷಗಳ ಅಭಿಜ್ಞತೆಗನುಸಾರವಾಗಿ, ಎಲ್ಲಿ ಏನಿತ್ತೆಂಬುದನ್ನೂ ಅದರ ಇತಿಹಾಸ ಆಖ್ಯಾಯಿಕೆಗಳನ್ನು ವಿವರಿಸುತ್ತ ಅವನೊಡನೆ ಸಾಗಿದ್ದ.

ಸುಮಾರು ಅರ್ಧಗಂಟೆ ಸುತ್ತಾಡಿ ಆ ಗುಂಪು ಗುಡಿಯ ಬಾಗಿಲಿಗೆ ಬಂದಿತು. ಒಂದೆರಡು ನಿಮಿಷಗಳಲ್ಲಿ ಪೂಜಾರಿ ಬಂದು ಷೋಡಶಿಗೆ ಹೇಳಿದ: “ ತಾಯಿ, ಬಾಬುಗಳು ನಿಮಗೆ ನಮಸ್ಕಾರ ತಿಳಿಸಿದ್ದಾರೆ; ಭೆಟ್ಟಿಯಾಗಲು ವಿನಂತಿ – ಮಾಡಿಕೊಂಡಿದ್ದಾರೆ. ”

ಷೋಡಶಿ ಮುಖವೆತ್ತಿ, ಕೊಂಚ ಯೋಚಿಸಿ, “ ಒಳ್ಳೇದು, ನಡೆಯಿರಿ ಬಂದೆ” ಎಂದು ಅವನೊಂದಿಗೆ ಹೋಗಿ ಜಮಾದಾರನೆದುರಿಗೆ ನಿಂತಳು.

ಜೀವಾನಂದನು ತುಸ ಹೊತ್ತು ಅವಳನ್ನು ನಖಶಿಖಾಂತವಾಗಿ ದಿಟ್ಟಿಸಿ ನೋಡಿದ. ಮತ್ತೆ ಮತ್ತೆ ನೋಡುತ್ತ ಅವನೆಂದ: “ ಎಲ್ಲರ ಬೇಡಿಕೆಗನುಸಾರವಾಗಿ ನಾನು ನಿಮಗೆ ಏನು ಅಪ್ಪಣೆ ಕೊಟ್ಟಿದ್ದೇನೆಂಬುದು ತಿಳಿದಿದೆಯೆ ? ”

“ ಇಲ್ಲ. ” ಷೋಢಶಿ ಗೋಣುಹಾಕಿ ನುಡಿದಳು.

“ ನಿಮ್ಮನ್ನು ಕೆಲಸದಿಂದ ಬಿಡುಗಡೆಮಾಡಲಾಗಿದೆ. ಹೊಸ ಭೈರವಿಯೆಂದು ಗುಡಿಯ ಎಲ್ಲ ವ್ಯವಸ್ಥೆಯ ಭಾರವನ್ನು ಆ ಸಣ್ಣ ಹುಡುಗಿಗೆ ಒಪ್ಪಿಸಲಾಗಿದೆ. ಅವಳ ಅಭಿಷೇಕದ ದಿನ ಇನ್ನೂ ಗೊತ್ತಾಗಿಲ್ಲ. ಶೀಘ್ರದಲ್ಲಿಯೇ ಆಗಬಹುದು. ದೇವಿಯ ಎಲ್ಲ ಜಂಗಮ ಆಸ್ತಿಯನ್ನು ಅವಳಿಗೆ ಒಪ್ಪಿಸಿ, ಪೆಟ್ಟಿಗೆಯ ಕೀಲಿಕೈಯನ್ನು ನಮ್ಮ ದಿವಾಣರ ಕೈಯೊಳಗೆ ಕೊಡಿರಿ. ನೀವೇನಾದರೂ ಹೇಳುವುದಿದೆಯೇ ಈ ವಿಷಯಕ್ಕೆ ? ”

ಮುಂಚಿನಿಂದಲೂ ಷೋಡಶಿ ತನ್ನ ಮನವನ್ನು ಅಂಕೆಯಲ್ಲಿಟ್ಟುಕೊಂಡಿದ್ದಳು. ಅದರಿಂದ ಅವಳ ಮನಃಸ್ಥಿತಿ ಅವಳ ಮಾತಿನಲ್ಲಿ ಬಯಲಿಗೆ ಬರಲಿಲ್ಲ. ಶಾಂತವಾಗಿ ಅವಳೆಂದಳು: “ ನಾನೇನಾದರೂ ಹೇಳಬೇಕೆಂದು ತಮಗೆನಿಸುತ್ತದೆಯೆ ? ”

“ ಇಲ್ಲ. ನಾಡದು ಸಂಜೆಗೆ ಇಲ್ಲಿ ಸಭೆ ಸೇರತಕ್ಕದ್ದಿದೆ. ಆಗ ಬೇಕಾ

ದರೆ ನಿಮ್ಮ ಹೇಳಿಕೆಯನ್ನು ಊರ ಜನರೆದುರಿಗೆ ಹೇಳಿರಿ. ಇನ್ನೊಂದು ಮಾತೆಂದರೆ, ನನ್ನ ವಿರುದ್ಧವಾಗಿ ನನ್ನ ರೈತರನ್ನು ನೀವು ಪ್ರೇರಿಸುತ್ತಿರುವಿರೆಂದು ಕೇಳಿದ್ದೇನೆ, ಅದು ನಿಜವೆ?"

"ಅದೇನೋ ನಾನರಿಯೆ. ನನ್ನ ಕುಳಗಳಿಗೆ ತಮ್ಮಿಂದ ಉಪದ್ರವವಾಗಬಾರದೆಂದು ನಾನು ಪ್ರಯತ್ನಿಸುತ್ತಿದ್ದದ್ದು ಮಾತ್ರ ನಿಜ."

ಜೀವಾನಂದನು ಅವಡುಗಚ್ಚಿ, "ಅದು ಸಾಧ್ಯವೋ?" ಎಂದು ಕೇಳಿದ.

"ಸಾಧ್ಯ ಅಸಾಧ್ಯ ತಾಯಿ ಚಂಡಿಯ ಇಚ್ಛೆ" ಎಂದಳು ಷೋಡಶಿ

"ಅವರಿಗೆ ಸಾವು ಸಮೀಪಿಸಿದೆ."

"ಮನುಷ್ಯನು ಅಮರನಲ್ಲ ಎಂಬುದು ಅವರಿಗೆ ಗೊತ್ತಿದೆ."

ಅಪಮಾನಕರವಾದ ಈ ಮಾತುಗಳಿಂದ ಜಮೀದಾರನೊಡನೆ ಬಂದಿದ್ದವರೆಲ್ಲ ಸಂತಾಪದಿಂದ ತಳಮಳಿಸಿದರು. ಏಕಕೌಡಿಯಂತೂ ಇದನು· ಸಹಿಸುವುದು ಸಾಧ್ಯವಿಲ್ಲವೆಂಬ ಭಾವವನ್ನು ತೋರ್ಪಡಿಸಿದ.

ಕೊಂಚ ತಡೆದು ಜೀವಾನಂದನೆಂದ: "ನಿಮ್ಮ ರೈತರು ಯಾರ್‍ಯಾರೂ ಇಲ್ಲ. ವಿಕ್ರಯ ಪತ್ರವನ್ನು ಬರೆದುಕೊಟ್ಟವರ ರೈತರವರು. ಅವರ ಮೇಲೆ ಯಾರ ಒತ್ತಾಯವೂ ನಡೆಯಲಾರದು."

ಎದುರಿಗೆ ನೋಡಿ ಷೋಡಶಿಯೆಂದಳು: "ಮತ್ತೇನಾದರೂ ಅಪ್ಪಣೆಯುಂಟೇ ತಮ್ಮದು?"

ಅವಳ ತುಟಿಗಳಲ್ಲಿ ಆಡುತ್ತಿದ್ದ ವ್ಯಂಗ್ಯಾರ್ಥವು ಜೀವಾನಂದನಿಗೆ ಗೊತ್ತಾಯಿತು. ಆದುದರಿಂದ ಅವನು ಸಂಕ್ಷೇಪವಾಗಿ ಉತ್ತರವಿತ್ತ:"ಇಲ್ಲ, ಇಷ್ಟೇ!"

"ಇಷ್ಟೇ ತಾನೆ. ಹಾಗಾದರೆ ನನ್ನ ಮಾತು ಕೇಳಿಕೊಳ್ಳಿರಿ."

"ಹೇಳಿರಿ!"

"ನಾಳೆ ದೇವಿಯ ಜಂಗಮ ಆಸ್ತಿಯನ್ನು ತೋರಿಸಿಕೊಡಲಿಕ್ಕೆ ನನಗೆ ಬಿಡುವಿಲ್ಲ; ಮತ್ತು ನಾಡದು ಮಂದಿರದ ಯಾವ ಭಾಗದಲ್ಲಿಯೂ ಸಭೆ ಕೂಡಿಸಲಿಕ್ಕೆ ಸ್ಥಳ ಸಿಕ್ಕಲಾರದು."

ಶಿರೋಮಣಿ ಇದುವರೆಗೆ ಬಹಳ ಸೈರಿಸಿಕೊಂಡಿದ್ದ. ಈಗ ಸಿಟ್ಟಿ

ಅಂಕೆದಪ್ಪಿತು. ಅವನು ಅರ್ಭಟಿಸಿದ: "ಇಲ್ಲ ಇಲ್ಲ, ಸರ್ವಥಾ ಇಲ್ಲ. ಇಂಥ ಆಟ ನಮ್ಮ ಮುಂದೆ ನಡೆಯಲಾರದು. ಹೇಳಿರುತ್ತೇನೆ–"

ಜೀವಾನಂದನ ಹೊರತು, ಕೂಡಿದವರೆಲ್ಲರೂ ಅವನ ಮಾತನ್ನು ಪಡಿನುಡಿದರು. ಜನಾರ್ದನನು ಈವರೆಗೆ ಮಾತನಾಡಿರಲಿಲ್ಲ. ಗಲಭೆ ತಣ್ಣಗಾದ ಬಳಿಕ ಉತ್ತೇಜಿತನಾಗಿ ಅವನೆಂದ: "ಏಕೆ ಬಿಡುವಿಲ್ಲ? ಇಲ್ಲಿ ಸ್ಥಳ ಏಕೆ ಸಿಕ್ಕುವುದಿಲ್ಲ? ಅದನ್ನೊಂದಿಷ್ಟು ಹೇಳುವಿರಾ ಬಾಯಿಯವರೆ?"

ಅವನ ಮಾತಿನ ಕೊನೆಯ ವಕ್ರೋಕ್ತಿ ಷೋಡಶಿಗೆ ಅರ್ಥವಾಯಿ ಆದರೂ ಅವಳು ಅತ್ಯಂತ ಗೌರವದಿಂದಲೇ ಉತ್ತರವಿತ್ತಳು: "ನಿಮಗೆ ಗೊತ್ತೇ ಇದೆ ರಾಯಮಹಾಶಯ, ಗಾಜನದ ಉತ್ಸವ ನಡೆಯುತ್ತಿದೆ. ಪರಿಸೆಯ ಗದ್ದಲ, ಸಂನ್ಯಾಸಿಗಳ ದಟ್ಟಣೆ–ನನಗೆ ಬಿಡುವು ದೊರೆಯು ವುದು ಹೇಗೆ? ಬಂದವರಿಗೆ ತಂಗಲಿಕ್ಕೆ ಬೇರೆ ಸ್ಥಳವಾದರೂ ಎಲ್ಲಿದೆ?"

ಅದು ಸುಳ್ಳಲ್ಲ. ಅವಳು ಹೇಳಿದುದು ವಿಸಂಗತವಲ್ಲವೆಂದು ಜೀವಾ ನಂದನ ಗಮನಕ್ಕೆ ಬಂತು. ಆದರೆ ಅವಳ ಮಾತಿನಲ್ಲಿ ಉಪಹಾಸವಡಗಿದೆ ಯೆಂದು ಕಲ್ಪಿಸಿಕೊಂಡು, ಊರಮಂದಿಯೆಲ್ಲಾ ಏನೋ ನಿಶ್ಚಯಮಾಡಿ ಕೊಂಡು ಒಮ್ಮೆಲೆ ಉದ್ವಿಗ್ನರಾದರು. ಜನಾರ್ದನರಾಯನು ಮೈಮೇಲೆ ಎಚ್ಚರಿಲ್ಲದೆ ಗಟ್ಟಿಯಾಗಿ ಕೂಗಾಡಿದ: "ಆಗಲಿಕ್ಕೇ ಬೇಕು–ನಾನು ಹೇಳು ತ್ತಿದ್ದೇನೆ–ಆಗಲಿಕ್ಕೇ ಬೇಕು!" ಕೂಡಿದವರಲ್ಲಿ ಯಾವನೋ ಒಬ್ಬನು ತೀರ ಹೊಲಸು ಮಾತನ್ನಾಡಿದುದೂ ಕೇಳಿಸಿತು.

ಕೂಡಲೆ ಷೋಡಶಿಯ ಮುಖಮುದ್ರೆ ಅತ್ಯಂತ ಕಠೋರವಾಯಿತು ಗಂಭೀರವಾಯಿತು. ಒಂದು ನಿಮಿಷ ಮಾತ್ರ ಸುಮ್ಮನಿದ್ದು, ವಿಶೇಷತಃ ಜೀವಾನಂದನನ್ನು ಉದ್ದೇಶಿಸಿ, ಅವಳೆಂದಳು: "ನನಗೆ ಜಗಳ ಸೇರುವುದಿಲ್ಲ ಸದ್ಯದ ಮಟ್ಟಿಗಾದರೂ ಹೀಗೆ ಜಗಳಾಡಬಾರದೆಂದು ತಾವು ತಮ್ಮ ಅನು ಯಾಯಿಗಳಿಗೆ ಹೇಳಿರಿ. ನನಗೆ ಪುರಸತ್ತಿಲ್ಲ. ತಮ್ಮ ಕೆಲಸ ತೀರಿದ್ದರೆ ಹೋಗುತ್ತೇನೆ."

ಆ ಮುದ್ರೆ, ಆ ಧ್ವನಿ, ಯಾವ ಪರಿವೆಯೂ ಇಲ್ಲದ ವೃತ್ತಿಯನ್ನು ಕಂಡು ಜೀವಾನಂದನಿಗೆ ಚುರುಕು ಹತ್ತಿದಂತಾಯಿತು. ಅವನ ಧ್ವನಿಯ ಮೇಲೆ ಅದರ ಪರಿಣಾಮವಾಗದಿರಲಿಲ್ಲ. ಅವನೆಂದ: "ನಾನು ಅಪ್ಪಣೆ

ಕೊಟ್ಟಿದ್ದೇನೆ. ನಾಳೆ. ಇದು ಆಗಲಿಕ್ಕೇ ಬೇಕು. ಆಗಿಯೇ ಆಗುವುದು!"

"ಬಲಾತ್ಕಾರದಿಂದಲೇ?"

"ಹೌದು ಹೌದು, ಬಲಾತ್ಕಾರದಿಂದ!"

"ಅನುಕೂಲ ಅನನುಕೂಲ ನೋಡದೆಯೇ?"

"ಹೌದು ಹೌದು, ಅನುಕೂಲ ಅನನುಕೂಲ ನೋಡದೆಯೆ!"

ಷೋಡಶಿ ಮತ್ತೆ ವಾದಿಸಲಿಲ್ಲ. ಹಿಂದುಗಡೆ ನೆರೆದಿದ್ದ ಮಂದಿಯ ಕಡೆ ನೋಡಿ, ಒಬ್ಬನನ್ನು ಸನ್ನೆಯಿಂದ ಕರೆದಳು. ಅವನು ಬಂದೊಡನೆ ಷೋಡಶಿ "ಏಕೆ ಸಾಗರ, ನಿಮ್ಮ ವ್ಯವಸ್ಥೆ ಸರಿಯಾಗಿದೆಯಲ್ಲವೆ?" ಎಂದು ಪ್ರಶ್ನಿಸಿದಳು.

ಸಾಗರನು ನಮ್ರತೆಯಿಂದ ಹೇಳಿದ: "ಹೌದು ತಾಯೀ, ನಿಮ್ಮ ಹರಕೆಯಿಂದ ಯಾವುದಕ್ಕೂ ಕೊರತೆಯಿಲ್ಲ."

"ಸರಿ" ಷೋಡಶಿಯೆಂದಳು: "ನಾಳೆ ದಾಳಿಯಿಡಬೇಕೆಂದು ಜಮೀದಾರರ ಕಡೆಯವರು ಹೊಂಚುಹಾಕಿದ್ದಾರೆ. ನನಗೆ ದಂಗೆ ಬೇಕಾಗಿಲ್ಲ. ಮಹೋತ್ಸವ ಕಾಲದಲ್ಲಿ ರಕ್ತಪಾತವಾಗುವುದು ನನಗೆಷ್ಟೂ ಇಷ್ಟವಿಲ್ಲ. ಆದರೆ ಅಗತ್ಯವೇ ಉಂಟಾದರೆ ಮಾಡಲೇಬೇಕಾಗುವುದು. ಇಕಾ, ಈ ಕೂಡಿದ ಜನರನ್ನೆಲ್ಲಾ ಚೆನ್ನಾಗಿ ನೋಡಿಕೋ, ಇವರಲ್ಲಿ ಯಾರನ್ನೂ ಗುಡಿಯ ಹದ್ದಿನೊಳಗೆ ಬಿಡತಕ್ಕದ್ದಲ್ಲ. ಒಮ್ಮೆಲೆ ಇಕ್ಕರಿಸಬೇಡ, ಕತ್ತು ಹಿಡಿದು ಹೊರಗೆ ತಳ್ಳಿಬಿಡು ಎಂದರಾಯಿತು." ಎಂದೆನ್ನುತ್ತ ಅವರ ಕಡೆಗೆ ಹೊರಳಿಯೂ ನೋಡದೆ ಮೆಲುನಡೆಯಿಂದ ವರಾಂಡವನ್ನು ದಾಟಿ ನಡೆದು ಬಿಟ್ಟಳು.

ಎಲ್ಲ ಜನರೂ ಇಪ್ಪತ್ತು ವರ್ಷಗಳಿಂದ ಷೋಡಶಿಯನ್ನು ಬಲ್ಲರು. ಅವಳ ಸ್ವಭಾವವನ್ನು ಅರಿತುಕೊಳ್ಳುವುದು ಕೊಂಚವೂ ಬಾಕಿ ಉಳಿದಿಲ್ಲವೆಂದು ಅವರಿಗೆನಿಸಿತ್ತು. ಆದರಿಂದು ಅವಳ ಸ್ವಭಾವದ ಅಸಾಧಾರಣ ರೂಪವನ್ನು ಮೊಟ್ಟಮೊದಲು ಕಂಡು, ಧನಿಯಿಂದ ಪೇದೆಯತನಕ ಎಲ್ಲರೂ ಕಲ್ಲುಗೊಂಬೆಯಂತೆ ಸ್ತಬ್ಧರಾಗಿ ನಿಂತುಬಿಟ್ಟರು.

# ೧೬

ಚೈತ್ರಸಂಕ್ರಾಂತಿ ಗೊಂದಲವಿಲ್ಲದೆ ಕೊನೆಗೊಂಡಿತು. ಶಿವಶಂಭುವಿನ ಗಾಜನ ಉತ್ಸವವೂ ನಿರ್ವಿಘ್ನವಾಗಿ ನೆರವೇರಿತು. ಯಾತ್ರಿಕರ ಮೇಳೆಗಳು ಮನೆಗೆ ಮರಳಿದುವು. ಅಂಗಡಿಕಾರರು ಅಂಗಡಿಯ ಗುಡಾರಗಳನ್ನು ಕೀಳಲಾರಂಭಿಸಿದರು. ವಾತಾವರಣದಲ್ಲಿ ಹರಡಿದ ಎಣ್ಣೆಯ ಕಮರು ಕಡಿಮೆಯಾಯಿತು. ಕಾವಿ ಬಟ್ಟೆಗಳನ್ನು ಧರಿಸಿ ಕೂಗಾಡುತ್ತಿದ್ದವರು ಅವನ್ನು ಕಳೆದು ಮನೆಗೆಲಸಗಳಲ್ಲಿ ತೊಡಗಿದರು.

ನಿತ್ಯದಂತೆ ಸುಖದುಃಖಗಳ ಪರಿಚಿತಪ್ರವಾಹದೊಳಗೆ ಎಲ್ಲ ಜನರು ಈಸಾಡುತ್ತಿದ್ದರು. ಚಂಡೀಗಡದ ಭೈರವಿಗೆ ಮಾತ್ರ ಅಕಸ್ಮಾತ್ ಬಂದ ಬೇನೆಯ ಪ್ರಭಾವದಿಂದ ಕೆಟ್ಟ ಅವಳ ಮುಖದ ಕಳೆ ತಿರುಗಿ ಬರಲಿಲ್ಲ. ಒಂದು ಬಗೆಯ ಭೀತಿ ಅವಳ ಮನದಲ್ಲಿ ಧಗಧಗಿಸುತ್ತಿತ್ತು.

ಉತ್ಸವದ ದಿನಗಳು ನಿರಾಂತಕವಾಗಿ ಕಳೆಯುವವೆಂದು ಷೋಡಶಿಗೆ ನಿಸಿತ್ತು. ದೇವಿಯ ಕೋಪದ ಹೊಣೆಯನ್ನು ಯಾರು ಹೊತ್ತರೂ ಹೊರಬಹುದು, ಜನಾರ್ದನರಾಯನು ಅದರಲ್ಲಿ ಮುಂದಾಳಾಗಲಾರನೆಂದು ಅವಳು ಖಂಡಿತ ಅರಿತಿದ್ದಳು. ಆದರಿನ್ನುಮೇಲೆ ?

ಆದರೆ ಯಾವ ಗೊಂದಲವೂ ಎದ್ದಿಲ್ಲವೆಂಬಂತೆ, ಇದ್ದುದೆಲ್ಲವೂ ನಿರಸನವಾಗಿಯೆಂಬಂತೆ ದಿನಗಳು ಗಡಿಬಿಡಿಯಿಲ್ಲದೆ ಸಾಗಿದ್ದುವು.

ನಿಜವಾಗಿ ನೋಡಿದರೆ ಯಾವುದೂ ನಿರಸನವಾಗಿರಲಿಲ್ಲ. ಒಳಗಿಂದೊಳಗೆ ಸಪ್ಪುಳಿಲ್ಲದೆ ಏನೋ ಸಂಚು ನಡೆದಿದೆಯೆಂಬ ಸಂದೇಹವು ಷೋಡಶಿಯ ಮನಸಿನಲ್ಲಿಯೇ ಅಲ್ಲ, ಎಲ್ಲರ ಮನಸಿನಲ್ಲಿಯೂ ಜಾಗೃತವಾಗಿತ್ತು. ಹೊಲಗದ್ದೆಗಳ ವಿಷಯದಲ್ಲಿ ಅವಳು ಒಕ್ಕಲಿಗರಿಗೆ ನಿರೋಪ ಕಳಿಸಿದ್ದಳು. ದೇವಿಯ ಸಂಧ್ಯಾರತಿಯಾದ ಬಳಿಕ ಗುಡಿಯ ಅಂಗಳದಲ್ಲಿ ಅವರು ಒಂದುಗೂಡುವವರಿದ್ದರು. ಆರತಿಯಾಯಿತು. ರಾತ್ರಿ ಎಂಟರಮೇಲಾಯಿತು, ಎಂಟು ಹೋಗಿ ಒಂಬತ್ತಾಯಿತು, ಒಂಬತ್ತು ಹೋಗಿ ಹತ್ತಾಗುತ್ತ ಬಂದರೂ ಯಾರ ಸುಳಿವೂ ಇಲ್ಲ. ನಿತ್ಯವೂ ನಮಸ್ಕಾರ ಮಾಡಲು ಬರುತ್ತಿದ್ದವರು ಬಂದು ಪ್ರಸಾದ ತೆಗೆದುಕೊಂಡು ಒಬ್ಬೊಬ್ಬರೇ ತೆರಳಿದರು. ಪೂಜಾರಿ

ಹೊರಟ. ಆಳು ಬಾಗಿಲಿಕ್ಕಲೇನೆಂದು ಕೇಳಬಂದ. ಇನ್ನು ಹಾದಿ ಕಾಯುವುದರಲ್ಲಿ ಅರ್ಥವಿಲ್ಲ. ಏನೋ ತೊಂದರೆಯುಂಟಾಗಿದ್ದೀತು, ಸಂದೇಹವಿಲ್ಲ. ಆದರೆ ಏನಾಯಿತೆಂಬುದು ತಿಳಿಯದೆ ಷೋಡಶಿಯ ಮನಸ್ಸು ಉದ್ವಿಗ್ನವಾಯಿತು.

ಅಷ್ಟರಲ್ಲಿ ಸಾಗರನು ಸಾವಕಾಶವಾಗಿ ಬಂದ. ಅವನೊಬ್ಬನೇ ಬಂದುದನ್ನು ಕಂಡು ವಿಹ್ವಲಳಾಗಿ ಷೋಡಶಿ ಕೇಳಿದಳು: "ಇಷ್ಟೇಕೆ ತಡ ವಾಯಿತೋ ಸಾಗರ? ಉಳಿದವರು ಯಾರೂ ಏಕೆ ಬರಲಿಲ್ಲ? ಅವರಿಗೆ ನಿರೋಪ ಮುಟ್ಟಲಿಲ್ಲವೇನು?"

"ನಿರೋಪ ಮುಟ್ಟದೇನು! ನಾನೇ ಮನೆಮನೆಗೆ ಹೋಗಿ ಹೇಳಿ ಬಂದಿದ್ದೇನೆ."

"ಹಾಗಾದರೇನಾಯಿತು?" ಷೋಡಶಿ ಸಂದೇಹದಿಂದ ಪ್ರಶ್ನಿಸಿದಳು.

"ಈವೊತ್ತು ಯಾರಿಗೂ ಪುರಸತ್ತಾಗಲಿಲ್ಲವೆಂದು ಕಾಣುತ್ತದೆ. ಧನಿಯರ ಚಾವಡಿಯಲ್ಲಿ ಹದಿನಾರಾಣೆ ಪಂಚಾಯಿತಿಯಿತ್ತು. ಅದು ಇದೇ ಮುಗಿಯಿತು. ಪಂಚು, ಅನಾಥ, ರಾಮುಮಯ, ಅಕ್ಷೆಮಾಯಿತಿ ಮತ್ತು ನಮ್ಮ ಕಕ್ಕ – ಈ ಐದು ಜನರ ಬಗ್ಗೆ ಪಂಚೇತಿ ನಡೆದಿತ್ತು. ಯಾರಿಗೂ ಕೂಡಲಿಕ್ಕೆ ಬಾಕು ಕೊಟ್ಟದ್ದಿಲ್ಲ, ಅವ್ವಾ. ನಾನು ಕೂಡ ಬೇವಿನ ಮರಕ್ಕೆ ಆತುಕೊಂಡು ನಿಂತಿದ್ದ."

"ನೀನು ಮಾಡಿದ್ದು ಸರಿಯಾಗಲಿಲ್ಲ, ಸಾಗರ. ಯಾರಾದರೂ ನೋಡಿದ್ದರೆ? —"

ಆ ಮಾತಿಗೆ ಸಾಗರನು ನಕ್ಕು, "ಒಬ್ಬನೇ ಹೋಗಿದ್ದಿಲ್ಲ ಅವ್ವಾ. ಇದೂ ಇತ್ತು ಸಂಗತಿ—" ಎಂದು ನುಡಿದು ಎಡಗೈಯೊಳಗಿನ ಗಟ್ಟಿ ಮುಟ್ಟಾದ ದೊಣ್ಣೆಯನ್ನು ಒಳ್ಳೇ ಪ್ರೀತಿಯಿಂದ ತಿರುವುತ್ತ ಬಲಗೈಗ ತೆಗೆದುಕೊಂಡ.

"ಆದರೆ ಎಲ್ಲರೂ ಇಲ್ಲಿ ಸೇರಬೇಕೆಂದು ಗೊತ್ತಾಗಿತ್ತಲ್ಲವೆ?"

"ಗೊತ್ತಾಗಿತ್ತು ಹೌದು. ಧನಿಯರ ಭೋಜಪುರಿ ಪೇದೆಗೂ ಇಲ್ಲಿ ಬರಬೇಕೆಂದು ಮನಸಿತ್ತು. ಆದರೆ ಊರಿನ ಯಾವ ಜನರೂ ಬರಲಿಕೆ

ಸಿದ್ಧರಿರಲಿಲ್ಲ. ಇಲ್ಲಿಯವರೇ ಅಲ್ಲವೇ ಅವರು? ಈ ಕಕ್ಕಮಕ್ಕಳನ್ನು ಚೆನ್ನಾಗಿ ಬಲ್ಲರಲ್ಲವೇ ಅವರು ? "

ಕೊಂಚ ಸಮಯ ಸುಮ್ಮನಿದ್ದು ಷೋಡಶಿ ಕೇಳಿದಳು ; " ಸಭೆಯೊಳಗೆ ಏನಾಯಿತು ? "

" ಎಲ್ಲವೂ ಸರಿಯಾಗಿಯೇ ಆಯಿತು. ಮಂಗಲೆಯಿದ್ದಾಳಲ್ಲ, ಆ ಹುಡುಗಿಯ ಅಭಿಷೇಕ ಗೊತ್ತಾಯಿತು. ಆದರೂ ನೀವೂ ಚಿಂತೆಮಾಡುವ ಕಾರಣವಿಲ್ಲ. ಕಾಶೀವಾಸ ಮಾಡುವುದಕ್ಕಾಗಿ ನೀವು ಬೇಡಿಕೊಂಡರೆ ನೂರು ರೂಪಾಯಿ ಕೊಡುವರು.

"ಬೇಡುವುದು ಯಾರನ್ನು ? "

"ಧನಿಯರನ್ನು ಕಾಣುತ್ತದೆ."

"ಮತ್ತೆ ಉಳಿದವರದು ಏನಾಯಿತು ? ಹೊಲ ಗದ್ದೆಗಳನ್ನು ಕಳೆದುಕೊಂಡವರ ಗತಿ ಏನಾಯಿತು ? "

" ಅದರ ಯೋಚನೆ ಬೇಡ. ಮೊದಲಿನಿಂದ ನಡೆದು ಬಂದದ್ದರಲ್ಲಿ ಏನೂ ಹೆಚ್ಚುಕಡಿಮೆ ಆಗುವುದಿಲ್ಲ. ಆ ದಿವಸ ರೈತರು ಐದುಸಾವಿರ ಕಾಣಿಕೆ ಕೊಟ್ಟಿರಲಿಲ್ಲವೇ, ಅದರ ಕಾಗದದ ದಸ್ತೈವಜು ರಾಯಮಹಾಶಯರ ಪೆಟ್ಟಿಗೆ ಬಿಟ್ಟು ಮತ್ತೆಲ್ಲಿಗೂ ಹೋಗಿರಲಿಲ್ಲ. ಇಲ್ಲದಿದ್ದರೆ ಅವರು ಹೇಳಿದೊಡನೆ ಎಲ್ಲ ಜನರು ಗುಂಪುಗುಂಪಾಗಿ ಎಲ್ಲಿ ಹೋಗುತ್ತಿದ್ದರು ? "

ಷೋಡಶಿ ಮತ್ತೆ ಕೆಲಹೊತ್ತು ಮೌನವಾಗಿದ್ದಳು. ಬಳಿಕ " ಮತ್ತೆ ನೀವು ? " ಎಂದು ಕೇಳಿದಳು.

" ನಾವು ಕಕ್ಕ ಮಕ್ಕಳು ಹೌದೇ ? " ಎಂದು ಕೊಂಚ ನಕ್ಕು ಸಾಗರನೆಂದ: " ಆ ವ್ಯವಸ್ಥೆಯನ್ನು ಅವರು ಮಾಡಿದ್ದಾರೆ. ಈ ಏಳು ದಿವಸ ಅವರೇನೂ ಸುಮ್ಮನೆ ಕೂತಿಲ್ಲ. ಪಕ್ಕಾ ಜನ—ಫೌಜುದಾರ ಪೋಲಿಸರೆಲ್ಲಾ ಅವರ ಕೈಯೊಳಗೆ— ಹತ್ತು ಹದಿನೈದು ಹರಿದಾರಿಯೊಳಗೆ ಎಲ್ಲಿಯಾದರೂ ಕಳವು ಸುಲಿಗೆ ಆಗುವ ಹಾದಿ ನೋಡುತ್ತಿದ್ದಾರೆ ಅವರು. ನಾವು ಎರಡು ಮೂರು ವರುಷ ಶಿಕ್ಷೆ ಭೋಗಿಸಿ ಬಂದದ್ದು ನಿಮಗೆ ಗೊತ್ತೇ ಇದೆಯಲ್ಲ ತಾಯೀ. ಈ ಸಲ ಹತ್ತು ವರ್ಷ ನಿಶ್ಚಯವೆಂದು ತಿಳಿಯಲಿಕ್ಕೆ ಅಡ್ಡಿಯಿಲ್ಲ. ಅಷ್ಟು ಸಮಯದಲ್ಲಿ ಕಕ್ಕ ಜೇಲಿನಲ್ಲಿಯೇ ಸಾಯಬಹುದು. ನಾನಿನ್ನೂ ಹುಡುಗ,

ತಿರುಗಿ ಊರು ಕಾಣುವ ಆಶೆಯಿದೆ" ಎಂದು ನುಡಿದು ಸಾಗರನು ನಗತೊಡಗಿದ.

ಷೋಡಶಿ ಗಾಬರಿಯಿಂದ ಕೇಳಿದಳು: "ನಿಜವಾಗಿ ಹೇಳುತ್ತೀಯೇನೊ? ಅದು ಸತ್ಯವೆಂದು ನಿನಗೆನಿಸುವುದೆ?"

"ಎನಿಸುವುದೆ? ಎದುರಿಗೇ ನಿಚ್ಚಳ ಕಾಣುತ್ತದೆ. ನಮ್ಮನ್ನು ಸೆರೆಮನೆಯ ಹೊರಗಿಡುವುದು ಅಸಂಭವ ತಾಯಿ. ಹೆಚ್ಚು ಸಮಯವಿಲ್ಲ—ಒಂದೆರಡು ತಿಂಗಳೊಳಗೇ—ನೀವೇ ಕಣ್ಣಿಂದ ನೋಡುವಿರಿ.

"ಇಂದು ಅಲ್ಲಿ ಕೂಡಿದ್ದ ಜನರ ಗತಿಯೇನು?"

"ಅವರ ಅವಸ್ಥೆ ನಮಗಿಂತ ಭಯಂಕರ. ಸೆರೆಮನೆಯಲ್ಲಿ ಊಟ ಹಾಕುತ್ತಾರೆ. ಅದು ಹೇಗೇ ಇರಲಿ, ಅಲ್ಲಿ ನಾವು ಎರಡು ತುತ್ತು ಉಣ್ಣುತ್ತೇವೆ. ಇಲ್ಲಿ ಅವರಿಗೆ ಅದೂ ಸಿಕ್ಕುವುದಿಲ್ಲ. ದಾವೆ ಹೂಡಿ ಡಿಕ್ರಿ ಪಡಯುವುದೇ ತಡ, ರಾಯಮಹಾಶಯರ ಕಾಲ್ಕರೆಗೆ ಹಣೆ ತಿಕ್ಕಿ ಮುಕ್ಕು ಕಾಳು ದೊರಕಿಸಿದರೆ ಅವರ ಭಾಗ್ಯವೆನ್ನಬೇಕು. ಇಲ್ಲದಿದ್ದರೆ ಆಸಾಮದ ಚಾ ತೋಟವಿದೆ. ಇಲ್ಲಿ ನೋಡಿರಿ ತಾಯಿ, ನೆರೆ ಹಾವಳಿಯ ಹಿಂದಿನ ಸ್ಥಿತಿ ನೆನಪಿದೆಯೆ? ಎಷ್ಟು ಬಾವುರೀ ಕುಟುಂಬ ಇರುತ್ತಿದ್ದವು ಇಲ್ಲಿ! ಅವರಿಗೆ ಹೊಲಮನೆ ಎಲ್ಲ ಇದ್ದವು. ಈಗ ಅವರು ಎಲ್ಲಿದ್ದಾರೆ? ಎಷ್ಟೋ ಮಂದಿ ಕಲ್ಲಿದ್ದಲು ಅಗಿಯಲಿಕ್ಕೆ ಹೋದರು; ಎಷ್ಟೋ ಮಂದಿಯನ್ನು ಚಾ ತೋಟಕ್ಕೆ ಹಿಡಿದೊಯ್ದರು. ನಾನು ಸಣ್ಣವನಿದ್ದಾಗ ನೋಡುತ್ತಿದ್ದೆ—ಅವರಿಗೆ ಮನೆ ಇತ್ತು, ಹೊಲ ಇತ್ತು, ಎತ್ತುಗಳಿದ್ದವು, ರಂಟೆ ಕುಂಟೆಗಳಿದ್ದವು, ಪ್ರತಿಯೊಬ್ಬರ ಮನೆಯಲ್ಲಿಯೂ ಬೊಗಸೆ ಕಾಳು ಇರುತ್ತಿದ್ದವು. ಅವುಗಳಲ್ಲಿ ಅರ್ಧ ಹೋಯಿತು ಏಕಕೌಡಿಯವರಿಗೆ, ಅರ್ಧ ಹೋಯಿತು ರಾಯಮಹಾಶಯರಿಗೆ!"

ಷೋಡಶಿ ಸ್ತಬ್ಧವಾಗಿ ನಿಂತಿದ್ದಳು. ಎಲ್ಲ ಸಂಗತಿಗಳ ಮಹತ್ವವು ಅವಳಿಗೆ ಸ್ಪಷ್ಟವಾಗಿ ಕಾಣುತ್ತಲಿತ್ತು. ಆ ದಿವಸ ಒಕ್ಕಟ್ಟಿನಿಂದ ಅವಳ ಆಶ್ರಯವನ್ನು ಹೊಂದಲು ಬಂದಿದ್ದವರೇ ಈಗ ನಿರುಪಾಯರಾಗಿ ಬಲಾತ್ಕಾರಕಾರಿಗಳ ಕಣ್ಸನ್ನೆಯಿಂದ ಅವಳ ವಿರುದ್ಧವೇ ಸಂಚುಮಾಡಲು ಒಟ್ಟಾಗುತ್ತಲಿದ್ದರು. ಅಂದಿನ ಅವರ ಸಂಕಲ್ಪವು ಎಲ್ಲಿಯೋ ಮಾಯ

ವಾಗಿತ್ತು. ಈ ದೀನ-ದರಿದ್ರ-ದುರ್ಬಲ ಜನರನ್ನು ಬಲಶಾಲಿಗಳಾದ, ಧನಿಕರಾದ ಆದರೆ ಧರ್ಮಶೂನ್ಯರಾದ ಜನರ ಅತ್ಯಾಚಾರಗಳಿಂದ ಉಳಿಸು ವುದಕ್ಕೆ ಉಪಾಯವುಂಟೆ? ಅವರ ದೂರನ್ನು ಯಾರೂ ಕೇಳುತ್ತಿರಲಿಲ್ಲ. ಅವರಿಗೆ ಯಾರೂ ನ್ಯಾಯದಾನ ಮಾಡುವವರಿರಲಿಲ್ಲ. ದೇವರು ಕೂಡ ಅವರ ಕೂಗಿಗೆ ಕಿವಿಗೊಡುತ್ತಿರಲಿಲ್ಲ. ಈ ಪ್ರಪಂಚದಲ್ಲಿ ಅನಾದಿಕಾಲ ದಿಂದಲೂ ಹೀಗೆಯೇ ಸುಸೂತ್ರವಾಗಿ ನಡೆದುಬಂದಿದೆ. ಎಲ್ಲರೂ ಒಬ್ಬ ಬಲವಾನ್ ಮನುಷ್ಯನ ಪಾದ ತಳದಲ್ಲಿ ತಮ್ಮ ವಿವೇಕ-ಧರ್ಮ-ಮನುಷ್ಯತ್ವ ಗಳನ್ನು ಸಂಪೂರ್ಣವಾಗಿ ಸಮರ್ಪಿಸಿ, ಹೇಗಾದರೂ ಬದುಕಿಕೊಳ್ಳುವುದಕ್ಕೆ ಆಶ್ವಾಸನವನ್ನು ಪಡೆದು ಮನೆಗೆ ಬಂದಿದ್ದರು. ಅವರ ಲಜ್ಜೆ, ಅವರ ದೈನ್ಯ, ಅವರ ಯಾತನೆ ಎಷ್ಟು ಅತಿಶಯವಾಗಿದ್ದರೂ, ದೃಷ್ಟಿ ಹರಿದಷ್ಟು ದೂರ ನೋಡಿದರೂ ಆ ದುಃಖಿಗಳಿಗೆ ಇಂತಹ ಜೀವನದ ಹೊರತು ಇಡೀ ಪೃಥ್ವಿ ಯಲ್ಲಿ ಬೇರೆ ಯಾವುದೂ ಕಾಣುತ್ತಿರಲಿಲ್ಲ. ಇಷ್ಟು ಜನರ ಮನುಷ್ಯತ್ವ ವನ್ನು ಮಾರುಗೊಂಡಿರುವ ಅನ್ಯಾಯವನ್ನು ತಡೆಯುವ ಶಕ್ತಿ ಜಗತ್ತಿನಲ್ಲಿ ಯಾವ ಕಾಯದೆಯಲ್ಲಿಯೂ ಇಲ್ಲವೇ ಇಲ್ಲವೆ? ಈ ಸಾಗರ ಸರದಾರನು ದೀನರ ಪಕ್ಷ ಕಟ್ಟಿಕೊಂಡು ಬಂದಿದ್ದ. ದುರ್ಬಲ ಮನುಷ್ಯನು ಇಷ್ಟೊಂದು ಸ್ಪರ್ಧೆಯನ್ನು ತೋರಿಸಿದುದಕ್ಕೆ ಅವನಿಗಾಗಿ ಸಾವಿರಪಟ್ಟು ಶಿಕ್ಷೆ ಕಾದು ಕೊಂಡಿರಬೇಕೆ? ಅದರಿಂದ ಬಿಡುಗಡೆ ಹೊಂದಲು ಅವನಿಗೆ ಹಾದಿ ಸಿಕ್ಕ ಬಾರದೆ? ಎಂತಹ ದುರ್ಭಾಗ್ಯವಿದು!

“ಯಾರಿಂದ ತಿಳಿಯಿತು, ಸಾಗರ? ಷೋಡಶಿ ಒಮ್ಮೆಲೆ ಪ್ರಶ್ನಿಸಿದಳು.

“ಸ್ವತಃ ಧನಿಯರ ಬಾಯಿಂದ?”

“ಹಾಗಾದರೆ ಎಲ್ಲವೂ ಅವರ ಕಾರಸ್ಥಾನವೆ?”

“ಯಾರಿಗೆ ಗೊತ್ತು ತಾಯಿ, ರಾಯಮಹಾಶಯರ ಕೈಯೂ ಇದ್ದೀತು ಇದರೊಳಗೆ.”

ಕ್ಷಣ ಸುಮ್ಮನಿದ್ದು ಷೋಡಶಿಯೆಂದಳು: “ಸಾಗರ, ಈ ಜಮೀ ದಾರರು ನನ್ನ ಮೇಲೇಕೆ ಕೈಮಾಡುವುದಿಲ್ಲ ಗೊತ್ತೇ. ಈ ಮುರಕ ಮನೆ ಯೊಳಗೆ ನಾನೊಬ್ಬಳೇ ಇರುತ್ತೇನೆ, ಮನಸು ಬಂದರೆ ಸಹಜವಾಗಿಯೇ ನನ್ನನ್ನು ಧೂಳಡರಿಸಬಹುದು.”

ಸಾಗರನು ನಕ್ಕು ನುಡಿದ: "ಯಾರೆನ್ನುತ್ತಾರೆ ನೀವೊಬ್ಬರೇ ಎಂದು? ತನ್ನ ಪರಿಚಯ ತಾನೇ ಮಾಡಿಕೊಡಬಾರದೆಂದು ನಮ್ಮ ಗುರುಗಳ ಅಪ್ಪಣೆ ಯಿದೆ ತಾಯಿ—" ಮಾತನಾಡುತ್ತಿದ್ದಂತೆ ಸ್ವಾಭಾವಿಕವಾಗಿಯೇ ಅವನ ಬಲಿಷ್ಠವಾದ ಬಲಗೈಯ ಐದು ಬೆರಳುಗಳೂ ಬಡಿಗೆಯ ಮೇಲಾಡಿದವು. ಅವನೆಂದ: "ಚಂಡಿಯ ಗುಡಿಯಲ್ಲಿ ಹದಿನಾರಾಣೆ ಪಂಚಾಯತಿ ಕೂಡ ಲಿಲ್ಲ. ಯಾವ ಭಯದಿಂದ ಚಾವಡಿಯಲ್ಲಿ ಪಂಚಾಯತಿ ಸೇರಿತೋ ಆ ಭಯದಿಂದಲೇ ನಿಮ್ಮ ಅಕ್ಕಪಕ್ಕದಲ್ಲಿ ಸುಳಿಯಲಿಕ್ಕೆ ಯಾರಿಗೂ ಎದೆಯಾ ಗುವುದಿಲ್ಲ. ಹರಿಹರ ಸರದಾರನ ಮಗ ಸಾಗರ; ಹತ್ತಿಪ್ಪತ್ತು ಹರದಾರಿ ಯೊಳಗೆ ಎಲ್ಲರಿಗೂ ಅವನ ಹೆಸರು ಗೊತ್ತಿದೆ. ಸುತ್ತಲಿನ ಐವತ್ತು ಊರು ಗಳಲ್ಲಿ ಒಬ್ಬ ಮನುಷ್ಯನೂ ನಿಮ್ಮ ಮೇಲೆ ಕೈ ಮಾಡಲಾರ ತಾಯಿ."

ಷೋಡಶಿಯ ಕಣ್ಣು ಕಾವೇರಿತು. "ಇದು ಸತ್ಯವೇ ಸಾಗರ?" ಎಂದಳು.

ಕೈಯೊಳಗಿನ ದೊಣ್ಣೆಯನ್ನು ಅವಳ ಅಡಿಯ ಬಳಿ ಇರಿಸಿ, ಬಾಗಿ ನಿಂತು ಸಾಗರನು ಹೇಳಿದ: "ನಾನಿಷ್ಟೇ ಬಯಸುವುದು ತಾಯಿ,– ನನ್ನನ್ನು ಇಷ್ಟೇ ಹರಸಿರಿ,– ನನ್ನ ಮಾತು ಸುಳ್ಳಾಗಬೇಡ."

ಷೋಡಶಿಯ ನೋಟವು ಒಮ್ಮೆಲೆ ತಣ್ಣಗಾಯಿತು; ಕ್ಷಣಮಾತ್ರವೇ. ಪುನಃ ಪ್ರಜ್ವಲಿಸಿತು. "ಒಳ್ಳೇದು ಸಾಗರ, ನಿಮಗೆ ಜೀವದ ಹಂಗಿಲ್ಲ ವೆನ್ನುತ್ತಾರೆ, ಅದು ನಿಜವೆ?" ಎಂದು ಕೇಳಿದಳು.

ಸಾಗರನು ನಕ್ಕು ನುಡಿದ: "ಅದು ಸುಳ್ಳೆಂದು ನಾನೆಂದೂ ಹೇಳ ಲಾರೆ ತಾಯಿ."

"ಬರೀ ಜೀವ ಕೊಡುವುದು,– ಯಾರ ಪ್ರಾಣವನ್ನಾದರೂ ತೆಗೆದು ಕೊಳ್ಳಲಿಕ್ಕೆ ಬರುವುದಿಲ್ಲವೆ?"

"ಒಮ್ಮೆ ಅಪ್ಪಣೆ ಕೊಡಿರಿ ತಾಯಿ; ಇಂದು ರಾತ್ರಿಯೇ ಪರೀಕ್ಷೆ ಯಾಗಲಿ—" ಎಂದು ಸಾಗರನು ಷೋಡಶಿಯ ಕಡೆ ದಿಟ್ಟಿಸಿ ನೋಡಿದ. ಅವಳಿಗೆ ಆಶ್ಚರ್ಯ, ಅಷ್ಟೇ ಭಯ; ಅದರಿಂದವಳು ಸ್ತಬ್ಧಳಾದಳು.

ಸಾಗರನು ಮಾತನಾಡಿದ. ಅವನ ಸ್ವರವು ಶಾಂತವಿದ್ದುದೇನೋ ನಿಜ; ಕಠೋರವಾಗಿತ್ತು, ಸದ್ಗದಿತವಾಗಿತ್ತು. ಅವನೆಂದ: "ಇನ್ನೂ

ರಾತ್ರಿ ಬಹಳವಾಗಿಲ್ಲ. ಎಷ್ಟೋ ಸಮಯ ಇದೆ. ಗುಡಿಯ ಕದ ಇನ್ನೂ ತೆರೆದಿದೆ– ನಿಮ್ಮ ಅಪ್ಪಣೆ ನನಗೆ ಕೇಳಿಸಿದೆ ತಾಯಿ. ಪಾಪವನ್ನೊಮ್ಮೆ ತೀರಿಸಿ ಬಿಡುತ್ತೇನೆ. ಸಾಗರ ಸರದಾರ ಸುಮ್ಮನೆ ಜಂಬ ಕೊಚ್ಚುವವನಲ್ಲ ಎಂಬುದು ನಾಳೆಯೆ ತಿಳಿದೀತು ನಿಮಗೆ."

ಹಿರಿಯರ ಕಾಲದಿಂದಲೂ ಇರುತ್ತಿದ್ದ ಅವನ ಬಡಿಗೆ ಇನ್ನೂ ಷೋಡಶಿಯ ಕಾಲ ಹತ್ತಿರ ಬಿದ್ದಿದ್ದಿತು. ಅವನು ಚಟ್ಟನೆ ಬಗ್ಗಿ ಅದನ್ನು ತೆಗೆದುಕೊಂಡು ನೀಟಾಗಿ ನಿಂತ. ಷೋಡಶಿ ಮಾತನಾಡಲು ಹವಣಿಸಿದಳು. ಅವಳ ತುಟಿಗಳು ಥರಥರ ನಡುಗತೊಡಗಿದವು. ಬೇಡವೆನ್ನಲು ಅವಳ ನಾಲಗೆ ಏಳಲಿಲ್ಲ. ಅಕಸ್ಮಾತ್ ಅವಳ ಹೃದಯವು ಭೂಕಂಪದಲ್ಲಿಯ ಸಮುದ್ರದಂತೆ ಅಲ್ಲೋಲಕಲ್ಲೋಲವಾಯಿತು. ಮತ್ತು—

ಮತ್ತು ನೂತನ ಸ್ವರೂಪವನ್ನು ತಳೆದ ಸಾಗರನ ವಿಘಾತಕ ಮೂರ್ತಿ ಅವಳ ಕಣ್ಣೆದುರಿನಿಂದ ಮಾಯವಾಯಿತು. ಅವನು ಏನೇನೋ ಎನ್ನುತ್ತ ಹೋದ. ಅದು ಅವಳ ಕಿವಿಯೊಳಗೆ ತಲುಪಲಿಲ್ಲ. ಸಾಷ್ಟಾಂಗ ನಮಸ್ಕಾರ ಮಾಡಿದ, ಹೊರಟು ಹೋದ– ಇಷ್ಟೇ ಗೊತ್ತವಳಿಗೆ.

## ೧೭

"ಇನ್ನು ಬಾಗಿಲು ಹಾಕಲೇ ತಾಯಿ?" ಎಂದು ಆಳು ಕೂಗಿ ಕೇಳಿದ.

"ಹಾಕು."

ಬಾಲ್ಯದಿಂದಲೂ ಅವಳ ಜೀವನವು ಯಥೇಷ್ಟ ಸುಖದ್ದೂ ಆಗಿರಲಿಲ್ಲ, ಅವಳ ದಿನಗಳು ಸರಾಗವಾಗಿಯೂ ಕಳೆದಿರಲಿಲ್ಲ. ವಿಶೇಷವಾಗಿ, ಬೀಜಗಾವದ ಜಮೀದಾರನು ಯಾವ ಕೆಟ್ಟ ಗಳಿಗೆಯಲ್ಲಿ ಚಂಡೀಗಡದೊಳಗೆ ಕಾಲು ಹಾಕಿದನೋ ಏನೋ– ಅಂದಿನಿಂದ ಅವಳ ಜೀವನವನ್ನು ಉಪದ್ರವದ ಕೆಟ್ಟ ಗಾಳಿ ಕ್ಷಣಕ್ಷಣಕ್ಕೂ ಆವರಿಸತೊಡಗಿತ್ತು. ಅದರಿಂದ ಅವಳ ಜೀವನವು ಯಾವಾಗಲೂ ಅಶಾಂತವಾಗಿದ್ದಿತು. ಆದರೂ ಈ ಅಥಾಂಗ ಸಮುದ್ರದೆದುರು ಅವಳು ಗೋಷ್ಪದ ಪ್ರಮಾಣಳಾಗಿರುವಾಗ,

ಸಾಗರನು ಇದೀಗ ಅವಳನ್ನು ಎಚ್ಚರಿಸಿ ಹೋದ. ಒಂದು ರಾತ್ರಿಯಲ್ಲಿಯೇ ಇಂತಹ ಭಯಂಕರ ಕೆಲಸವನ್ನು ಜರುಗಿಸುವ ಬುದ್ಧಿ ತನಗುಂಟಾದೀತೆಂಬುದನ್ನು ಅವಳು ನಂಬದಾದಳು. ಹತ್ಯೆ–ರಕ್ತಪಾತ–ಹಿಂಸೆಗಳ ಎಲ್ಲ ಬಗೆಯ ಶಸ್ತ್ರಾಸ್ತ್ರ ಸಾಧನಗಳಿಂದ ಹಗಲಿರುಳೂ ಸಜ್ಜಿತನಾಗಿರುವವನ ಅಂತ್ಯ–ಅವನು ಎಷ್ಟೇ ಮಹಾಪಾಪಿ ಇರಲಿ – ಸಾಗರ ಸರದಾರನ ಬಡಿಗೆ ಮಾತ್ರದಿಂದ ಆದೀತೆಂದು ಅವಳೆಂದೂ ಭಾವಿಸಿರಲಿಲ್ಲ. ಯಾವ ಶಕ್ತಿಯ ಎದುರು, ಅಘಟಿತ ಘಟನೆಗಳೆಲ್ಲ ದೈವಬಲದಿಂದ ಸೋತುಹೋಗುವವೋ, ಆ ಶಕ್ತಿಯ ಭಯದಿಂದ ಅವಳ ಹೃದಯಕ್ಕೆ ವಜ್ರಾಘಾತವಾಯಿತು.

ಆಳು ಗುಡಿಯ ಬಾಗಿಲಿಗೆ ಕೀಲಿ ಹಾಕಿ ಕೈಗೊಂಚಲನ್ನು ಅವಳಿಗೆ ಕೊಡುತ್ತ, "ರಾತ್ರಿ ಬಹಳ ಆಗಿದೆ, ಜೋಡಿಗೆ ಬರಲೇ ತಾಯಿ?" ಎಂದು ಕೇಳಿದ.

"ಎಲ್ಲಿಗೊ?" ವಿಮನಸ್ಕಳಾಗಿ ಷೋಡಶಿ ಕೇಳಿದಳು.

"ನಿಮ್ಮನ್ನು ಮನೆಗೆ ಕಳಿಸಲಿಕ್ಕೆ."

"ಕಳಿಸಲಿಕ್ಕೇ? ಬೇಡ ಬೇಡ" ಎಂದು ಷೋಡಶಿ ನಿದ್ದೆಯಲ್ಲಿ ನಡೆಯುವವರಂತೆ ಮೆಲ್ಲಮೆಲ್ಲನೆ ಹೊರಹೊರಟಳು. ದಿನಾಲು ಈ ಹಾದಿಯಿಂದ ಹೋಗುತ್ತಿದ್ದಾಗ ಜೋಕೆಯಿಂದಿರಬೇಕೆಂಬುದು ಅವಳ ಸ್ಮರಣೆಯಲ್ಲಿಯೇ ಇರುತ್ತಿರಲಿಲ್ಲ. ಈಗ ಕತ್ತಲೆ ಕಗ್ಗಾಗಿತ್ತು. ಆದರೆ ಕಳೆದ ಕೆಲ ದಿನಗಳಂತೆ ಮೋಡ ಮುಸುಕಿರಲಿಲ್ಲ. ಕೃಷ್ಣಪಕ್ಷದ ದ್ವಾದಶಿಯ ನಿರ್ಮಲವಾದ ಆಕಾಶವು ಯಾವ ಕಾಣದ ಕೊಳದಲ್ಲಿಯೋ ಇದೀಗ ಮಿಂದು ಎದ್ದಂತೆ ಇದ್ದಿತು,—ಮೈಯ ಒದ್ದೆ ಕೂಡ ಆರಿರಲಿಲ್ಲ ಇನ್ನೂ.

ಗುಡಿಯಿಂದ ಷೋಡಶಿಯ ಗುಡಿಸಲು ದೂರವಿಲ್ಲ. ಅಂಕುಡೊಂಕಾದ, ಧೂಳಿಮಯವಾದ ಕಾಲುಹಾದಿಯ ಗೆರೆಯ ಮೇಲೆ ಆಕಾಶದ ಅಸಂಖ್ಯ ತಾರೆಗಳ ಸ್ನಿಗ್ಧಪ್ರಕಾಶವು ಜಾರಿಬಿದ್ದಂತೆ ಕಾಣುತ್ತಿತ್ತು. ಮುಸುಕಾಗಿ ಕಾಣಿಸುವ ದಾರಿಯಲ್ಲಿ ಮೆಲ್ಲನೆ ಅಡಿಯಿಡುತ್ತ ಅವಳು ತನ್ನ ಗುಡಿಸಲಿಗೆ ಹೋದಳು.

ಚೈತ್ರಮಾಸದ ಕೊನೆಯ ಆ ದಿನಗಳಲ್ಲಿ ಊರೊಳಗೆ ಕೂಲಿಯಾಳು ಸಿಕ್ಕುವುದು ಕಠಿಣವಾಗಿತ್ತು. ಆದರೂ ಅವಳ ಭಕ್ತರಾದ ರೈತರು ಅಂಗಳದ

ನಾಲ್ಕೂ ಬದಿಗಳಲ್ಲಿ ಭದ್ರವಾದ ಬಿದಿರಿನ ಬೇಲಿಯನ್ನು ಕಟ್ಟಿಕೊಟ್ಟಿದ್ದರು. ಮುರುಕ ಗುಡಿಸಲಿನ ಗೋಡೆಗಳನ್ನು ಸರಿಪಡಿಸಿ ಚಪ್ಪರವನ್ನೂ ಹೊಚ್ಚಿ ಕೊಡುವ ಏರ್ಪಾಡು ಮಾಡಿದ್ದರು. ಹಳೆಯ ತೊಲೆ ಜಂತಿಗಳು ಹೋಗಿ ಹೊಸವು ಬಂದಿದ್ದವು. ಗೋಡೆಗಳನ್ನು ಮೆತ್ತಿ ಸಾರಿಸಿ ಗುಡಿಸಲನ್ನು ಮನುಷ್ಯರಿರುವುದಕ್ಕೆ ತಕ್ಕುದಾಗಿ ಮಾಡಿದ್ದರು.

ಷೋಡಶಿ ಬಾಗಿಲು ತೆರೆದು ಒಳಗೆ ಹೋಗಿ ನಡುಮನೆಯೊಳಗೆ ನಿಂತಳು. ದೀವಿಗೆ ಹಚ್ಚಿ ಅಲ್ಲಿಯೇ ನೆಲದ ಮೇಲೆ ಕುಳಿತುಕೊಂಡಳು. ನಿತ್ಯದಂತೆ ಇಂದೂ ಎಷ್ಟೋ ಕೆಲಸಗಳು ಆಗದುಳಿದಿದ್ದವು. ರಾತ್ರಿ ಅಡಿಗೆ ಮಾಡುವ ಅಗತ್ಯವಿರಲಿಲ್ಲ ನಿಜ.—ದಿನಾಲು ದೇವಿಯ ಪ್ರಸಾದವನ್ನು ಸೆರಗಿನಲ್ಲಿ ಕಟ್ಟಿಕೊಂಡು ಬಂದಿರುತ್ತಿದ್ದಳು, ಅದರಿಂದಲೇ ಕೆಲಸ ಸಾಗುತ್ತಿತ್ತು.—ಆಹ್ನಿಕ ಮೊದಲಾದವನ್ನೆಲ್ಲ ಗುಡಿಯಲ್ಲಿ ಜನರೆದುರಿಗೆ ಮಾಡದೆ ಮನೆಗೆ ಬಂದ ಮೇಲೆ ಮಾಡುವುದು ಪರಿಪಾಠ. ಕೊನೆಗೆ ಬಹಳ ರಾತ್ರಿಯ ವರೆಗೆ ಧರ್ಮಗ್ರಂಥಗಳ ಪಠನವಾಗಬೇಕು.

ಇದವಳ ನಿತ್ಯನಿಯಮ. ದಿನದ ರೂಢಿಯಂತೆ ಇಂದೂ ಅವನ್ನು ಪೂರಯಿಸಲು ಅವಳ ಮನಸು ಆತುರಪಡುತ್ತಿದ್ದಿತು. ಆದರೆ ಕಾಲುಗಳು ಮಾತ್ರ ಏನು ಮಾಡಿದರೂ ಎದ್ದು ನಿಲ್ಲಲು ಒಲ್ಲೆವೆಂದವು.

ಬಾಗಿಲು ತೆರೆದೇ ಇತ್ತು. ಅವಳಿಗೆ ಇಕ್ಕಬೇಕೆಂದು ಎನಿಸುತ್ತಿತ್ತು. ಆದರೂ ದೀಪವೆದುರಿಗೆ ಜಡಭರತಳಂತೆ ಕುಳಿತುಬಿಟ್ಟಿದ್ದಳು.

ಅವಳು ಸಾಗರನ ಮಾತುಗಳನ್ನೇ ಯೋಚಿಸುತ್ತಿದ್ದಳು. ಗುಡಿಯ ನೆರೆಯಲ್ಲಿಯೇ ಇರುತ್ತಿದ್ದ, ನಿರ್ಭೀತರಾದ ದರಿದ್ರ ಒಕ್ಕಲಿಗರನ್ನು ಷೋಡಶಿ ಚಿಕ್ಕಂದಿನಿಂದಲೂ ಪ್ರೀತಿಯಿಂದ ನೋಡುತ್ತಿದ್ದಳು. ಅವಳು ದೊಡ್ಡವಳಾದ ಬಳಿಕ ಅವರ ದುಃಖ ದುರ್ದೆಶೆಗಳು ಹೆಚ್ಚುತ್ತಿರುವುದನ್ನು ನೋಡಿ ನೋಡಿದಂತೆ, ಅವಳ ಮಮತೆ ತಾಯ್ಗರುಳಿನಂತೆ ದೃಢವಾಗುತ್ತ ಗಂಭೀರವಾಗುತ್ತ ಬಂದಿತ್ತು.

ಚಂಡೀಗಡದ ಮೂಲ ನಿವಾಸಿಗಳು ಅವರೇ ಎಂದು ಅವಳ ತಿಳಿವಳಿಕೆ. ಅವರೊಂದು ಕಾಲದಲ್ಲಿ ಇಲ್ಲಿಯ ಗೃಹಸ್ಥ ಕೃಷಿಕರಾಗಿರಬೇಕು. ಇಂದು ಅವರು ಬಹುಮಟ್ಟಿಗೆಲ್ಲರೂ ಹೊಲಮನೆಗಳಿಲ್ಲದೆ ಇತರರ ಹೊಲಗಳಲ್ಲಿ

ಕೂಲಿ ಕುಂಬಳಿ ಮಾಡಿ ಬಹು ಕಷ್ಟದಿಂದ ಹೊಟ್ಟೆ ಹೊರೆಯುತ್ತಿದ್ದರು. ಕೆಲವೊಂದು ಭೂಮಿಗಳ ಒಡೆತನವು ಜನಾರ್ದನರಾಯರಿಗೆ ಸೇರಿದ್ದಿತು, ಕೆಲವನ್ನು ಜಮಾದಾರನ ಅಧಿಕಾರಿ ನುಂಗಿ ಅರಗಿಸಿಕೊಂಡಿದ್ದರು. ಹಿಂದಿನ ಭೈರವಿಗಳ ಕಾಲದಲ್ಲಿ ದೇವಿಯ ಎಷ್ಟೋ ಭೂಮಿಗಳು ಗುಡಿಯ ಖಾಸಗಿ ಸೊತ್ತಾಗಿದ್ದವು. ಅವನ್ನು ಭೈರವಿಯ ಮುಖಾಂತರವಾಗಿ ವರುಷ ವರುಷವೂ ಲಾವಣಿಗೆ ಕೊಡಲಾಗುತ್ತಿತ್ತು. ಅದರಿಂದ ಒಕ್ಕಲಿಗರೊಳಗೆ ಯಾವಾಗಲೂ ಜಗಳವಾಗುತ್ತಿದ್ದವು.

ಹಾಗೆ ನೋಡಿದರೆ ಇದು ದೊಡ್ಡ ಲಾಭದ ವಿಷಯವಾಗಿರಲಿಲ್ಲ. ಸರಿಯಾಗಿ ನೋಡಿಕೊಳ್ಳದಿದ್ದುದಕ್ಕೆ, ತಕ್ಕ ವ್ಯವಸ್ಥೆ ಇಲ್ಲದುದಕ್ಕೆ ಕ್ವಚಿತ್ತಾಗಿ ಒಕ್ಕಲಿಗರು ಲಾವಣಿಯನ್ನು ಮುಳುಗಿಸುತ್ತಿದ್ದರು. ಸಿಂತ ಹಣ ಕ್ವಚಿತ್ತಾಗಿ ವಸೂಲಾದರೂ ಅಪವ್ಯಯವಾಗುತ್ತಿತ್ತು.

ಈಗ ಆರೇಳು ವರ್ಷಗಳಿಂದ ಆ ಎಲ್ಲ ಭೂಮಿಗಳನ್ನು ಫಕೀರ ಸಾಹೇಬನ ಸಲಹೆಯ ಮೇರೆಗೆ ಹೊಲಮನೆ ಇಲ್ಲದ ಆ ರೈತರಿಗೆ ನಿರ್ದಿಷ್ಟ ಲಾವಣಿಯಿಂದ ಕೊಡಲಾಗುತ್ತಿದೆ. ಜನಾರ್ದನರಾಯನೊಡನೆಯೂ ಏಕಗೌಡಿಯೊಡನೆಯೂ ಜಗಳ ಆರಂಭವಾದುದು ಇದಕ್ಕಾಗಿಯೆ. ಅದೇ ಜಗಳವು ಬೆಳೆಯುತ್ತ, ಅದಕ್ಕೆ ಹಲವು ಕೊಂಬೆರೆಂಬೆಗಳೊಡೆಯುತ್ತ ಇಂದು ದೊಡ್ಡದೊಂದು ಕಾಂಡವಾಗಿ ಕೂತಿದೆ. ನಾಗರನೂ ಹರಿಹರ ಸರದಾರನೂ ಆಗ ನೆರೆಮನೆಯಲ್ಲಿದ್ದರು. ಬಿಡುಗಡೆಯಾಗುತ್ತಲೇ ಅವರು ಗುಡಿಗೆ ಬಂದು ಕೈಜೋಡಿಸಿ ಷೋಡಶಿಗೆಂದರು: ನಮ್ಮ--ಕಕ್ಕಮಕ್ಕಳ--ಬಗ್ಗೆ ಏನೂ ವ್ಯವಸ್ಥೆಯಾಗಲಾರದೆ? ನಾವೂ ಹೀಗೆಯೇ ಆಗುತ್ತಿರಬೇಕೆ?"

ಷೋಡಶಿ ಸಿಟ್ಟಿನಿಂದ "ತಿರುಗುತ್ತಿರುವುದೇಕೋ ಹರಿಹರ? ಸೆರೆ ಮನೆಯೊಳಗೆ ಅಷ್ಟು ಕೋಣೆ ಕಟ್ಟಿರುವುದು ಯಾರಿಗೆ?" ಎಂದಿದ್ದಳು.

ನಾಗರನು ಯಾವ ಮಾತನ್ನೂ ಆಡಲಿಲ್ಲ. ಮುಖ ತಿರುಗಿಸಿ ಕತ್ತೆತ್ತಿ ಕೊಂಡು ನಿಂತಿದ್ದ. ಅವನ ಮುದುಕ ಕಕ್ಕ ಹಾಗೆಯೇ ಕೈ ಜೋಡಿಸಿ ಕೊಂಡಿದ್ದು "ತಾಯಿ, ನಾವು ಕೆಟ್ಟ ಮಕ್ಕಳು ನಿಜ. ಆದರೆ ತಾಯಿ ಕೆಟ್ಟವಳಾದಾಳೇ? ನಮಗೆ ಏನಾದರೂ ಹಾದಿ ತೋರಿಸಿರಿ" ಎಂದ.

ಅದಕ್ಕೆ ಷೋಡಶಿ ಮೃದುವಾಗಿ ಹೇಳಿದ್ದಳು: "ನೀನು ಹೇಳುವುದು

ಸರಿ, ಹರಿಹರ. – ನೀನೀಗ ಮುದುಕನಾಗಿದ್ದೀ. ಆದರೆ ನಿನ್ನ ಮಗ ಅಭಿಮಾನದಿಂದ ಮೋರೆ ತಿರುವಿಕೊಂಡು ನಿಂತಿದ್ದಾನೆ. ತಪ್ಪನ್ನು ಒಪ್ಪಿಕೊಳ್ಳುವುದಿಲ್ಲ ಕೂಡ. ಅವನು ತಣ್ಣಗಾಗುವ ಆಶೆಯಿದೆಯೆ?"

ತನ್ನ ಸರ್ವಾಂಗವನ್ನೂ ನೋಡಿಕೊಂಡು ಹರಿಹರನು "ನಾನು ಮುದುಕನಾದೆನೆ? ಕೂದಲು ಮಾತ್ರ ಹಣ್ಣಾಗಿವೆ" ಎಂದು ನುಡಿದು ಮುಸಿನಕ್ಕ. ಕೂಡಲೆ ಸಾಗರನ ಮುಖದಲ್ಲಿಯೂ ನಗೆಯ ಅಲೆಗಳೆದ್ದವು. ಕಕ್ಕ ಮಕ್ಕಳು ಒಬ್ಬರೊಬ್ಬರ ಕಡೆ ನೋಡಿದರು. ಆ ನಿಃಶಬ್ದ ಭಾಷೆಯಲ್ಲಿ ಬಹುಶಃ ಅವರು 'ಇದೇ ಸರಿ. ಈ ನಿನ್ನ ಹಳೆಯ ಮುಂಗೈಯಲ್ಲಿ ಸತು ವೆಷ್ಟಿದೆಯೆಂಬುದು ಎರಡನೆಯವರಿಗೆ ತಿಳಿಯದಿದ್ದುದೇ ಲೇಸು. ಇಂತಹ ಸಂದರ್ಭದಲ್ಲಿ ವಿನೋದದಿಂದ ಹೌದೆನ್ನುವುದರಲ್ಲಿಯೇ ಶೋಭೆಯುಂಟು' ಎಂದುಕೊಂಡಿರಬಹುದು.

"ಅಭಿಮಾನವಲ್ಲ ತಾಯಿಾ ಅದು, ಸಿಟ್ಟು. ಸಿಟ್ಟಾಗಲಿಕ್ಕೇ ಅಧಿಕಾರವಿದೆ ಅವನಿಗೆ. ಸಾಗರ ಎಂದೂ ದರೋಡೆ ಹಾಕಿದವನಲ್ಲ" ಎಂದು ಮುದುಕನು ಹೇಳಿದ.

ಷೋಡಶಿ ಆಶ್ಚರ್ಯಚಕಿತಳಾಗಿ "ಹಾಗಾದರೆ ಕಾರಣವಿಲ್ಲದೆ ಇವನು ಶಿಕ್ಷೆ ಭೋಗಿಸಬೇಕಾಯಿತೆ? ಎಲ್ಲರೂ ಆಡುತ್ತಿರುವುದು ಸತ್ಯವಲ್ಲವೆಂದು ನನಗೆ ಮನವರಿಕೆ ಮಾಡಬೇಕೆನ್ನುತ್ತೀಯಾ ಹರಿಹರ?" ಎಂದಿದ್ದಳು.

ಅವಳ ಅವಿಶ್ವಾಸದ ಕಂಠಸ್ವರವು ಮುದುಕನ ಮನಸಿಗೆ ಚುಚ್ಚಿತು. ಏನೋ ಉತ್ತರ ಕೊಡಬೇಕೆನ್ನುತ್ತಿದ್ದ. ಅಷ್ಟರೊಳಗೆ ಮಗನು ಆ ಕಡೆ ಮುಖ ಹೊರಳಿಸಿ ಹೇಳಿದ: "ಸುಮ್ಮನೆ ಹಾಕಿಯಾಡಿ ಏನುಪಯೋಗ ತಾಯಿಾ? ನೀವು ಸಭ್ಯಜನ; ಕೀಳುಜನರ ಮಾತಿನಲ್ಲಿ ನಿಮಗೆ ನಂಬಿಕೆ ಇರುವುದಿಲ್ಲ. ಸಭ್ಯಜನರು ನಮ್ಮ ಸರ್ವಸ್ವವನ್ನು ಅಪಹರಿಸಿದ್ದು ನಿಜವಾಗಿಯೂ ಸಾಲ ಮುಟ್ಟಿಸಿಕೊಳ್ಳಲಿಕ್ಕೆ! ನಮ್ಮನ್ನು ಸೆರೆಮನೆಗೆ ಕಳಿಸಿದ್ದೂ ನಿಜವಾಗಿ ಸತ್ಯಸಾಕ್ಷ್ಯಗಳ ಬಲದಿಂದ! ಜಜ್ ಸಾಹೇಬರ ಕೋರ್ಟನಿಂದ ತಾಯಿ ಚಂಡಿಯ ತನಕ ಕೀಳುಜನರ ಮಾತನ್ನು ನಂಬುವವರು ಯಾರೂ ಇರಬಾರದೇ ತಾಯಿಾ? ನಡೆ ಕಕ್ಕ, ನಾವು ಮನೆಗೆ ಹೋಗುವ"

ಎಂದವನೆ ಬಾಗಿ ಭೈರವಿಯ ಪಾದಗಳನ್ನು ಮುಟ್ಟಿ ಅವನು ಹೊರಟು ಹೋದ. ಹರಿಹರನೂ ನಮಸ್ಕಾರ ಮಾಡಿ ಲಜ್ಜಿತ ಸ್ವರದಲ್ಲಿ "ಸಿಟ್ಟಾಗ ಬೇಡಿರಿ ತಾಯಿ. ಈ ಹುಡುಗ ಬಲು ಹುಂಬ. ಸಹಸಾ ಯಾವ ಮಾತನ್ನೂ ತಡೆದುಕೊಳ್ಳಲಾಗುವುದಿಲ್ಲ ಇವನಿಗೆ!" ಎಂದು ಮಗನ ಹಿಂದೆ ಹಿಂದೆಯೇ ನಡೆದ.

ಆಗಲೊಲ್ಲರೇಕೆ ಅಸ್ಪೃಶ್ಯರು! ಆಗಲೊಲ್ಲರೇಕೆ ದರೋಡೆಗಾರರು! ಹತವೀರ್ಯ, ಅಪಮಾನಿತ, ಅಧಃಪತಿತ ಬಂಗಾಲದ ಆ ಇಬ್ಬರು ಶಕ್ತಿ ಶಾಲಿ ನಿರ್ಭಯ ಪುರುಷರ ಕಡೆ ಷೋಡಶಿ ನೋಡುತ್ತ ನಿಂತಿದ್ದಳು.

ಮರುದಿನ ಮುಂಜಾನೆ ಸಾಗರನನ್ನು ಕರೆಯಿಸಿ "ಅಯ್ಯಾ, ನಿನ್ನೆ ನನ್ನ ತಪ್ಪಾಯಿತು. ಇನ್ನೂ ನನ್ನ ಹತ್ತು ಹದಿನೈದು ಬಿಘೆ ಭೂಮಿ ಉಳಿದಿದೆ. ನೀವಿಬ್ಬರೂ ಕಕ್ಕ ಮಕ್ಕಳು ಅದನ್ನು ಹುದುವಿನಿಂದ ಮಾಡಿಕೊಳ್ಳಿರಿ. ನಿಮಗೆ ತಿಳಿದಷ್ಟು ಲಾವಣಿ ಕೊಡಿರಿ. ಆದರೆ ಇನ್ನು ಮುಂದೆ ಕೆಟ್ಟಹಾದಿ ಹಿಡಿಯಬಾರದೆಂದು ನನ್ನ ಕರಾರು" ಎಂದು ಹೇಳಿದ್ದಳು.

ಅಂದಿನಿಂದ ಹರಿಹರ ಸಾಗರರು ಅವಳ ದಾಸರಾದರು. ಅವಳು ಎಲ್ಲಿದ್ದರಲ್ಲಿ, ಯಾವುದೇ ಪರಿಸ್ಥಿತಿಯಲ್ಲಿ ಅವರು ನೆರಳಿನಂತೆ ಅವಳ ಹಿಂದೆ ಹಿಂದೆ ಇರುತ್ತಿದ್ದರು. ಬಂದುದಕ್ಕೆ ಎದೆಗೊಟ್ಟು ಅವಳನ್ನು ಕಾಯುತ್ತಿದ್ದರು. ಮುರಕ ಮನೆ, ಅವಳ ಜೊತೆಗೆ ಯಾರೂ ಇಲ್ಲ, ನಾಲ್ಕು ಕಡೆಗಳಿಂದಲೂ ವಿಪತ್ತು; ಆದರೂ ಅವಳ ಉಗುರನ್ನು ಕೊಂಕಿಸುವ ಧೈರ್ಯ ಯಾರಿಗೂ ಇಲ್ಲ. ಎಲ್ಲರೂ ಏಕೆ ಅಂಜುತ್ತಿರುವರೆಂಬುದು ಅವಳಿಗೆ ಗೊತ್ತು.

ಇಂದು ಅದೇ ಸಾಗರನ ಸ್ವರೂಪವನ್ನು ಕಣ್ಣಾರೆ ಕಂಡಾಗಿನಿಂಥ ಅವಳ ಆ ಆತ್ಮವಿಶ್ವಾಸವು ಹಾರಿಹೋಯಿತು. ಅವನು ದರೋಡೆ ಹಾಕುತ್ತಿದ್ದನೇ ಇಲ್ಲವೇ ಎಂಬುದನ್ನು ಹೇಳುವುದು ಕಠಿನ. ಆದರೆ ಪ್ರಸಂಗ ಬಂದರೆ ಅವನು ಏನನ್ನೂ ಮಾಡುವವ. ಅಂತಹ ಕೆಲಸಕ್ಕೆ ಸಲ್ಲುವ ಸಲಕರಣೆಗಳೆಲ್ಲವೂ ಅವನ ಹತ್ತಿರ ಇದ್ದವು. ಕರೆದೊಡನೆ ಅವನು ಅಣಿಯಾಗಿ ಬಂದು ನಿಲ್ಲುತ್ತಿದ್ದ – ಕೊಂಚವೂ ಸಂದೇಹವಿಲ್ಲ.

ಹರಿದ ಕಾಗದದ ತುಂಡೊಂದು ಬಿದ್ದಿತ್ತು. ಸ್ವಾಭಾವಿಕವಾಗಿ

ಅವಳು ಅದನ್ನು ಕೈಗೆ ತೆಗೆದುಕೊಂಡಳು. ದೀಪದ ಬೆಳಕಿನಲ್ಲಿ ಅವಳ ದೃಷ್ಟಿ ಅದರ ಮೇಲೆ ಹರಿಯಿತು. ಹೈಮವತಿಯ ಪತ್ರಕ್ಕೆ ಅವಳು ಉತ್ತರ ಬರೆದಿದ್ದಳು, ಅದು ಸರಿಯೆನಿಸಲಿಲ್ಲ, ಹರಿದುಹಾಕಿ ಬೇರೊಂದನ್ನು ಬರೆದಿದ್ದಳು; ಅದು ಆ ಹರಿದ ಪತ್ರದ ತುಣುಕು.

ರಾತ್ರಿಯೆಲ್ಲ ನಿದ್ದೆಗೆಟ್ಟು ಆ ಪತ್ರವನ್ನು ಅವಳು ಮುಗಿಸಿದ್ದಳು. ಓದಿ ನೋಡಿದಾಗ ಇಷ್ಟೆಲ್ಲವನ್ನು ಬರೆಯುವುದು ಸರಿಯಲ್ಲವೆಂದು ಅವಳಿಗೆನಿಸಿತು— ಹೆರವರೆದುರಿಗೆ ತನ್ನ ಮನದ ಮಾತನ್ನು ಹೀಗೆ ತೆರೆದಿಡುವುದು ಒಳಿತಲ್ಲ— ಆದರೆ ಆ ರಾತ್ರಿ ಇನ್ನೂ ಕಣ್ಣು ಹಿಗ್ಗಿಸಿಕೊಂಡು ಜಾಗರಣೆ ಮಾಡುವುದು ಅವಳಿಗೆ ಅಸಾಧ್ಯವಾಗಿತ್ತು.

ಮರುದಿನ ಪತ್ರವನ್ನು ಅಂಚೆಕಟ್ಟಿಗೆ ಕಳಿಸುವಾಗ ಅದನ್ನು ಓದಲಿಲ್ಲ. ಓದಿನೋಡಿದರೆ ಮತ್ತೂ ಹರಿಯುವ ಬುದ್ಧಿಯಾದೀತೆಂದು ಭಯ ಅವಳಿಗೆ. ಹಾಗಾಗಿದ್ದರೆ ಅಂದೂ ಪತ್ರ ಹೋಗುತ್ತಿರಲಿಲ್ಲ. ಎಷ್ಟೋ ದಿವಸಗಳಿಂದ ಮರೆತಿದ್ದ ಸಂಗತಿಗಳು ಆ ಪತ್ರದ ನೆನಪಿನಿಂದ ಒಂದೊಂದೇ ಮತ್ತೆ ಜ್ಞಾಪಕಕ್ಕೆ ಬಂದವು. ಅವಳದು ಅವಳಿಗೇ ನಾಚಿಕೆಯಾಯಿತು. ತನ್ನನ್ನು ಹೊರಗೆ ಹಾಕುವ ವಿಷಯವನ್ನು ಅವಳು ಅದರಲ್ಲಿ ಬರೆದಿದ್ದಳು. ಅದನ್ನು ವಿಪರೀತವಾಗಿ ತಿಳಿದುಕೊಂಡು, ತನ್ನನ್ನು ಉಳಿಸಿಕೊಳ್ಳುವುದಕ್ಕಾಗಿ ಯಾರೆಲ್ಲಿ ಬರುತ್ತಾರೋ ಎಂದವಳು ಬೆದರಿದಳು.

ಹೈಮವತಿಯ ಮತ್ತು ಆಕೆಯ ಗಂಡನ ನೆನಪಾದೊಡನೆ ಅವಳ ಮನಸಿನಲ್ಲಿ ವಿಲಕ್ಷಣ ತಳಮಳವಾಗುತ್ತಿತ್ತು. ಹೈಮವತಿಯ ಬಾಳುವೆ ಹೇಗೆ ವ್ಯವಸ್ಥಿತವಾಗಿ ನಾಗಿರುವುದೆಂಬುದು ಅವಳಿಗೆ ಹೆಚ್ಚಾಗಿ ಗೊತ್ತಿರಲಿಲ್ಲ. ಆದರೂ ಅವಳು ಕಲ್ಪನೆಯ ಚಿತ್ರಗಳನ್ನು ಚಿತ್ರಿಸುತ್ತಿದ್ದಳು. ಆ ಕಲ್ಪನಾ ಚಿತ್ರಗಳ ಚಿಂತನೆಯಲ್ಲಿರುವಾಗ ಅವಳು ಗೊಂದಲದಲ್ಲಿ ಬೀಳುತ್ತಿದ್ದಳು. ಒಮ್ಮೊಮ್ಮೆ ಹೈಮಳನ್ನು ಒಮ್ಮೊಮ್ಮೆ ನಿರ್ಮಲನನ್ನು ತುಲನೆ ಮಾಡಿ ನೋಡುತ್ತಿದ್ದಳು; ಆಗ ಅವಳ ಮನಸ್ಸು ಒಮ್ಮಿಗಿಲೆ ಸಂಯಮದ ಮೇರೆಯನ್ನು ಮಿಾರಿಹೋಗಿ ಲಜ್ಜೆಯಿಂದ ಹೊಯ್ದಾಡುತ್ತಿತ್ತು; ಅದೇನಾಗುತ್ತಿತ್ತೋ ಅವಳಿಗೇ ಗೊತ್ತಾಗುತ್ತಿರಲಿಲ್ಲ. ಮೋಹಾವಿಷ್ಟವಾದುದರಿಂದ ತನ್ನ ಮನಸ್ಸು ಗುರಿಗೆಟ್ಟು ಸಾಗಿದೆಯೆಂಬುದು ಅವಳಿಗೆ ಕಾಣು

ತ್ತಿತ್ತು. ಅವಳಿಗೆ ಭಯವಾಗುತ್ತಿತ್ತು, ನಾಚಿಕೆಯಾಗುತ್ತಿತ್ತು; ಸರ್ವ ಶಕ್ತಿಯಿಂದಲೂ ಅದರ ಗತಿಯನ್ನು ತಡೆಯಬೇಕೆಂದು ಇಚ್ಛಿಸುತ್ತಿದ್ದಳು. ಆ ಚಪಲ ಪ್ರವಾಹದ ಸೆಳವಿನಿಂದ ಆತ್ಮರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಈ ಪತ್ರವನ್ನು ಚೂರುಚೂರಾಗಿ ಹರಿದೊಗೆದಿದ್ದಳು. ಅದರಿಂದ ತನ್ನ ಮನವನ್ನು ಸ್ಥಿರಪಡಿಸಿಕೊಂಡಿದ್ದಳು.

ಮನಸಿಗುಂಟಾದ ಆ ಬಲದ ಬೆಂಬಲದಿಂದ ಅವಳು ತನ್ನಷ್ಟಕ್ಕೆ ತಾನು ಎಂದುಕೊಂಡಳು: 'ಹೈಮುಳ ವಿಷಯದಲ್ಲಿ ನಾನಿಷ್ಟೊಂದು ಏಕೆ ಹೇಳಹೋದೆ? ಅವರಿಂದ ನಾನು ಅಪೇಕ್ಷಿಸುವಂತಹ ಸಹಾಯವಾದರೂ ಯಾವುದು? ಸಹಾಯವನ್ನು ಏಕೆ ಬೇಡಬೇಕು? ದೇವಿಯು ಭೈರವಿ ಯಾಗುವುದರಲ್ಲಿ ಏನಂಥ ಮಹತ್ವವಿದೆಯೆಂದು ಹಟ ಹಿಡಿಯಬೇಕು? ಯಾರಾದರೂ ಆಗಿಕೊಳ್ಳಲಿ ಭೈರವಿ, ನನ್ನದೇನು ಹೋದದ್ದು? ಎಲ್ಲರೂ ಕಳ್ಳರು, ತುಡುಗರು. ಯಾರ ಶಕ್ತಿ ಎಷ್ಟೋ ಅವರು ಅಷ್ಟು ದೊಡ್ಡ ತುಡುಗರು! ಸಂಧಿ ಸಾಧಿಸಿ, ಶಕ್ತಿಯನ್ನು ಪ್ರಯೋಗಿಸಿ ಹೆರವರ ಸ್ವತ್ತನ್ನು ಹಿಸುಕುವುದು ಇವರ ಕೆಲಸ. ಇಂಥದು ನಮ್ಮ ಪ್ರಪಂಚ, ಇಂಥದು ನಮ್ಮ ಮಾನವರ ನಡತೆ! ಪೀಡಿತರಲ್ಲಿಯೂ ಪೀಡಕರಲ್ಲಿಯೂ ಅಂಥ ವ್ಯತ್ಯಾಸವಾದರೂ ಏನಿದೆ? ಹಗಲಿರುಳು ಏತಕ್ಕೆ ಇಷ್ಟು ಭಯಪಡ ಬೇಕು? ಏತಕ್ಕಾಗಿ ಇಷ್ಟೊಂದು ಗುದ್ದಾಟ? ಏಕೆ ಇಷ್ಟು ವಿರೋಧ ಹುಟ್ಟಿಕೊಂಡಿದೆ? ಭೈರವಿಯು ಆಸನವನ್ನು ಬಿಟ್ಟುಬಿಡುವುದು ಇಷ್ಟೇಕೆ ಕಠಿನವಾಗಿದೆ?'

ಈ ಕೆಲಸವು ತನಗೆ ಅಷ್ಟೇನೂ ಕಠಿನವಲ್ಲವೆಂದು ಅವಳಿಗೊಮ್ಮೆ ಎನಿಸಿತು. ಭೈರವಿ ಪದದ ಎಲ್ಲ ಹೊಣೆಯನ್ನೂ ಸ್ವೇಚ್ಛೆಯಿಂದ ಬಿಟ್ಟು ಕೊಡುವುದಾಗಿ, ಅದಕ್ಕೆ ಯಾವ ಅಡ್ಡಿ ಆತಂಕವಿಲ್ಲವಾಗಿ, ನಾಳೆ ಬೆಳಗ್ಗೆ ಏಕಕೌಡಿಗೂ ಜನಾರ್ದನನಿಗೂ ತಿಳಿಸಬೇಕು ಎಂದುಕೊಂಡಳು. ಅವ ಳಾಗಲೇ ಎದ್ದು ಪತ್ರವನ್ನು ಬರೆಯಲು ಕುಳಿತಳು.

ಅವಸರದಿಂದ ಕೆಲವು ಸಾಲುಗಳನ್ನು ಬರೆಯುವಷ್ಟರಲ್ಲಿ ಅವಳ ಕೈ ನಿಂತಿತು. ಸರದಾರ–ಸಾಗರರ ನೆನಪಾಯಿತವಳಿಗೆ. ಜಗತ್ತಿನಲ್ಲೆಲ್ಲ ನಡೆ

ದಿರುವ ಸಭ್ಯರ ಅಸಭ್ಯರ ತುಡುಗತನದಲ್ಲಿ ಈ ಇಬ್ಬರು ತುಡುಗರು ಮಾತ್ರ ಅವಳನ್ನು ತೊರೆದಿರಲಿಲ್ಲ.

ಒಮ್ಮೆಲೆ ತನ್ನ ಪರಿಸ್ಥಿತಿಯು ಅರಿವಾಯಿತವಳಿಗೆ— ಆದರೆ ಮುಂದೇನು? ಅಡ್ಡಾಗುವುದಕ್ಕೆ ಎಲ್ಲಿಯೂ ಇಂಬಿಲ್ಲ. ಎಲ್ಲರೂ ಬಹಿಷ್ಕರಿಸಿದ್ದಾರೆ. ನಿನ್ನೆ ಅವಳನ್ನು ಸುತ್ತುವರಿದು ಕುಳಿತವರೇ ಇಂದು ಶಿಕ್ಷೆಯು ಭಯದಿಂದ ಜಮಿಾದಾರನ ಅಂಗಳದಲ್ಲಿ ಸೇರಿ ಅವಳ ವಿರುದ್ಧ ಪಂಚಾಯತಿ ಮಾಡಿಬಂದರು. ಇಷ್ಟು ಅಲ್ಪಾವಧಿಯಲ್ಲಿಯ ಈ ಸಂಗತಿ— ಅದು ಹೋಗಲಿ!

ಈ ಅತ್ಯಂತ ಕ್ಷುದ್ರಜನರ ಬಗ್ಗೆ ಅವಳ ಆಕ್ಷೇಪವಿರಲಿಲ್ಲ. ಏಕಕೌಡಿ, ಜನಾರ್ದನ, ಶಿರೋಮಣಿ, ಅವಳ ತಂದೆ ತಾರಾದಾಸ ಮತ್ತು ಜಮಿಾದಾರ. ಅವರವೆಷ್ಟೋ ಹಳೆಯ ಹೊಸ ಸಂಗತಿಗಳಿದ್ದವು — ಆದರೆ ಹೋಗಲಿ ಅವೆಲ್ಲ! ಅವುಗಳ ಉಸಾಬರಿ ಏಕೆ?

ಫಕೀರ ಸಾಹೇಬನು ಅವಳ ನೆನಪಿನಲ್ಲಿ ಸುಳಿದ. ಅವನು ಏನು ವಿಪರೀತ ತಿಳಿದುಕೊಂಡು ಹೋದನೋ ಏನೋ ಅವಳಿಗೆ ತಿಳಿದಿರಲಿಲ್ಲ. ತಾನೇಕೆ ಹೋದನೆಂಬುದನ್ನು ಅವನು ಯಾರಿಗೂ ಹೇಳಲಿಲ್ಲ, ಯಾರ ಬಗ್ಗೆಯೂ ಆಕ್ಷೇಪವೆತ್ತಲಿಲ್ಲ. ಹಿಂದಕ್ಕೂ ಇದೇ ರೀತಿ ಸುಮ್ಮನೆ ಹೊರಟು ಹೋಗುತ್ತಿದ್ದ. ಅವಳು ಪ್ರೇಮದಿಂದ, ಭಕ್ತಿಯಿಂದ ಗೌರವದಿಂದ ಬೀಳ್ಕೊಡಬೇಕೆಂದರೆ ಅಸ್ಪದವನ್ನೇ ಕೊಡುತ್ತಿರಲಿಲ್ಲ—ಇದವನ ರೂಢಿಯೇ ಅಲ್ಲವೆ?

ಆದರೂ ಅವನ ಈ ಸಲದ ನಡತೆ ಷೋಡಶಿಯ ಮನಸಿಗೆ ತಗಲದಿರಲಿಲ್ಲ. ಎಂದಿನಂತೆಯೇ ಈಗಲೂ ಅವನು ಹೋಗಿದ್ದಾನೆಂದು ಅವಳ ಮನಸೇನೂ ಒಪ್ಪಲಿಲ್ಲ.

ಅವಳು ಕೇಳಿದ ಪ್ರಶ್ನೆಗೆ ಫಕೀರ ಸಾಹೇಬನು ಆಗಾಗ, 'ಮಗೂ, ನಾನು ಸ್ವಂತದ ಸಂಬಂಧವನ್ನು ಕಡಿದೊಗೆಯಲು ಹವಣಿಸಿರುತ್ತಿರುತ್ತೇನೆ— ಜನರದನ್ನಲ್ಲ. ತುಂಬಿದ ವಸತಿಯ ಮಾಯೆಯನ್ನು ಬಿಡುವುದು ನನಗೆ ಕಠಿನವಾಗಿದೆ. ಜನರ ಗುಂಪಿನೊಳಗೆ ಬೆರೆತುಕೊಂಡಿರುವುದು ನನಗೆ ಬಹಳ ಸೇರುವುದು—ನೀನು ದೇವರಿಗೆ ಆತ್ಮಾರ್ಪಣ ಮಾಡಿರುವವಳು, ಈ ಮಾತು

ಎಲ್ಲರಿಗಿಂತ ಹೆಚ್ಚಾಗಿ ನೆನಪಿರಬೇಕು. ಮನಸ್ಸು ನಿಷ್ಕಾರಣವಾಗಿ ಏತರಲ್ಲಿ ಯಾದರೂ ತೊಡಕಿಕೊಳ್ಳುವಂತಹ ತಪ್ಪನ್ನು ಮಾಡಬೇಡ. ದೇವತೆ ಯೊಡನೆ ಸಂಬಂಧ ಕಟ್ಟಿಕೊಂಡು ಆತ್ಮವಂಚನೆ ಮಾಡಿಕೊಳ್ಳುವುದಕ್ಕಿಂತ ದೇವತೆಯನ್ನು ಬಿಟ್ಟುಬಿಡುವುದೇ ಲೇಸು!' ಎಂದು ಹೇಳುತ್ತಿದ್ದ.

ಈಗವಳು ಅಂತಹ ವಂಚನೆಯ ಜಾಳಿಗೆಯಲ್ಲಿ ಸಿಕ್ಕಿದ್ದಳು. ಫಕೀರ ಸಾಹೇಬನೀಗ ಇದ್ದಿದ್ದರೆ? ಒಮ್ಮೆಯಾದರೂ ಅವನ ಅಡಿಯ ಬಳಿ ತಾನು ಕುಳಿತುಕೊಂಡಿದ್ದರೆ? —

ಬಹಳ ದಿನಗಳ ಹಿಂದೆ ಅವನೊಮ್ಮೆ ಹೇಳಿದ್ದ: 'ಮಗೂ, ನಿನಗೆ ನಿಜವಾಗಿ ಅಗತ್ಯವುಂಟಾದಾಗ ಕರೆ, ನಾನು ಇದ್ದಲ್ಲಿಂದ ಬರುತ್ತೇನೆ.'

ಇಂದವಳಿಗೆ ಅವನ ಅಗತ್ಯವುಂಟಾಗಿದೆ.

ಅದೇ ಸಮಯಕ್ಕೆ ಹೊರಗಿನಿಂದ ಕೂಗು ಕೇಳಿಸಿತು: "ಕೊಂಚ ಒಳಗೆ ಬರಲೇ?"

ಅವಳ ವಿಕ್ಷಿಪ್ತವಾದ ಉದ್ವಿಗ್ನವಾದ ಚಿತ್ತವು ಕ್ಷಣ ಮಾತ್ರ ಸಮ ಮಟ್ಟಕ್ಕೆ ಬಂದಿತು. ಮರುಕ್ಷಣವೇ ಮತ್ತೆ ಉದ್ವಿಗ್ನವಾಯಿತು. ಇಂತಹ ಅಲೌಕಿಕವಾದ ಘಟನೆ ಘಟಿಸಿದುದು ಅವಳಿಗೆ ಅಸಹನೀಯವೇ ಆಯಿತು.

"ನಾನು ಒಳಗೆ ಬರಲೇ?"

"ಬರಬೇಕು" ಎಂದು ಷೋಡಶಿ ಎದ್ದು ನಿಂತಳು. ಅವಳು ಕಣ್ಣು ಮುಚ್ಚಿಕೊಂಡೇ ಬಂದ ವ್ಯಕ್ತಿಯ ಪಾದಕ್ಕೆ ನಮಸ್ಕರಿಸಿ, ನಡುಗುತ್ತಿರುವ ಕಾಲುಗಳಿಂದ ಎದ್ದು ನಿಂತಳು.

ಕಣ್ಣು ಬಿಟ್ಟಾಗ ದೀಪದ ಬೆಳಕಿನಲ್ಲಿ ಅವಳಿಗೆ ಕಂಡಿತು – ಬಂದವನು ಫಕೀರಸಾಹೇಬನಾಗಿರಲಿಲ್ಲ, ಜಮೀದಾರ ಜೀವಾನಂದ ಚೌಧರಿ!

ಷೋಡಶಿಯ ಎವೆಗಳ ಬಡಿತವೇ ನಿಂತಿತು, – ಕಣ್ಣು ಕಲ್ಲಿನವೇ ಆಗಿ ರಬೇಕು. ಬೆಳಕು ಮಖಾಳವಾಗಿದ್ದಿತು. ಆದರೂ ಕಲ್ಲಿನ ಕಣ್ಣಿನಿಂದಲೂ ಮನುಷ್ಯರನ್ನು ಗುರುತಿಸುವ ಮಟ್ಟಿಗೆ ಬೆಳಕಿತ್ತು.

ಜೀವಾನಂದನು ಗಾಬರಿಯಾಗಿದ್ದ. ಕಾರಣವಿಲ್ಲದ ಅದ್ಭುತವಾದ ಭಕ್ತಿಯನ್ನು ಕಂಡು, ನಮಸ್ಕರಿಸಿದ ವ್ಯಕ್ತಿ ಅವಳೇನೇ ಎಂಬುದು ಅವನಿಗೆ ಒಡಪವಾಯಿತು. ಅವಳೇ ಎಂದು ಗೊತ್ತಾದ ಬಳಿಕ ಅವನ ಭೀತಿ ದೂರ

ವಾಯಿತು. ಗಂಭೀರವಾಗಿ ಅವನೆಂದ: "ಈ ಕಲಿಯುಗದಲ್ಲಿ ಇಂಥ ಪತಿ ಭಕ್ತಿ ಬಹಳ ದುರ್ಲಭ. ಅರ್ಘ್ಯ, ಪಾದ್ಯ, ಆಸನ ಮೊದಲಾದವೆಲ್ಲ ಎಲ್ಲಿ?"

ಷೋಡಶಿ ಸ್ತಬ್ಧವಾಗಿ ನಿಂತುಬಿಟ್ಟಳು. ತನ್ನ ದುರ್ದೈವೀ ಜೀವನದಲ್ಲಿ ಅವಳು ಅನೇಕರನ್ನು ನೋಡಿದ್ದಳು, ಅವಳು ಜನಾರ್ದನನ್ನು ಬಲ್ಲಳು, ಏಕಕೌಡಿಯನ್ನು ಬಲ್ಲಳು, ತನ್ನ ತಂದೆಯನ್ನಂತೂ ಚೆನ್ನಾಗಿಯೇ ಬಲ್ಲಳು. ಆದರೀಗ ಮನುಷ್ಯನಲ್ಲಿ ನಿರ್ಭಯತೆ ಇಷ್ಟರಮಟ್ಟಿಗಿರಬಲ್ಲುದೆಂಬುದನ್ನು ಕಂಡು ಅವಳಿಗೆ ಅಘಾತವಾದಂತಾಯಿತು. ಆ ಅಘಾತವನ್ನು ನಿತ್ತರಿಸಿ ಕೊಳ್ಳಲು ಅವಳಿಗೆ ಕೊಂಚ ಸಮಯ ಬೇಕಾಯಿತು.

ಜೀವಾನಂದನು ಅತ್ತಿತ್ತ ನೋಡಿ ಕೋಲಮೇಲಿನ ಕಂಬಳಿಯನ್ನು ಎಳೆದುಕೊಂಡು ಹಾಸಿದ. ಹಾಸುತ್ತಿದ್ದಾಗ ತೆರೆದ ಬಾಗಿಲ ಕಡೆ ಅವನ ದೃಷ್ಟಿ ಹೋಯಿತು.

"ಬಾಗಿಲಿಕ್ಕಿ ಚಿಲಕ ಹಾಕಿಕೊಂಡು ಕೂಡ್ರುವುದು ನೆಟ್ಟಗೆ, ಅಲ್ಲವೆ? ನಿಮ್ಮ ಸಾಗರಣ್ಣ ಇದ್ದಾನಲ್ಲ, ನನ್ನ ಮೇಲೆ ಅವನ ಪ್ರೀತಿ ಅಷ್ಟೊಂದಿಲ್ಲ ವೆಂದು ಕೇಳಿದ್ದೇನೆ. ಅವನು ಇಲ್ಲಿಯೇ ಎಲ್ಲಿಯಾದರೂ ಸಮೀಪದಲ್ಲಿ ಇದ್ದಿರಬಹುದು. ಇಷ್ಟರೊಳಗೇ ಬಂದುಬಿಟ್ಟರೆ ಅವನ ಮನಸಿನಲ್ಲಿ ಇಲ್ಲದ ಕಲ್ಪನೆ ಬಂದೀತು. ಎಷ್ಟೆಂದರೂ ಕೀಳುಜನ ಅಲ್ಲವೇ ಅದು?" ಎಂದು ಜೀವಾನಂದನು ಕೊಂಚ ನಕ್ಕ.

ಷೋಡಶಿಯ ಮೈಯೆಲ್ಲವೂ ನಡುಗಿತು. ಈ ಮನುಷ್ಯನೇನೂ ಒಬ್ಬನೇ ಬಂದಿರಲಿಕ್ಕಿಲ್ಲ, ಸಂಗಡ ಬಂದಿದ್ದ ಜನ ಅಕ್ಕಪಕ್ಕದಲ್ಲಿ ಅಡಗಿ ಕೊಂಡಿರಬೇಕು, ಇಂತಹ ಹೊತ್ತು ಸಾಧಿಸಬೇಕೆಂದು ಇವರು ಮೊದ ಲಿಂದಲೂ ಹೊಂಚು ಹಾಕಿರಬೇಕು ಎಂದೆನಿಸಿತವಳಿಗೆ.

ಏನಾದರೂ ಭಯಂಕರವಾದೀತು—ಕದಾಚಿತ್ ಕೊಲೆಯೂ ಆದೀತು!—ಎಂದೆನಿಸಿತು. ಮನಸ್ಸಿನಲ್ಲಿ ಆಗುತ್ತಿದ್ದ ಕಳವಳವನ್ನು ದನಿ ಯಲ್ಲ ಪೂರಾ ತೋರಗೊಡದಿರುವುದು ಅವಳಿಗಸಾಧ್ಯವಾಯಿತು. "ನೀವಿಲ್ಲಿ ಏಕೆ ಬಂದಿರಿ?" ಎಂದು ಕೇಳಿದಳು.

"ನಿನ್ನನ್ನು ನೋಡಲಿಕ್ಕೆ! ಸ್ವಲ್ಪ ಅಂಜಿದೆಯೆಂದು ಕಾಣುತ್ತದೆ? ಯಾರೂ ಅಂಜಬಹುದು. ಇಲ್ಲಿ ನೋಡು, ಕೂಗಾಡಬೇಡ. ತುಂಬಿದ

ಪಿಸ್ತೂಲಿದೆ. ನಿನ್ನ ತುಡುಗರ ತಂಡ ಸುಮ್ಮನೆ ಸತ್ತುಹೋದೀತು. ಅವರ ಕೈಯಿಂದ ಏನೂ ಆಗುವುದಿಲ್ಲ—" ಎಂದು ಜೀವಾನಂದನು ಜೇಬಿನಿಂದ ರಿವಾಲ್ವರನ್ನು ಹೊರಗೆ ತೆಗೆದು, ಪುನಃ ಅಲ್ಲಿಯೇ ಇರಿಸಿ, "ಆದರೆ ಬಾಗಿಲಿಕ್ಕಿ ನಾವೊಂದಿಷ್ಟು ನಿಶ್ಚಿಂತರಾಗುವಾ" ಎಂದು ಷೋಡಶಿಯ ಕಡೆ ನೋಡಿ ನಸುನಕ್ಕ. ತಾನೇ ಹೋಗಿ ಬಾಗಿಲಿಕ್ಕಿ ಚಿಲಕ ಹಾಕಿದ; ಮನೆಯೊಡತಿಯ ಒಪ್ಪಿಗೆಗಾಗಿ ಕಾಯಲಿಲ್ಲ.

ಷೋಡಶಿಯ ಮುಖ ಬೆಳ್ಳಗಾಯಿತು. ಅವಳು ಮಾತನಾಡಲು ಯತ್ನಿಸಿದಳು, ಬಾಯಿಂದ ಶಬ್ದ ಹೊರಡಲಿಲ್ಲ. ಶಬ್ದವು ಹೊರಹೊರಟಾಗ ಆವಳ ಸ್ವರವು ಕಂಪಿಸುತ್ತಿತ್ತು.

"ಸಾಗರ ಇಲ್ಲಿಲ್ಲ."

"ಇಲ್ಲವೆ? ಎಲ್ಲಿ ಹೋದ ಮಗ?"

"ತಮಗೆ ಎಲ್ಲರಿಗೂ ಗೊತ್ತಿದ್ದ ಹಾಗಿದೆ—"

"ಗೊತ್ತಿದೆಯೆ? 'ತಮಗೆಲ್ಲರಿಗೆ' ಎಂದರೆ ಯಾರಿಗೆ? ನನಗೆ ಸ್ವಲ್ಪವೂ ಗೊತ್ತಿಲ್ಲ."

"ನಾನು ದಿಕ್ಕಿಲ್ಲದವಳಾಗಿದ್ದೇನೆಂದು ಜನರನ್ನು ಕರೆದುಕೊಂಡು ನನ್ನನ್ನೇಕೆ ಹೊಡೆಯ ಬಂದಿದ್ದೀರಿ? ನಾನು ಮಾಡಿದ್ದೇನು ತಮಗೆ?"

"ಜನರನ್ನು ಕರೆದುಕೊಂಡು ಹೊಡೆಯಲಿಕ್ಕೆ ಬಂದಿದ್ದೇನೆಯೆ? ಎಲಾ ಹುಚ್ಚಿ, ಮನಸಿಗೆ ಹೇಗೆ ಹೇಗೋ ಎನಿಸಿದ್ದರಿಂದ ನೋಡಲಿಕ್ಕೆ ಬಂದೆ."

ಷೋಡಶಿ ಮಾತನಾಡಲಿಲ್ಲ. ಅವಳ ಕಣ್ಣಲ್ಲಿ ನೀರು ಬರುತ್ತಲಿತ್ತು. ಈ ಕುಚೇಷ್ಟೆಯಿಂದ ಅದು ಒಮ್ಮೆಲೆ ಬತ್ತಿಬಿಟ್ಟಿತು. ಒಣ ನೋಟವನ್ನು ನೆಲದಲ್ಲಿ ನಟ್ಟು ಅವಳು ನೀರವವಾಗಿ ಕುಳಿತಳು. ಹತ್ತಿರವೇ ಜೀವಾನಂದನು ತೃಷಿತ ಲಾಲಸೆಯ ದೃಷ್ಟಿಯಿಂದ ಅವಳ ಆನತ ಮುಖವನ್ನೇ ಒಂದೇ ಸವನೆ ದಿಟ್ಟಿಸಿ ನೋಡುತ್ತ ಅವಳಂತೆಯೇ ಸ್ತಬ್ಧವಾಗಿ ಕುಳಿತುಕೊಂಡಿದ್ದ.

## ೧೮

“ ಅಲಕಾ ! ”

“ ಏನು ? ”

“ ನಿನ್ನಲ್ಲಿ ಗುಡುಗುಡಿ ತಂಭಾಕು ಇಲ್ಲವೇನೊ ? ”

ಷೋಡಶಿ ಒಮ್ಮೆ ಅವನ ಕಡೆ ನೋಡಿ ಮತ್ತೆ ಮೋರೆ ತಗ್ಗಿಸಿ ಕುಳಿತು ಕೊಂಡಳು. ಉತ್ತರ ಬಾರದಿರಲು ಜೀವಾನಂದನು ಉಸಿರ್ಗರೆದು ಮಾತ ನಾಡಿದ : “ ವಜ್ರೇಶ್ವರನ ಭಾಗ್ಯ ದೊಡ್ಡದು. ದೇವೀರಾಣಿ ಅವನನ್ನು ಹಿಡಿದು ತಂದಿದ್ದಳೇನೋ ನಿಜ. ಆದರೆ ಅವನಿಗೆ ಅಂಬುರಿ ತಂಬಾಕು ತುಂಬಿಕೊಟ್ಟಳು. ಊಟವಾದ ಬಳಿಕ ದಕ್ಷಿಣೆಯನ್ನೂ ಕೊಟ್ಟಳು — ಬೀಳ್ಕೊಡುವ ವಿಷಯದಲ್ಲಿ ನಾನೇನೂ ಹೇಳುವುದಿಲ್ಲ — ಬಂಕಿಮ ಬಾಬು ಗಳ ಆ ಕಾದಂಬರಿಯನ್ನು ಓದಿದ್ದೀಯಲ್ಲವೆ ? ”

ಈ ಎಗ್ಗಿಲ್ಲದ ಮನುಷ್ಯನಿಂದ ಏನು ಅಪಮಾನವಾದರೂ ಮೌನವಾಗಿ ತಾಳಿಕೊಳ್ಳಬೇಕೆಂದು ಷೋಡಶಿ ನಿರ್ಧರಿಸಿಕೊಂಡಿದ್ದಳು. ಆದರೆ ಜೀವಾ ನಂದನ ಕೊನೆಯ ಉದ್ಗಾರವನ್ನು ಕೇಳಿ, ಅದೇಕೋ ಯಾರಿಗೆ ಗೊತ್ತು, ಅವಳ ಸಂಕಲ್ಪವು ಭಗ್ನವಾಯಿತು. “ ತಮ್ಮನ್ನು ಹಿಡಿದು ತಂದಿದ್ದರೆ ನಾನೂ ಹಾಗೆ ವ್ಯವಸ್ಥೆ ಮಾಡುತ್ತಿದ್ದೆ ; ಹೇಳಿಸಿಕೊಳುತ್ತಿರಲಿಲ್ಲ ” ಎಂದು ನುಡಿದು ಬಿಟ್ಟಳು.

ಜೀವಾನಂದನು ನಕ್ಕು ನುಡಿದ : “ ಅದು ನಿಜ. ಹಗ್ಗಹಚ್ಚಿ ಎಳೆದು ಕೊಂಡು ಬಂದರೆ ಕಣ್ಣಿಗೆ ಕಾಣುತ್ತದೆ. ಭೋಜಪುರೀ ಪೇದೆಗಳನ್ನು ಕಳಿಸಿ ಹಿಡಿತರಿಸಿದರೆ ಊರಿಗೆ ಊರೇ ನೋಡುತ್ತದೆ. ಆದರೆ ಕಣ್ಣಿಗೆ ಕಾಣದ ಪೇದೆಯನ್ನು — ನಿಮ್ಮ ಶಾಸ್ತ್ರಗ್ರಂಥಗಳಲ್ಲಿ ಅವನಿಗೆ ಏನೆನ್ನುತ್ತಾರೆ ಅಲಕಾ ? ಅನಂಗ ಅಲ್ಲವೆ ? ಹಾ, ಅವನೇ.”

ಷೋಡಶಿಯ ಮೋರೆ ಕೆಂಪಡರಿತು. ಮುಖವನ್ನು ತಗ್ಗಿಸಿಕೊಂಡು ಸುಮ್ಮನಿದ್ದಳು. ಜೀವಾನಂದನು ಹೇಳಿದ : “ ಸ್ವಲ್ಪ ಮಾತನಾಡುವುದಿತ್ತು. ಆದರೀಗ ಬೇಡ. ನಿನ್ನ ಆ ಬೆಂಬಲಿಗರಿಗೆ ಗೊತ್ತಾದರೆ ನನಗೆ ಅಳಿಯತನ ಆಗುವುದಿಲ್ಲ. ಇಷ್ಟೇ ಏಕೆ ? ನಾನು ಬಂದದ್ದು ಅತ್ತೆ ಮನೆಗೆ ಎಂಬುದೂ

ಅವರಿಗೆ ಮನವರಿಕೆಯಾಗಲಾರದು. ಸಾವಿಗಂಜಿ ನಾನು ಸುಳ್ಳು ಹೇಳು ತ್ತೇನೆಂದು ಅವರು ಭಾವಿಸಬಹುದು."

ಷೋಡಶಿ ಯಾವ ಮಾತನ್ನೂ ಆಡಲಿಲ್ಲ. ಈ ಹೊಲಸು ಚೇಷ್ಟೆಯಿಂದ ತನ್ನ ಮನಸಿನ ಮೇಲಾದ ಪರಿಣಾಮವು ಕಂಡುಬಂದೀತೆಂದು ಅವಳು ಮುಖವೆತ್ತಿಯೂ ನೋಡಲಿಲ್ಲ.

ಕೆಲಹೊತ್ತು ಕಾಯ್ದು ಉತ್ತರ ಸಿಕ್ಕುವುದಿಲ್ಲವೆಂಬುದನ್ನರಿತು ಜೀವಾ ನಂದನು ನಿಜವಾಗಿಯೂ ಎದ್ದುನಿಂತು ನುಡಿದ: "ಅಂಬುರೀ ತಂಬಾಕಿನ ಹೊಗೆ ಹೊಟ್ಟೆಗೆ ಹೋಗದಿದ್ದರೂ ಆದೀತು. ಆದರೆ ಹೊಗೆಗಿಂತ ಸವಿಯಾದ ದ್ದೇನಾದರೂ ಹೊಟ್ಟೆಗೆ ಬೀಳದೆ ನನಗೆ ನಿಂತುಕೊಳ್ಳಲಿಕ್ಕಾಗುವುದಿಲ್ಲ. ಸತ್ಯವಾಗಿ ಏನೂ ಇಲ್ಲವೆ ಅಲಕಾ?"

ಅವಳೀಗಲೂ ಮೌನವಾಗಿಯೇ ಇರುತ್ತಿದ್ದಳು. ಆದರೆ ಕೊನೆಗೆ ಹೆಸರುಗೊಂಡು ಕೇಳಿದುದರಿಂದ ಸುಮ್ಮನಿರುವುದು ಅಶಕ್ಯವಾಯಿತು. ಅವನ ಕಡೆ ನೋಡಿ ಅವಳು ಕೇಳಿದಳು: "ಏನಾದರೂ ಎಂದರೇನು? ಮದ್ಯವೇ?"

ಜೀವಾನಂದನು ನಗುನಗುತ್ತ ತಲೆಹಾಕತೊಡಗಿದ. ಅವನೆಂದ: "ಈಗ ಮಾತ್ರ ತಪ್ಪಿದೆ ನೋಡು. ಅದಕ್ಕಾಗಿ ಬೇರೆ ಜನ ಇದ್ದಾರೆ, ನೀನು ಬೇಕಾ ಗಿರಲಿಲ್ಲ. ನಿನಗೆ ಸ್ವಚ್ಛವಾಗಿ ತಿಳಿಯುವಂತೆಯೇ ಮಾತನಾಡಿದ್ದೆ -- ಮಿಕ್ಕ ದ್ದೇನೇ ಇರಲಿ, ನಿನ್ನ ವಿಷಯದಲ್ಲಿ ಅಸ್ಪಷ್ಟತೆಯು ಅಪವಾದವನ್ನು ಹೊರ ಲಾರೆ. ಎಂತಲೇ ನಿನ್ನನ್ನೇನಾದರೂ ಬೇಡುವುದಿದ್ದರೆ ಮನುಷ್ಯನನ್ನು ಬದುಕಿ ಸುವ ಸಾಧನವನ್ನೇ ಬೇಡೇನು, ಸಾವಿನ ಕಡೆ ನೆಳೆದೊಯ್ಯುವುದನ್ನು ಬೇಡು ವುದಿಲ್ಲ. ಅನ್ನ, ಸಾರು, ಮಿಠಾಯಿ, ಅವಲಕ್ಕಿ - ಬೆಲ್ಲ ಏನಾದರೂ ಇದ್ದರೆ ಕೊಡು; ಸ್ವಲ್ಪ ತಿನ್ನುತ್ತೇನೆ. ಇಲ್ಲವೆ?"

ಷೋಡಶಿ ಬಿಟ್ಟೂ ಬಿಡದೆ ಅವನ ಕಡೆ ನೋಡುತ್ತಿದ್ದಳು. ಜೀವಾ ನಂದನು ಮಾತನಾಡುತ್ತಿದ್ದ: "ಈವೊತ್ತು ಬೆಳಗಿನಿಂದಲೂ ಮನಸು ನೆಟ್ಟೆ ಗಿಲ್ಲ. ಪ್ರಕೃತಿಯ ಬಗ್ಗೆ ಹೇಳುವುದಂತೂ ನಗೆಗೇಡೇ. ಉತ್ತಮ ಪ್ರಕೃತಿ ಯೆಂದರೇನೆಂಬುದೇ ಮರೆತುಹೋಗಿದೆ. ಮುಂಜಾನೆ ಸಹಜವಾಗಿ ನದಿಯ ಕಡೆಗೆ ತಿರುಗಾಡಲು ಹೋಗಿದ್ದೆ. ದಂಡೆಗುಂಟ ಎಷ್ಟುದೂರ ಹೋದೆನೋ

ಯಾರಿಗೆ ಗೊತ್ತು ; ತಿರುಗಬೇಕೆಂದು ಎನಿಸಲೇ ಇಲ್ಲ. ಹೊತ್ತು ಮುಳು ಗಿತು. ಹೊಲದಲ್ಲಿ ಒಬ್ಬನೇ ಕುಳಿತಿದ್ದೆ. ಅಲ್ಲೇನು ಚೆಂದ ಕಂಡಿತೋ ಏನೋ! ನಿನ್ನೊಬ್ಬಳ ನೆನಪೇ ಆಗುತ್ತಿತ್ತು. ತಿರುಗಿ ಹೊರಟವನು ಅದಕ್ಕೇ ಮನೆಗೆ ಹೋಗಲಿಲ್ಲ. ಹಸಿಪೆ ನೀರಡಿಕೆಗಳನ್ನು ತಡೆದುಕೊಂಡು ಎದುರಿನ ಗಿಡದ ಮರೆಯಲ್ಲಿ ನಿಂತುಕೊಂಡಿದ್ದೆ. ನೋಡಿದೆ, ಬಾಗಿಲು ತೆರೆದಿತ್ತು ; ದೀಪವಿತ್ತು. ಪಿಸ್ತೂಲಿಲ್ಲದೆ ನಾನು ಹೊರಬೀಳುವುದೇ ಇಲ್ಲ—ಜೇಬಿನಲ್ಲಿ ಇದ್ದೇ ಇರುತ್ತದೆ—ಆದರೂ ಮೈಗೆ ಒಮ್ಮೆಲೆ ಮುಳ್ಳು ಬಂದವು. ನನಗೆ ಗೊತ್ತಿತ್ತು, ನಿನ್ನ ಹುಂಬ ಮಕ್ಕಳು ಹತ್ತಿರ ಎಲ್ಲಿಯಾದರೂ ಅವಿತುಕೊಂಡಿರ ಬಹುದೆಂದು. ಗಿಡದ ಟೊಂಗೆಗಳೊಳಗಿಂದ ಇಣಿಕಿ ನೋಡಿದೆ. ನೆಲದ ಮೇಲೆ ನೀನೊಬ್ಬಳೇ ಕುಳಿತಿದ್ದೆ. ಆಗ ಮಾತ್ರ ನನ್ನಿಂದ ತಾಳುವುದಾಗ ಲಿಲ್ಲ.—ಸಂಪೂರ್ಣ ನಿಜ—ನಿಜವಾಗಿಯೂ ಏನೂ ಇಲ್ಲವೆ ? "

ಕ್ಷಣಹೊತ್ತು ಯೋಚಿಸಿ ಷೋಡಶಿ ಹೇಳಿದಳು : " ಮನೆಗೆ ಹೋದರೆ ಏನಾದರೂ ಊಟ ಸಿಕ್ಕೇ ಸಿಗುವುದು. "

"ಓಹೋ. ಆದರೆ ನನ್ನ ಮನೆಯ ವಿಚಾರ ನನಗಿಂತಲೂ ನೀನು ಚೆನ್ನಾಗಿ ಬಲ್ಲೆ" ಎಂದು ನುಡಿದು ಜೀವಾನಂದನು ಕೊಂಚ ನಕ್ಕ. ಅವನ ನಗೆ ನಿಲ್ಲುವುದರೊಳಗೇ ಷೋಡಶಿ ಒಮ್ಮೆಲೆ ನುಡಿದಳು : " ನೀವು ಇಡೀ ದಿನ ಉಪವಾಸವಿರುವುದು, ಮತ್ತು ಮನೆಯಲ್ಲಿ ಊಟದ ವ್ಯವಸ್ಥೆ ಇಲ್ಲದಿರು ವುದು – ಹೀಗೆಂದಾದರೂ ಆದದ್ದುಂಟೆ ? "

ಅವಳ ಧ್ವನಿಯಲ್ಲಿಯ ಅಸ್ವಸ್ಥತೆ ಮರೆಯಲ್ಲಿ ಉಳಿಯಲಿಲ್ಲ. ಆದರೆ ಅವನು ಮಾತ್ರ ಅತ್ಯಂತ ಸಜ್ಜನನಂತೆ ಶಾಂತವಾಗಿ ಮಾತನಾಡಿದ : "ಆಗ ದೇನು ಮತ್ತೆ ! ನಾನು ಉಂಡಿಲ್ಲವೆಂದು, ತಟ್ಟೆ ಬಡಿಸಿ ಮುಚ್ಚಿಟ್ಟು, ಉಪ ವಾಸ ಕುಳಿತು ಹಾದಿ ನೋಡುವ ವ್ಯಕ್ತಿಯೊಂದು ಮನೆಯಲ್ಲಿರುವಂತೆ ನಾನು ವ್ಯವಸ್ಥೆ ಮಾಡಿಲ್ಲ ! ಹೀಗೆ ಸುಮ್ಮನೆ ಕೋಪಗೊಂಡರೆ ಹೇಗೆ ನಡೆ ದೀತು, ಅಲಕಾ—" ಎಂದು ಅವನು ಹಾಗೆಯೆ ಸ್ವಲ್ಪ ನಕ್ಕು, " ಬರುತ್ತೇ ನಿನ್ನು. ಇಲ್ಲಿಗೆ ಬರಬೇಕೆಂದು ಮನಸು ಹರಿದರೆ, ನಿಲ್ಲುವುದಾಗದಿದ್ದರೆ, ಹೀಗೆಯೆ ಎಂದಾದರೂ ಬಂದರೆ ಮಾತ್ರ ನೀನು ಹೀಗೆ ಸಿಟ್ಟಾಗಬಾರದು, ಹೇಳಲಿಲ್ಲವೆಂದೀ " ಎಂದ.

ಉಚ್ಛೃಂಖಲ ಜೀವನದ ಈ ಮನುಷ್ಯನನ್ನು ಒಂದು ದಿನ ಷೋಡಶಿ ಕಣ್ಣಾರೆ ಕಂಡಿದ್ದಳು. ಅದೀಗ ನೆನಪಾಯಿತು. ಈ ಮನುಷ್ಯನೇನು ದುರಾಚಾರಿಯಾಗಲಿ, ಮದೋನ್ಮತ್ತನಾಗಲಿ ಹುಟ್ಟಾ ನಿಷ್ಠುರನಾಗಲಿ ಅಲ್ಲ, ಸುಳ್ಳು ಹೇಳಿ ತನ್ನ ಸರ್ವನಾಶಕ್ಕೆ ಸಿದ್ಧನಾಗಿದ್ದ ಅಂದಿನ ಜಮೀದಾರನು ಬೇರಾವನೋ ಇರಬೇಕು ಎಂದೆನಿಸಿತವಳಿಗೆ. ಮಂದಿರದಿಂದ ಅವಳನ್ನು ಹೊರಹೊರಡಿಸುವ ಅನ್ಯಾಯದ ಅಪ್ಪಣೆಯನ್ನು ವಿಧಿಸಿದವರು ಯಾರು ಮತ್ತೆ? ಕ್ಷಣಹೊತ್ತು ಅವಳ ಮನಸು ಹೊಯ್ದಾಡಿತು. ಕೊನೆಗೆ ಅವಳು ಮೆಲ್ಲನೆ ವಿಚಾರಿಸಿದಳು: ‘‘ದೇವಿಯ ಪ್ರಸಾದ ಕೊಂಚ ಇದೆ. ಆಗಬಹುದೆ?”

“ಆಗಬಹುದೇ? ಇದಕ್ಕೇನು ಹೇಳಲಿ?” ಎಂದು ಜೀವಾನಂದನು ಪುನಃ ಹಾಸಿಗೆಯ ಮೇಲೆ ಕುಳಿತುಕೊಂಡ. “ಪ್ರಸಾದ ಆಗಲಿಕ್ಕಿಲ್ಲವೆ? ತೆಗೆದುಕೊಂಡು ಬಾ ನೋಡಲು ನೋಡುವ. ದೇವರು ದಿಂಡರಲ್ಲಿ ನನಗೆಷ್ಟು ಭಕ್ತಿಯಿದೆ ಎಂಬುದನ್ನು ತೋರಿಸುತ್ತೇನೆ” ಎಂದು ಹೇಳಿದ.

ಅವನ ಎದುರಿನ ನೆಲವನ್ನು ಷೋಡಶಿ ನೀರುಗೈಯಿಂದ ಒರಸಿದಳು. ಒಳಗೆ ಹೋಗಿ ಎಲೆಯೊಳಗೆ ಪ್ರಸಾದವನ್ನು ಬಡಿಸಿಕೊಂಡು ಬಂದು, ಅವನ ಮುಂದಿಟ್ಟು ಕೇಳಿದಳು: “ನೋಡಿರಿ, ಆಗಬಹುದೋ ಹೇಗೋ.”

“ಅದನ್ನು ನೋಡುವುದೇ ಬೇಡ” ಎಂದು ಗೋಣುಹಾಕುತ್ತ ಜೀವಾನಂದನೆಂದ: “ಆದರೆ ಇದನ್ನು ನಿನಗಾಗಿ ತಂದಿದ್ದೆಯಲ್ಲವೆ?”

“ಎಂದರೆ, ನಿಮಗಾಗಿ ಬೇರೆ ಪ್ರಸಾದವನ್ನು ತಂದಿಟ್ಟಿರುತ್ತೇನೆಂದು ತಿಳಿದು ಹೀಗೆ ಕೇಳುವಿರಾ?

ಜೀವಾನಂದನು ನಗಲಾರಂಭಿಸಿದ. ಬಳಿಕೆಂದ: “ಅಲ್ಲವೇ, ಅಲ್ಲ. ನಾನು ಅದನ್ನು ಕೇಳಲಿಲ್ಲ. ಇನ್ನು ಉಳಿದಿಲ್ಲವಲ್ಲವೇ ಎಂದು ನಾನು ವಿಚಾರಿಸಿದ್ದು.”

“ಉಳಿದಿಲ್ಲ.”

‘‘ಹಾಗಾದರೆ ಎರಡನೆಯವರ ಬಾಯೊಳಗಿನ ತುತ್ತನ್ನು ಕಸಿದು ಕೊಂಡು ತಿಂದಂತೆಯೇ ಎನ್ನು, ಅಲಕಾ.’’

" ಎರಡನೆಯವರ ತುತ್ತನ್ನು ಕಸಿದುಕೊಂಡು ತಿಂದರೆ ನಿಮಗೆ ಕೆಟ್ಟೆನಿಸುವುದಿಲ್ಲ ಅಲ್ಲವೇ ? "

ಈ ಪ್ರಶ್ನೆಗೆ ಹಸನ್ಮುಖದಿಂದ ಉತ್ತರ ಕೊಡುವುದು ಜೀವಾನಂದನಿಗಾಗಲಿಲ್ಲ. ಅವನೆಂದ: " ಯಾರು ಬಲ್ಲರು ? ನಿಶ್ಚಿತವಾಗಿ ಏನು ಹೇಳುವುದಕ್ಕೂ ಆಗುವುದಿಲ್ಲ, ಅಲಕಾ ಅದಿರಲಿ. ನೀನೇನು ತಿನ್ನುತ್ತೀ ? ಕೊನೆಯಪಕ್ಷ ಇದರಲ್ಲಿ ಅರ್ಧವನ್ನಾದರೂ ತೆಗೆದಿಟ್ಟುಕೋ. "

" ಹಾಗೆ ಮಾಡಿದರೆ ನನಗೂ ಸಾಲುವುದಿಲ್ಲ, ನಿಮ್ಮ ಹೊಟ್ಟೆಯೂ ತುಂಬುವುದಿಲ್ಲ. "

" ತುಂಬದಿದ್ದರಿಲ್ಲ. ನಿನಗೆ ಇಡೀ ಉಪವಾಸ ಬೇಡ." ಜೀವಾನಂದನು ಆಗ್ರಹದಿಂದ ನುಡಿದ.

ಇಂದು ಷೋಡಶಿಗೆ ಊಟ ತಿನಿಸಿನ ಪರಿವೆಯಿರಲಿಲ್ಲ. ಜೀವಾನಂದನೂ ಬರದಿದ್ದರೂ ಅವಳು ಹಾಗೆಯೇ ಬಿದ್ದುಕೊಳ್ಳುತ್ತಿದ್ದಳು. ಪ್ರಸಾದಕ್ಕೆ ಕೈ ಕೂಡ ಹಚ್ಚುತ್ತಿರಲಿಲ್ಲ. ಆದರೆ ಅದನ್ನು ಸ್ಪಷ್ಟವಾಗಿ ಹೇಳದೆ ಅವಳೆಂದಳು : " ಭೈರವಿಗೆ ಉಪವಾಸದ ಅಭ್ಯಾಸವಿರುತ್ತದೆ. ಒಂದು ರಾತ್ರಿಯ ನನ್ನ ಉಪವಾಸದ ಯೋಚನೆಯಿಂದ ನೀವೇಕೆ ತ್ರಾಸಮಾಡಿಕೊಳ್ಳುವಿರಿ ? ಸುಮ್ಮನೆ ಏಕೆ ಹೊತ್ತು ಕಳೆಯುತ್ತೀರಿ ? ಕೂಡಿರಿ, ನಿಮ್ಮ ಅಚಲ ಭಕ್ತಿಯ ಪ್ರಮಾಣವನ್ನು ತೋರಿಸಿರಿ."

" ತೋರಿಸುತ್ತೇನೆ. – ಆದರೆ ನಿನ್ನ ಕುತ್ತನ್ನು ಕಸಿದುಕೊಂಡೆನಲ್ಲಾ ಎಂದು, ನನಗೀಗ ಅಷ್ಟೊಂದು ಉತ್ಸಾಹ ಉಳಿದಿಲ್ಲ. "

" ಒಳ್ಳೇದು, ಇದ್ದಷ್ಟು ಉತ್ಸಾಹದಿಂದ ಆರಂಭಿಸಿರಿ " ಎಂದು ಷೋಡಶಿ ಕೊಂಚ ನಕ್ಕು ಮತ್ತೆಂದಳು : " ನನ್ನನ್ನು ಮೋಸಗೊಳಿಸುವ ಮತ್ತೊಂದು ಹೊಸ ಅಪರಾಧ ಮಾಡಬೇಡಿರಿ. ನೀವು ಯಾವ ವಿಷಯವಾಗಿ ಈ ವಾದ ಹಾಕುತ್ತಿರುವಿರೋ ಅದಕ್ಕಾಗಿ ನನಗೆ ನಾಚಿಕೆಯಾಗುತ್ತದೆ. ಇನ್ನು ಸಾಕಿನ್ನು. "

ಮತ್ತೇನೂ ಮಾತನಾಡದೆ ಜೀವಾನಂದನು ತಿನ್ನಲಾರಂಭಿಸಿದ. ಒಂದೆರಡು ನಿಮಿಷಗಳ ತರುವಾಯ ಒಮ್ಮೆಲೆ ಮೋರೆಯನ್ನು ಮೇಲೆತ್ತಿ ಅವಳ ಮುಖವನ್ನು ನೋಡುತ್ತ ಅವನೆಂದ : " ಸುಮಾರು ಹದಿನೈದು

ವರುಷ ಆಗಿರಬಹುದು ಅಲ್ಲವೆ? ಇಂದೊಬ್ಬ ದೊಡ್ಡ ಮನುಷ್ಯನಾಗಿರುತ್ತಿದ್ದೆ.—"

ಷೋಡಶಿ ಮೌನವಾಗಿ ನೋಡುತ್ತಲಿದ್ದಳು. ಸುಮಾರು ಹದಿನೈದು ವರ್ಷ ಎಂದುದರ ಉದ್ದೇಶವು ಅವಳಿಗೆ ತಿಳಿಯಿತು. ಕೊನೆಯ ಉದ್ಗಾರವು ಮಾತ್ರ ಅರ್ಥವಾಗಲಿಲ್ಲ.

ಜೀವಾನಂದನು ಹೇಳುತ್ತಲಿದ್ದ: "ಮಿಕ್ಕದ್ದೆಲ್ಲ ಇರಲಿ. ಈ ಮದ್ಯದ ವಿಚಾರವನ್ನೇತಕ್ಕೊ. ಸಾಯಲಿಕ್ಕಾಗಿದ್ದೆ—ನೀನು ಅದನ್ನು ಕಣ್ಣಾರೆ ನೋಡಿದ್ದೀ—ಆದರೆ ಆ ಮದ್ಯದ ದವಡೆಯಿಂದ ನನ್ನನ್ನು ಬಿಡಿಸುವಂಥ ಗಟ್ಟಿ ಮನುಷ್ಯ ಒಬ್ಬನೂ ಇಲ್ಲ. ಯಾರಿಗೆ ಗೊತ್ತು, ಇನ್ನೂ ಸಮಯವಿದೆ; ಇನ್ನು ಮೇಲಾದರೂ ಇದರಿಂದ ಉಳಿದುಕೊಂಡೇನು: ಹೊರುವೆಯಾ ನನ್ನ ಭಾರವನ್ನು ಅಲಕಾ?"

ಷೋಡಶಿಯ ಅಂತರಂಗದಲ್ಲಿ ನಡುಕ ಹುಟ್ಟಿತು. ಕಣ್ಣು ಮುಚ್ಚಿದಳು. ಹೈಮ, ಅವಳ ಗಂಡ, ಅವರ ಮಗು, ಅವರ ಆಳುಹೋಳುಗಳೂ, ಆ ಸಂಸಾರದ ಅಸಂಖ್ಯ ವಿಲಕ್ಷಣ ಚಿತ್ರಗಳು ಅವಳ ಕಣ್ಮುಂದೆ ಭರಭರನೆ ಹಾಯ್ದು ಹೋದವು.

"ನನ್ನೆಲ್ಲ ಭಾರವನ್ನು ನೀನು ವಹಿಸಿಕೊಳ್ಳುವೆಯಾ ಅಲಕಾ?" ಜೀವಾನಂದನು ಮತ್ತೆ ಕೇಳಿದ.

ಆತ್ಮಸಮರ್ಪಣೆಯ ಈ ವಿಲಕ್ಷಣವಾದ ತಳಮಳದ ಕರೆಯನ್ನು ಕೇಳಿ ಷೋಡಶಿ ಬೆಚ್ಚಿದಳು. ಈವರೆಗಿನ ಜೀವಮಾನದಲ್ಲಿ ಯಾರೂ ಅವಳಲ್ಲಿ ಈ ರೀತಿ ಬೇಡಿಕೊಂಡಿರಲಿಲ್ಲ. ಇದು ಪೂರಾ ಹೊಸ ಅನುಭವ. ಆದರೆ ಭೈರವೀ ಜೀವನದ ಸಂಯಮದ ಕಠೋರತೆಯ ಮೂಲಕ ಅವಳು ಆತ್ಮವಿಸ್ಮೃತಳಾಗಲಿಲ್ಲ. ಕ್ಷಣ ಹೊತ್ತು ತಡೆದು ಅವಳೆಂದಳು: "ಹೀಗೆಂದರೇನು? ನನ್ನ ಮೇಲೆ ಬಂದಿರುವ ಆರೋಪವನ್ನು—ಆದರ ಪಂಚಾಯತಿ ನೀವೇ ನಡೆಸಿದ್ದೀರಿ—ಸಿದ್ಧಗೊಳಿಸಬೇಕೆಂದು ಬಗೆದಿರುವಿರೇನು ನೀವು? ನಮ್ಮ ತಾಯಿಯನ್ನು ಮೋಸಗೊಳಿಸಿದಿರಿ; ನನ್ನನ್ನು ಮೋಸಗೊಳಿಸುವುದು ಬಹಳ ಕಠಿನವಿದೆ."

"ನಾನು ಹಾಗೆಲ್ಲಿ ಎನ್ನುತ್ತೇನೆ? ನಿನ್ನ ವಿಷಯದಲ್ಲಿ ನನ್ನಿಂದ ತಿಳಿಯದೆ ದುರ್ವ್ಯವಹಾರ ನಡೆದದ್ದೇನೋ ನಿಜ. ಅದರ ಪಂಚಾಯತಿ

ನಡೆಸಿದ್ದಾದರೂ ಆ ಆರೋಪ ಸತ್ಯವೆಂದು ನಂಬಿ ಅಲ್ಲ. ಈ ಧಿಟ್ಟ ಹೆಂಗು ಸಿಗೆ ಬಲೆ ಬೀಸಿದವನು ಯಾರಿರಬಹುದು ಎಂದೇ ನನ್ನ ಯೋಚನೆ."

ಆಶ್ಚರ್ಯ ಚಕಿತಳಾಗಿ ಷೋಡಶಿ ಕೇಳಿದಳು : "ಆ ಜನಗಳು ಹೆಸರು ಹೇಳಲಿಲ್ಲವೆ?"

"ಇಲ್ಲ. ನಾನು ಮತ್ತೆ ಮತ್ತೆ ಎಷ್ಟು ಸಲ ಕೇಳಿದರೂ ಅವರು ಹೇಳುವುದಿಲ್ಲ."

"ಹೂಂ, ಇನ್ನು ಉಣ್ಣಿರಿ ನೀವು" ಎಂದು ಷೋಡಶಿ ಸ್ತಬ್ಧವಾಗಿ ಕುಳಿತಳು.

ನಾಲ್ಕೈದು ತುತ್ತು ತೆಗೆದುಕೊಂಡ ಬಳಿಕ ಜೀವಾನಂದನು ಮೇಲೆ ನೋಡಿ, "ಇನ್ನು ಹೆಚ್ಚಿಗೆ ಹೋಗುವುದಿಲ್ಲ." ಎಂದ.

"ಹೆಚ್ಚು ಉಣ್ಣಿರೆಂದು ಯಾರು ಹೇಳಿದರು? ಸಾಧಾರಣವಾಗಿ ಜನರುಣ್ಣುವಷ್ಟಾದರೂ ಉಣ್ಣಲಾರಿರಾ?"

"ಅಷ್ಟೂ ಹೋಗುವುದಿಲ್ಲ. ಆಯಿತು ನನ್ನ ಊಟ."

"ಇಲ್ಲ. ಇದೇನೂ ನಡೆಯಲಾರದು. ಪ್ರಸಾದವನ್ನು ಹೀಗೆ ಅನಾದರ ಮಾಡಿದರೆ ನನ್ನ ಹುಂಬ ಮಕ್ಕಳನ್ನು ಕರೆಯುತ್ತೇನೆ."

ಜೀವಾನಂದನು ನಕ್ಕ. "ಅದು ನಿನ್ನಿಂದ ಸಾಧ್ಯವಿಲ್ಲ. ನಿನ್ನ ಶಕ್ತಿಯನ್ನು ನಾನೆಲ್ಲಾ ಬಲ್ಲೆ. ಪೋಲಿಸನಿಂದ ಮ್ಯಾಜಿಸ್ಟ್ರೇಟರವರೆಗೆ ಎಲ್ಲರೂ ನೋಡಿದ್ದಾರೆ ಅದರ ಮಾದರಿ. ನಿಮ್ಮಮ್ಮ ಒಮ್ಮೆ ನಿನ್ನನ್ನು ನನಗೆ ಕೊಟ್ಟು ಬಿಟ್ಟಿದ್ದಾಳೆ, ಅದನ್ನು ಅಲ್ಲಗಳೆಯುವ ಶಕ್ತಿ ನಿನ್ನಲ್ಲಿಲ್ಲ" ಎಂದ.

ಷೋಡಶಿ ಸುಮ್ಮನಿದ್ದಳು. ಆಚಮನಮಾಡಿ ಜೀವಾನಂದನು ಮತ್ತೆ ಹೇಳಿದ: "ನಾನು ಒಬ್ಬನೇ ಕುಳಿತುಕೊಂಡಾಗ ಆ ರಾತ್ರಿಯ ಸಂಗತಿ ನೆನಪಾಗುತ್ತದೆ; ಅದನ್ನೇ ಯೋಚಿಸ ತೊಡಗುತ್ತೇನೆ; ಆಗ ವೇಳೆ ಹೇಗೆ ಹೋಗುತ್ತದೆಯೋ ಗೊತ್ತು ಕೂಡ ಆಗುವುದಿಲ್ಲ. ಆಳುಗಳ ಕೋಣೆ ಯೊಳಗೆ ಹಾಕುತ್ತೇನೆಂದು ನಾನೆಂದಾಗ ನೀನು ಹೆದರಿ ಕೈಜೋಡಿಸಿ ಅತ್ತೆ! ಮರೆತೆಯಾ ಅದನ್ನು?"

"ಇಲ್ಲ."

"ಅಮೇಲೆ ನನಗೆ ಹೊಟ್ಟೆನೋವು ಎದ್ದಿತು. ಕೋಣೆಯೊಳಗೆ ನೀನೊ

ಬ್ಬಳು, ನಾನೊಬ್ಬ. ಕೊನೆಗೆ ನಿನ್ನ ತೊಡೆಯಮೇಲೆ ತಲೆಯಿಟ್ಟು ಇಡೀ ರಾತ್ರಿ ಕಳೆಯಬೇಕಾಯಿತು ನಾನು. ಆ ತರುವಾಯದ ಸಂಗತಿಯನ್ನು ನೆನೆದರೆ ನನಗೆ ಹೇಗೆ ಹೇಗೋ ಆಗುತ್ತದೆ. ನಿನಗೆ ನಾನು ಲಂಚಕೊಡಲು ಯತ್ನಿಸಿದೆ; ಅದೀಗ ನೆನಪಾದರೆ ಲಜ್ಜೆಯಿಂದ ನನ್ನ ಮೈ ಜುಮ್ಮೆನ್ನುತ್ತದೆ. ಮೊನ್ನೆ ಪುರಿಗೆ ಹೋಗಿದ್ದೆ. ಅಲ್ಲಿ ಹೀಗೆಯೇ ಸಾಯಲಾಗಿದೆ. 'ಅಲಕಾನ್ನ ಕರಿಸಿಕೋ ಅಣ್ಣಾ' ಎಂದು ಹೇಳಿದ ಪ್ರಫುಲ್ಲ. 'ಆಕೆ ಏಕೆ ಬಂದಾಳು?' ಎಂದೆ ನಾನು. 'ಬಲಾತ್ಕಾರದಿಂದ ಹಿಡಿತರಿಸಿರಿ' ಎಂದು ಅವನೆಂದ. 'ಬಲಾತ್ಕಾರದಿಂದ ಹಿಡಿತಂದರೆ ಲಾಭವೇನು?' ಎಂದು ನಾನೆಂದುದಕ್ಕೆ ಅವನು 'ಒಮ್ಮೆ ಮನೆಯ ಗೃಹಿಣಿಯಂತೂ ಆಗಲಿ, ಲಾಭ ನಷ್ಟದ ಲೆಕ್ಕ ಆಮೇಲೆ ಮಾಡುವ' ಎಂದು ಉತ್ತರವಿತ್ತ. ನಿನಗೆ ಅವನ ಗುರುತಿಲ್ಲ. ಆದರೆ ಅವನು ನಿನ್ನ ಮಹಾಭಕ್ತ; ಅವನಂಥವರು ಎಲ್ಲಿ ಹುಡುಕಿದರೂ ಸಿಕ್ಕಲಿಕ್ಕಿಲ್ಲ."

ಆ ಭಕ್ತನ ವಿಷಯವಾಗಿ ಹೆಚ್ಚು ತಿಳಿದುಕೊಳ್ಳುವ ಕುತೂಹಲವು ಷೋಡಶಿಗೆ ಉಂಟಾಯಿತು. ಆದರದನ್ನು ಬಿಗಿಹಿಡಿದಳು.

"ರಾತ್ರಿ ಬಹಳವಾಯಿತು. ಇನ್ನು ನಿನ್ನನ್ನು ಕೂಡಿಸಿಕೊಳ್ಳುವುದು ಸರಿಯಲ್ಲ. ನಾನೀಗ ಹೋಗುತ್ತೇನೆ. ಹೇಗೆ?" ಎಂದ ಜೀವಾನಂದ.

"ಆದರೆ ನಿಮ್ಮದೇನೋ ಕೆಲಸವಿತ್ತಲ್ಲವೆ?"

"ಕೆಲಸವೆ? ಏನು ಕೆಲಸವಿದ್ದಿತೋ ಏನೋ ನೆನಪಿಲ್ಲ. ನನಗೀಗ ತೋರುವುದೊಂದೇ–ನಿನ್ನೊಡನೆ ಮಾತನಾಡುತ್ತ ಕುಳಿತುಕೊಳ್ಳುವುದೇ ನನ್ನ ಕೆಲಸ. ಹೊತ್ತು ಒಳ್ಳೇ ಸೊಗಸಾಗಿ ಕಳೆಯಿತಲ್ಲವೆ? ನನಗೆ ಇಷ್ಟು ಮನೋರಂಜನೆಯಾದೀತೆಂದು ಮೊದಲು ಕಲ್ಪನೆಯೂ ಇರಲಿಲ್ಲ!–ಒಳ್ಳೇದು ಅಲಕಾ, ನಿಜವಾಗಿಯೂ ಮತ್ತೆ ನಿನ್ನ ಲಗ್ನವಾಯಿತೇ?"

ಮೊಗವೆತ್ತಿ ನೋಡಿ ಷೋಡಶಿ ಹೇಳಿದಳು: "ಮತ್ತೆಲ್ಲಿಯದು? ನನ್ನ ಲಗ್ನವಾದದ್ದು ಒಮ್ಮೆಯೆ."

"ನಿಮ್ಮಪ್ಪ ನಿನ್ನನ್ನು ನನಗೆ ಒಪ್ಪಿಸಿದ್ದು ನಿಜವಲ್ಲವೇನು?"

"ಅಲ್ಲ, ಅದು ನಿಜವಲ್ಲ. ನನ್ನೊಡನೆ ನಮ್ಮ ತಾಯಿ ಕೊಟ್ಟ ಹಣವನ್ನಷ್ಟೇ ನೀವು ತೆಗೆದುಕೊಂಡಿರಿ; ನನ್ನನ್ನು ಸ್ವೀಕರಿಸಲಿಲ್ಲ. ಮೋಸ

ಗಾರಿಕೆಯೇ ಹೊರತು, ಸತ್ಯದ ಅಂಶ ಎಳ್ಳಷ್ಟೂ ಇರಲಿಲ್ಲ ಅದ ರೊಳಗೆ."

ಜೀವಾನಂದನು ಸುಮ್ಮನೆ ಕುಳಿತುಕೊಂಡ. ಉತ್ತರ ಕೊಡಲು ಹವಣಿಸಲಿಲ್ಲ. ಐದು ನಿಮಿಷಗಳು ಹಾಗೆಯೇ ಹೋದವು. ಆಗ ಷೋಡಶಿ ಒಳಗೊಳಗೆ ಚಂಚಲೆಯಾದಳು. ಸಣ್ಣಾದ ದೀಪದ ಬತ್ತಿಯನ್ನು ಚಾಚುವ ನೆವದಿಂದ ಅವಳು ಬಾಗಿ ಕದ್ದು ನೋಡಿದಳು-ಅವನು ಧ್ಯಾನ ಮಗ್ನನಂತೆ ಕುಳಿತಿದ್ದ. ಅದನ್ನು ಭಂಗಗೊಳಿಸುವುದು ಅವಳಿಗೆ ಕಠಿನವಾಯಿತು. ಕೆಲ ಹೊತ್ತಿನ ಮೇಲೆ ಅವನು ತಾನಾಗಿ ಮಾತನಾಡಲಾರಂಭಿಸಿದಾಗ, ಅದೆಷ್ಟೋ ದೂರದಿಂದ ಮಾತನಾಡುತ್ತಿದ್ದಂತೆ ಅವಳಿಗೆನಿಸಿತು.

"ಅಲಕಾ, ನಿನ್ನ ಈ ತಿಳಿವಳಿಕೆ ತಪ್ಪು."

"ಯಾವ ತಿಳಿವಳಿಕೆ?"

"ನೀನು ಮನಸಿನೊಳಗೆ ತಿಳಿದುಕೊಂಡಿದ್ದೀಯಲ್ಲ ಅದು. ಆ ಸಂಗತಿ ಯನ್ನು ಯಾರಿಗೂ ಹೇಳಬಾರದೆಂದು ನಿಶ್ಚಯಿಸಿದ್ದೆ. ಆದರೆ ಆ 'ಯಾರಿಗೂ' ಎಂಬುದರಲ್ಲಿ ನಿನ್ನನ್ನು ಸೇರಿಸಿದರೆ ಈಗ ನಡೆಯುವಂತಿಲ್ಲ. ನಿಮ್ಮ ತಾಯಿಗೆ ನಾನು ಠಕ್ಕು ಹಚ್ಚಿದ್ದೆ ನಿಜ; ನಿನ್ನನ್ನು ಠಕ್ಕಿಸಲಿಕ್ಕೆ ಮಾತ್ರ ದೇವರು ನನಗೆ ಅವಕಾಶ ಕೊಡಲಿಲ್ಲ. ನನ್ನದೊಂದು ಮಾತು ಕೇಳುವೆಯಾ?"

"ಹೇಳಿರಿ."

"ನಾನು ಸತ್ಯವಾದಿಯಲ್ಲ ನಿಜ. ಆದರೆ ನನ್ನ ಇಂದಿನ ಮಾತನ್ನು ನೀನು ನಂಬು. ನಿನ್ನ ತಾಯಿಯ ಪರಿಚಯ ನನಗಿತ್ತು. ಅವಳ ಮಗಳನ್ನು ಹೆಂಡತಿಯೆಂದು ಅಂಗೀಕರಿಸುವುದು ನನ್ನ ಉದ್ದೇಶವಿರಲಿಲ್ಲ. ನನ್ನ ಕಣ್ಣಿತ್ತು ಅವಳ ದುಡ್ಡಿನ ಮೇಲೆ. ಆದರೆ ಆ ರಾತ್ರಿ ಸಹಜವಾಗಿ ನನ್ನ ಕೈಗೆ ಸಿಕ್ಕಾಗ ನಿನ್ನನ್ನು ಬಿಟ್ಟುಬಿಡುವ ಇಚ್ಛೆ ನನಗಾಗಲಿಲ್ಲ."

"ಹಾಗಾದರೆ ಏನು ಇಚ್ಛೆಯಾಯಿತು?"

"ಹೋಗಲಿ. ಅದನ್ನೇತಕ್ಕೆ ನಿನಗೆ ಹೇಳುವುದು? ಕೊನೆಯ ತನಕ ಕೇಳಿದರೆ ನಿನ್ನಷ್ಟಕ್ಕೆ ನಿನಗೇ ತಿಳಿಯುವುದು. ನಿನಗದು ತಿಳಿದರೆ ನನಗೆ ಲಾಭವೂ ಇಲ್ಲ, ನಷ್ಟವೂ ಇಲ್ಲ.—ಆಗ ನಾನು ನಿನನ್ನು ಬಿಟ್ಟು ಓಡಿ ಹೋಗಲಿಲ್ಲ."

ಷೋಡಶಿಗೆ ಅವನ ಉದ್ದೇಶ ಗೊತ್ತಾಯಿತು. ಅವಳಿಗೆ ತಿರಸ್ಕಾರ ಉಂಟಾಯಿತು. ಸ್ವೈರವಿರದ್ದಿತು. "ನೀವು ಓಡಿಹೋಗಲಿಲ್ಲವೆಂಬ ಕಥೆಯನ್ನೊಮ್ಮೆ ಪೂರಾ ಹೇಳಿಬಿಡಿರಿ" ಎಂದಳು.

ಅವಳ ಉದ್ಗಾರದಲ್ಲಿಯ ಕಠೋರತನವನ್ನು ಅರಿತು ನಕ್ಕು ಜೀವಾನಂದನೆಂದ: "ಅಲಕಾ, ನಾನು ಮೂರ್ಖನಲ್ಲ. ಆ ಕಥೆಯನ್ನು ಹೇಳುವುದರಿಂದ ಏನು ಪರಿಣಾಮವಾಗುದೆಂಬುದನ್ನು ಲಕ್ಷ್ಯದಲ್ಲಿಟ್ಟೇ ಹೇಳೇನು. ನಿನ್ನ ತಾಯಿ ಎತ್ತಿದ ಪ್ರಸ್ತಾವವನ್ನು ನಾನೇಕೆ ಒಪ್ಪಿದೆ ಗೊತ್ತೇ? ನಾನೊಬ್ಬ ಹೆಣ್ಣುಮಗಳ ಹಾರವನ್ನು ಕದ್ದಿದ್ದೆ. ದುಡ್ಡು ಕೊಟ್ಟು ಪ್ರಕರಣವನ್ನು ಮುಗಿಸಿಬಿಡಬಹುದೆಂದು ನನಗೆನಿಸಿತ್ತು. ಪ್ರಕರಣವೇನೋ ಮುಗಿಯಿತು. ಆದರೆ ಹೊರಟಿದ್ದ ವಾರಂಟನ್ನು ತಡೆಯುವುದಾಗಲಿಲ್ಲ. ಆರು ತಿಂಗಳ ಶಿಕ್ಷೆಯಾಯಿತು ಆ ರಾತ್ರಿ ಹೊರಬಿದ್ದದ್ದೇ ಹೊರಬಿದ್ದದ್ದು, ಮತ್ತೆ ಅಲ್ಲಿಗೆ ಹೋಗಲಿಕ್ಕಾಗಲಿಲ್ಲ."

ಷೋಡಶಿಯ ಉಸಿರೇ ನಿಂತತಾಗಿತ್ತು. ಅವಳು ಹಾಗೆಯೇ ಪ್ರಶ್ನಿಸಿದಳು: "ಮುಂದೆ?"

ಜೀವಾನಂದನು ನಕ್ಕು ನುಡಿದ: "ಮುಂದಿನ ಕಥೆಯೂ ಕಡಿಮೆಯಿಲ್ಲ. ಜೀವಾನಂದ ಬಾಬುವಿನ ಮೇಲೆ ಇನ್ನೂ ಒಂದು ವಾರಂಟಿತ್ತು. ಅದಕ್ಕೂ ಒಂದು ತಿಂಗಳ ಹಿಂದೆ ಅವನು ಉಗಿಬಂಡಿಯಲ್ಲಿ ಪ್ರವಾಸಿಕರೊಬ್ಬರ ಬ್ಯಾಗ್ ತೆಗೆದುಕೊಂಡು ಕಾಣೆಯಾಗಿದ್ದ. ಅದಕ್ಕಾಗಿ ಮತ್ತೆ ಒಂದೂವರೆ ವರ್ಷ. ಹೀಗೆ ಎರಡು ವರ್ಷ ಅಜ್ಞಾತವಾಸದಲ್ಲಿದ್ದು, ಬೀಜಗಾವದ ಭಾವೀ ಜಮೀದಾರ ಬಾಬು ಮತ್ತೆ ರಂಗಸ್ಥಳಕ್ಕೆ ತಿರುಗಿ ಬಂದಾಗ, ಎಲ್ಲಿಯ ಅಲಕಾ, ಎಲ್ಲಿ ಅವಳ ತಾಯಿ!"

ಜೀವಾನಂದನ ಆತ್ಮಚರಿತೆಯ ಒಂದು ಅಧ್ಯಾಯ ಮುಗಿಯಿತು. ಇಬ್ಬರೂ ನೀರವವಾಗಿ ಸ್ತಬ್ಧವಾಗಿ ಕುಳಿತಿದ್ದರು.

"ರಾತ್ರಿ ಎಷ್ಟಿದೆ?"

"ಇನ್ನು ಸ್ವಲ್ಪವೇ ಉಳಿದಂತಿದೆ."

"ಹಾಗಾದರೆ ಈ ಕತ್ತಲೆಯಲ್ಲಿ ಮನೆಗೆ ಹೋಗುವುದರೊಳಗೆ ಅರ್ಥವಿಲ್ಲ."

" ಅರ್ಥವಿಲ್ಲವೆ ? ಎಂದರೆ ? "

" ಇಲ್ಲಿಯೇ ಕಂಬಳಿ ಹಾಸಿಕೊಡುತ್ತೇನೆ. ಸ್ವಲ್ಪ ವಿಶ್ರಾಂತಿ ತೆಗೆದು ಕೊಳ್ಳಿರಿ " ಎಂದಳು ಷೋಡಶಿ.

" ವಿಶ್ರಾಂತಿ ತೆಗೆದುಕೊಳ್ಳಲೆ ? ಇಲ್ಲಿ ? " ಕಣ್ಣು ಹಿಗ್ಗಿಸಿ ನೋಡುತ್ತ ಜೀವಾನಂದನೆಂದ.

" ಏನಡ್ಡಿಯಿದೆ ? "

" ಆದರೆ, ಜಮೀದಾರರಂಥ ದೊಡ್ಡಮನುಷ್ಯರಿಗೆ ಇಲ್ಲಿ ತೊಂದರೆಯಾಗಲಿಕ್ಕಿಲ್ಲವೇ ಅಲಕಾ ?"

" ಆದರೂ ಇರಬೇಕು. ಬಡವರ ಕಷ್ಟವನ್ನು ಒಂದಿಷ್ಟು ಅನುಭವಿಸಿ ಹೋಗಿರಿ ಈವೊತ್ತು."

ಜೀವಾನಂದನು ಸುಮ್ಮನಿದ್ದ. ಅವನ ಕಣ್ಣುಗಳ ಮೂಲೆಗಳಲ್ಲಿ ನೀರೂರಿತ್ತು. ' ನನಗೆ ಗೊತ್ತಿದೆ. ಆದರೆ ಅನುಭವ ಪಡೆಯಬೇಕಾದ ಮನುಷ್ಯ ಸತ್ತಿದ್ದಾನೆ ' ಎಂದು ಉತ್ತರ ಕೊಡಬೇಕೆಂದು ಅವನಿಗೆನಿಸಿತು. ಆದರೆ ಅವನು ಹಾಗೆನ್ನದೆ " ಇಲ್ಲಿಯೇ ನಿದ್ದೆ ಹತ್ತಿಬಿಟ್ಟರೆ ಅಲಕಾ ?" ಎಂದ.

" ಹತ್ತಲೂಬಹುದು " ಎಂದು ಶಾಂತವಾಗಿ ಅಲಕೆ ನುಡಿದಳು.

## ೧೯

ಎಂಜಲನ್ನು ಬಳಿದು ಚೆಲ್ಲುವುದಕ್ಕಾಗಿ, ಅಡುಗೆ ಮನೆಯ ಇತರ ಕಿರುಕುಳ ಕೆಲಸಗಳನ್ನು ಮುಗಿಸುವುದಕ್ಕಾಗಿ ಷೋಡಶಿ ಅಲ್ಲಿಂದ ಹೊರಟು ಹೋದಳು. ಆಗ ಜೀವಾನಂದನ ದೃಷ್ಟಿ ಹರಿದ ಪತ್ರದ ತುಣುಕಿನ ಕಡೆ ಹೋಯಿತು. ಅದನ್ನು ಸಹಜವಾಗಿ ಕೈಗೆ ತೆಗೆದುಕೊಂಡು ನೋಡಲು ಮುತ್ತಿನಂತಹ ಅಕ್ಷರಗಳು ಅವನ ನೋಟವನ್ನು ಸೆಳೆದವು. ದೀಪದ ಹತ್ತಿರ ಹಿಡಿದು ಅದನ್ನು ಒಂದುಸುರಿನಲ್ಲಿ ಓದಿ ಮುಗಿಸಿದ. ಪತ್ರದ ಹೆಚ್ಚು ಪಾಲು ಹರಿದುಹೋಗಿದ್ದರೂ ಬರೆದವಳಿಗೆ ಸಂಕಟ ಬಂದಿದೆಯೆಂಬುದಷ್ಟು ಅವನಿಗೆ ತಿಳಿಯಿತು. ಸಹಾಯ ಸಿಕ್ಕಲಿ ಬಿಡಲಿ, ಯಾರ ಸಹಾನುಭೂತಿಯು

ಅಪೇಕ್ಷೆಯಿಂದ ಪತ್ರ ಬರೆದಿದ್ದಿತೋ! ಆ ವ್ಯಕ್ತಿ ಸ್ತ್ರೀಯೆಂದು ಎನಿಸುತ್ತಿದ್ದರೂ ಒಂದೊಂದೂ ಅಕ್ಷರದ ಹಿಂದುಗಡೆಯಿಂದ ಇಣಿಕುತ್ತಿದ್ದ ವ್ಯಕ್ತಿ ಮಾತ್ರ ಖಂಡಿತ ಸ್ತ್ರೀಯಲ್ಲ.

ಆ ಹರಕ ಕಾಗದ ಅವನ ಮನವನ್ನು ಹಿಡಿದುಬಿಟ್ಟಿತು. ಒಮ್ಮೆ ಓದಿದ, ಮತ್ತೊಮ್ಮೆ ಓದಿದ, ಇನ್ನೊಮ್ಮೆ ಓದಬೇಕೆಂಬಷ್ಟೊತ್ತಿಗೆ ಷೋಡಶಿಯು ಸದ್ದಾಯಿತು. ಅವನು ಮುಖವೆತ್ತಿ ನೋಡಿ ನುಡಿದ: "ಇಡೀ ಪತ್ರ ಓದಲಿಕ್ಕೆ ಸಿಕ್ಕಿದರೆ ನನಗೆ ಬಹಳ ಸಂತೋಷವಾಗುತ್ತಿತ್ತು. ಅಕ್ಷರಗಳಂತೆಯೇ ಭಾಷೆ. ಕೊಂಚವನ್ನೂ ಬಿಡಬೇಕೆನಿಸುವುದಿಲ್ಲ."

ಅವನ ಸ್ವರದಲ್ಲಿ ತುಸ ವ್ಯತ್ಯಾಸವು ಕಂಡುಬಂದರೂ ಷೋಡಶಿ ಮೊದಲಿನಂತೆಯೇ ಮಾತನಾಡಿದಳು: "ಸ್ವಲ್ಪ ಸರಿಯಿರಿ. ಕಂಬಳಿಯನ್ನು ಹಾಸಿ ಕೊಡುತ್ತೇನೆ."

ಜೀವಾನಂದನು ಕೇಳಿಸದವನಂತೆ ನುಡಿದ: "ಚಂಡಾಲ ಯಾರೆಂಬುದು ಸಾಮಾನ್ಯ ಬುದ್ಧಿಯ ಮನುಷ್ಯನಿಗೂ ತಿಳಿಯುತ್ತದೆ, ಈ ಪತ್ರದಿಂದ. ಅವನನ್ನು ಹೊಡೆದು ಹಾಕುವುದಕ್ಕಾಗಿ ದೇವತೆಯನ್ನು ಕರೆಯಲಾಗಿದೆಯಲ್ಲ, ಆಕೆ ಯಾರು? ಹೆಸರು ಹೇಳಬಹುದೆ?"

ಷೋಡಶಿ ಈಗಲೂ ತನ್ನ ಮನವನ್ನು ಅಂಕೆದಪ್ಪಗೊಡಲಿಲ್ಲ. ಚಳಿಗಾಲದಲ್ಲಿ ಅಕಸ್ಮಾತ್ತಾಗಿ ತೆಂಕಣಗಾಳಿ ಸುಳಿಯುವಂತೆ, ಈ ದಿನ ಅವಳ ಅಂತರಂಗದಲ್ಲಿ ಅಜ್ಞಾತವಾದ ಆಶೆಯೊಂದು ಜಾಗೃತವಾಗಿದ್ದಿತು. ಆದುದರಿಂದ ಜೀವಾನಂದನ ಚೇಷ್ಟೆ ಅಲ್ಲಿ ನಾಟಲಿಲ್ಲ. ಅವಳು ಅತ್ಯಂತ ಸಹಜವಾಗಿಯೆ ನುಡಿದಳು: "ಸರಿ ಸರಿ. ಮೊದಲು ಸ್ವಲ್ಪ ಏಳಿರಿ ನೀವು. ಒಂದಿಷ್ಟು ಹಾಸುತ್ತೇನೆ."

ಜೀವಾನಂದನು ತಿರುಗಿ ಮಾತನಾಡಲಿಲ್ಲ. ಒಂದು ಬದಿಗೆ ಸರಿದು ನಿಂತು ಅವಳು ಕೆಲಸಮಾಡುತ್ತಿರುವುದನ್ನೇ ನೋಡುತ್ತಲಿದ್ದ. ಷೋಡಶಿ ಮೊದಲು ಕಸಗುಡಿಸಿ ಸ್ವಚ್ಛಮಾಡಿದಳು. ಕಂಬಳಿಯನ್ನು ಜೋಡುಪದರು ಮಾಡಿ ಹಾಸಿದಳು. ಮಗ್ಗಲು ಹಾಸಿಗೆ ಇಲ್ಲದುದರಿಂದ ತನ್ನ ಒಗೆದ ಸೀರೆಯನ್ನೇ ಮೇಲೆ ಹಾಸಿದಳು. "ಕೂಡಿರಿ. ನಮ್ಮ ಮನೆಯಲ್ಲಿ ದಿಂಬು ಮಾತ್ರ ಇಲ್ಲ" ಎಂದಳು.

" ಬೇಕೇ ಆದರೆ ಅದೂ ಸಿಕ್ಕಬಹುದು. ಇಲ್ಲಿ ಯಾವುದಕ್ಕೂ ಕೊರತೆ ಯಿಲ್ಲ!" ಎಂದೆನ್ನುತ್ತ ಜೀವಾನಂದನು ಹಾಸಿಗೆಯ ಹತ್ತಿರ ಹೋಗಿ. ಹಾಸಿದ ಸೀರೆಯನ್ನು ತೆಗೆದು ಬದಿಗಿಟ್ಟ. ಅದನ್ನು ಕಂಡು ಷೋಡಶಿಗೆ ಮನಸಿನೊಳಗೇ ನಾಚಿಕೆಯಾಯಿತು. " ಅದನ್ನೇಕೆ ತೆಗೆದಿರಿ? ಕಂಬಳಿ ಮೈಗೆ ಒತ್ತಬಹುದು " ಎಂದಳು.

ಜೀವಾನಂದನು ಕುಳಿತುಕೊಂಡು ಹೇಳಿದ: " ಅದು ನಿಜ. ಆದರೆ ಈ ಅತಿ ಆದರ ಅದಕ್ಕಿಂತಲೂ ಹೆಚ್ಚು ಒತ್ತುವುದು. ಕಳಕಳಿಯೇನೋ ಬಹಳ ನವಿಯಾಗಿರುತ್ತದೆ. ಆದರೆ ಸುಮ್ಮನೆ ಆದರ ಸೋಗುಮಾಡುವುದ ರಿಂದ ಸುಖವೂ ಸಿಗುವುದಿಲ್ಲ, ಸ್ವಾರಸ್ಯವೂ ಇರುವುದಿಲ್ಲ! ಅದನ್ನು ಇನ್ನಾರಿಗಾದರೂ ಕೊಡು."

ಅವನ ಮಾತಿಗೆ ಷೋಡಶಿ ಆಶ್ಚರ್ಯಚಕಿತೆಯಾದಳು. ಒಂದು ಕ್ಷಣದೊಳಗೆ ಅವಳ ಮುಖ ಕಪ್ಪಿಟ್ಟಿತು.

" ಅವರ ಹೆಸರು ಏನೆಂದೆ? " ಜೀವಾನಂದನು ಕೇಳಿದ.

ಕೆಲಹೊತ್ತು ಷೋಡಶಿಗೆ ಯಾವುದೂ ಹೊಳೆಯಲಿಲ್ಲ. " ಯಾರ ಹೆಸರು? " ಎಂದು ಅವಳು ಪ್ರಶ್ನಿಸಿದಳು.

ಕೈಯೊಳಗಿನ ಕಾಗದದ ಕಡೆಗೊಮ್ಮೆ ನೋಡಿ ಜೀವಾನಂದನೆಂದ: "ದೈತ್ಯನ ವಧೆಗಾಗಿ ಬೇಗನೆ ಅವತರಿಸುವನಲ್ಲ, ಆತನದು; ಆ ದ್ರೌಪದಿಯ ಸಖನದು!—ಇನ್ನೂ ಹೇಳಲೇನು?"

ಈ ವ್ಯಂಗ್ಯೋಕ್ತಿಗೆ ಷೋಡಶಿ ಉತ್ತರ ಕೊಡಲಿಲ್ಲ. ಅವಳ ಕಣ್ಣ ಮುಂದಿನ ಮೋಹದ ತೆರೆ ಚಟ ಚಟ ಹರಿಯಿತು. ಕೊಂಚವೂ ಧರ್ಮದ ಕಲ್ಪನೆಯಿಲ್ಲದ, ಎಲ್ಲ ಬಗೆಯ ದೋಷಗಳಿಗೆ ಆಗರವಾದ, ನಿರ್ಭೀತ ಮನುಷ್ಯನ ವಿಲಕ್ಷಣವಾದ ಅಭಿನಯದಿಂದ ಅವಳ ಮನಸು ಒಂದು ಕ್ಷಣ ಮುಗ್ಧವಾಗಿ ದ್ರವಿಸಿತು. ಅಲ್ಲಿ ಎಲ್ಲಿಯೋ ಕ್ಷಮಾಮಿಶ್ರಿತವಾದ ಕರುಣೆಯ ಉದಯವಾಗಿದೆಯೆಂಬುದು ಅವಳ ಗಮನಕ್ಕೆ ಬರಲಿಲ್ಲ. ಮನಸಿನ ಈ ಕ್ಷಣಿಕ ಚಾಂಚಲ್ಯದಿಂದ ಅವಳ ಅಂತಃಕರಣವು ರುಕ್ಷವಾಯಿತು, ಕಠೋರವಾಯಿತು, ಗಂಭೀರವಾಯಿತು.

ಕೆಲಹೊತ್ತಿನ ಮೇಲೆ ಜೀವಾನಂದನು ಮತ್ತೆ ಅದೇ ಪ್ರಶ್ನೆಯನ್ನು

ಕೇಳಿದ. ಆಗ ಷೋಡಶಿ ಸ್ವರವನ್ನು ಅಂಕೆಯಲ್ಲಿಟ್ಟುಕೊಂಡು ನುಡಿದಳು: "ನಿಮಗೇತಕ್ಕೆ ಬೇಕು, ಆ ಹೆಸರು?"

"ಏತಕ್ಕೆ ಬೇಕೆಂದರೆ? ಮೊದಲೇ ತಿಳಿದಿದ್ದರೆ ನನ್ನ ರಕ್ಷಣೆಯ ಹಾದಿಯನ್ನು ಗೊತ್ತುಮಾಡಿಕೊಳ್ಳಲಾಗುತ್ತದೆ."

ತೀಕ್ಷ್ಣದೃಷ್ಟಿಯಿಂದ ಅವನನ್ನು ದಿಟ್ಟಿಸಿ ನೋಡುತ್ತ ಷೋಡಶಿಯೆಂದಳು: "ಆತ್ಮರಕ್ಷಣೆಯ ಅಧಿಕಾರ ನನಗೆ ಮಾತ್ರವೇ ಇಲ್ಲವೇನೋ!"

"ಇದ್ದೇ ಇದೆ" ಎಂದು ಜೀವಾನಂದನು ತಟ್ಟನೆ ಎದ್ದುಬಿಟ್ಟ.

"ಇದೆಯಲ್ಲವೆ? ಅದಕ್ಕೇ ಆ ಹೆಸರನ್ನು ನಿಮಗೆ ಹೇಳವುದಿಲ್ಲ. ನಿಮ್ಮ ರಕ್ಷಣೆ, ನಮ್ಮ ರಕ್ಷಣೆ ಕೂಡಿಯೇ ಆಗುವುದು ಅಸಂಭವ."

ಕ್ಷಣಹೊತ್ತು ಸುಮ್ಮನಿದ್ದು ಜೀವಾನಂದನೆಂದ: "ಹೀಗೇನು? ಹಾಗಿದ್ದರೆ ನನ್ನ ರಕ್ಷಣೆಯ ಯೋಚನೆಯನ್ನು ನಾನು ಮಾಡಲೇ ಬೇಕು. ಅದರಲ್ಲಿ ಕೊಂಚವೂ ಅಲಕ್ಷ್ಯ, ಕೊರತೆ ಪ್ರಯೋಜನದ್ದಲ್ಲ."

ಮನಸಿನೊಳಗೆ ಬಂದುದನ್ನು ಹೇಳಲಾಗಿದ್ದರೆ ಷೋಡಶಿ ಹೇಳಬಹುದಿತ್ತು—'ಅದು ಗೊತ್ತಿದೆ. ಹಿಂದಕ್ಕೆ ಜಿಲ್ಲೆಯ ಅಧಿಕಾರಿಗಳೆದುರಿಗೆ ನಿಮ್ಮ ಬೆಳಕು ಬಿದ್ದಿದೆ. ಆಪ್ಪೊತ್ತು ಯಾವ ತಪ್ಪನ್ನೂ ಮಾಡದ ಹೆಣ್ಣುಮಗಳ ಮೇಲೆ ಅಪರಾಧದ ಹೊರೆ ಹೊರಿಸಿ ನಿಮ್ಮ ಪ್ರಾಣವನ್ನು ಉಳಿಸಿಕೊಂಡಿರಿ ಈವೊತ್ತಾದರೂ ನಿಮ್ಮ ರಕ್ಷಣೆಗಾಗಿ ಇನ್ನೊಬ್ಬರು ಅಷ್ಟೇ ಬೆಲೆಯನ್ನು ಕೊಡಬೇಕಾಗಬಹುದು.' ಆದರೆ ಅವಳು ಹೀಗೇನೂ ಹೇಳಲಿಲ್ಲ. ಇಂತಹ ನರಪಶುವಿನ ಎದುರಿಗೆ ಅಷ್ಟು ದೊಡ್ಡ ದಾನದ ಮಾತನ್ನೆತ್ತುವುದು ತೀರ ನಿರರ್ಥಕವೆಂದು ಅವಳಿಗೆನಿಸಿತು.

ಜೀವಾನಂದನಿಗೆ ಮೈಮೇಲೆ ಅರಿವು ಬಂದಿತು. ಇಷ್ಟು ನಿರ್ದಾಕ್ಷಿಣ್ಯವಾಗಿ ಕೇಳಿದ ಪ್ರಶ್ನೆಗೆ ಅವಳು ಉತ್ತರ ಕೊಡಲಿಲ್ಲವೆಂದಮೇಲೆ ಅವಳೊಡನೆ ವ್ಯರ್ಥವಾಗಿ ಮಾತನಾಡುವುದು ಯೋಗ್ಯವಲ್ಲವೆಂದು ಅವನಿಗೆನಿಸಿತು. ಅವನ ಉಕ್ಕುತ್ತಿದ್ದ ಮನಸು ತಣ್ಣಗಾಯಿತು. ಸಿಟ್ಟಿನ ಪಾರಜವು ಏರಿತು. "ಅಲಕಾ, ನಿನ್ನ ಈ ವೀರ ಪುರುಷನ ಹೆಸರು ನನಗೆ ಗೊತ್ತಿಲ್ಲವೆಂದು ತಿಳಿಯಬೇಡ" ಎಂದು ಅವನೆಂದ.

ಷೋಡಶಿ ತಟ್ಟನೆ ಉತ್ತರವಿತ್ತಳು: "ಇದ್ದೀತು ಗೊತ್ತು! ಇಲ್ಲ

ದಿದ್ದರೆ ಯಾರೊಡನೆ ಹೇಗೆ ಕಾದಾಡುವವರು ? ಅಲ್ಲದೆ, ಜಗತ್ತಿನೊಳಗಿನ ಎಲ್ಲ ವೀರಪುರುಷರ ಪರಿಚಯ ಮೊದಲು ಇದ್ದೇ ಇರಬೇಕಲ್ಲವೆ ?"

ಜೀವಾನಂದನು ಸಿಡುಕಿನಿಂದ ನುಡಿದ : " ಅದು ಸರಿ. ಆದರೆ ನನ್ನಂಥ ಮನುಷ್ಯನನ್ನು ಪುನಃ ಪುನಃ ಅವಮಾನಪಡಿಸಿದ ಹೊಣೆಯನ್ನು ಆ ನಿನ್ನ ವೀರ ಪುರುಷನು ಹೊರಬೇಕಾಗುವುದು.—ಅದಿರಲಿ. ಈ ಪತ್ರವನ್ನು ಹರಿದಿಯೇಕೆ ?"

" ಬೇರೆ ಬರೆದು ಹಾಕಿದೆ."

" ನೇರವಾಗಿ ಅವನಿಗೇ ಬರೆಯದೆ ಅವನ ಹೆಂಡತಿಗೇಕೆ ಬರೆದೆ ? ಈ ಶಬ್ದ ಭೇದೀ ಬಾಣದಿಂದ ಆ ವೀರ ಪುರುಷನಿಗೆ ಶಿಕ್ಷಣ ಕೊಡುತ್ತೀಯೋ ನೊ!"

" ಒಳ್ಳೇದು. ಮುಂದೆ ?"

" ಮುಂದೇನು ? ಇಂದು ನನ್ನ ಸಮಸ್ಯೆಯೊಂದು ಬಿಟ್ಟಂತಾಯಿತು. ನನ್ನ ಈ ಮಿತ್ರನ ಬಗ್ಗೆ ಮಂದಿಯ ಬಾಯಿಂದ ಕೇಳಿದ್ದೆ. ಆದರೆ ರಾಯ ಮಹಾಶಯರನ್ನು ಎಷ್ಟು ಕೇಳಿದರೂ ಅವರು ಹೇಳುತ್ತಿರಲಿಲ್ಲ. ಅವರು ಇಷ್ಟೇಕೆ ಗಲಭೆ ಎಬ್ಬಿಸಿರಬಹುದೆಂಬುದು ನನಗೀಗ ತಿಳಿಯಿತು."

ಷೋಡಶಿ ಬೆಚ್ಚಿದಳು. ನಾಲ್ಕೂ ಕಡೆಗಳಿಂದ ಏಳುತ್ತಿರುವ ಆರೋಪ ಗಳೊಡನೆ ಮತ್ತೊಂದು ಹೊಸ ಕಲಂಕವು ಸೇರ್ಪಡೆಯಾಗದೆ ಬಿಡದು ನಿಶ್ಚಯ. ಆದರೆ ಈ ವಾತಾವರಣದ ಆಚೆಗಿರುವ ವ್ಯಕ್ತಿಗೆ ಇದರ ಜಳ ತಾಗೀತೆಂದು ಅವಳ ಗಮನಕ್ಕೆ ಬಂದಿರಲಿಲ್ಲ.

" ಅವರ ಬಗ್ಗೆ ನೀವೇನು ಕೇಳಿದ್ದೀರಿ ?" ಶಾಂತವಾಗಿ ಷೋಡಶಿ ಕೇಳಿದಳು.

" ಎಲ್ಲಾ!" ಎಂದು ನುಡಿದು ಸ್ವಲ್ಪ ತಡೆದು ಜೀವಾನಂದನು ಹೇಳಿದ : " ನಿನ್ನ ಈ ಬೆಚ್ಚಿಕೆಯನ್ನು ಕಂಡು, ನಿನ್ನೀ ಸವಿದನಿಯನ್ನು ಕೇಳಿ ನನಗೆ ನಗೆ ಬರಬೇಕಾಗಿತ್ತು. ಆದರೆ ಬರಲೊಲ್ಲದು. ಈ ಸಂಗತಿ ನನಗೆ ಸಂತೋಷ ಕರವಾದದ್ದಲ್ಲ. ಅಂದಿನ ಮಳೆಯ ರಾತ್ರಿಯು ನೆನಪಿದೆಯೆನು ? ಆ ಪ್ರಸಂಗದ ಸಾಕ್ಷಿಗಳಿದ್ದಾರೆ. ಏನಾದರೂ ಆಗುವುದಿತ್ತೆಂದರೆ ಈ ಸಾಕ್ಷಿ ಗಳು ಎಲ್ಲಿ ಹೇಗೆ ಅವಿತುಕೊಂಡಿರುವರೋ ಹೇಳುವುದು ಸಾಧ್ಯವಿಲ್ಲ. ಉಗಿ

ಬಂಡಿಯಿಂದ ಬ್ಯಾಗ್ ತೆಗೆದುಕೊಂಡು ಓಡಿಬಂದಾಗ ನನಗೂ ಎನಿಸಿತ್ತು— ಯಾರೂ ನೋಡಲಿಲ್ಲವೆಂದು."

"ಆ ಸಂಗತಿ ನಿಜವಿರಬಹುದು. ಆದರೆ ಅದೇನು ಅಂಥ ದೊಡ್ಡ ತಪ್ಪು?"

"ಆದರೆ ಅದನ್ನು ಮುಚ್ಚಿಡುವುದೇಕೆ? ಮತ್ತೀ ಪತ್ರ ಹರಿದದ್ದೇಕೆ? ನೀನೊಮ್ಮೆ ಓದಿ ನೋಡು ಏನೆನಿಸುತ್ತದೊ. ನಾನಿದನ್ನು ಒಯ್ಯುತ್ತೇನೆ. ಅಗತ್ಯವಿದ್ದಾಗ ಮುಕ್ತ್ಯಾರಿಗೆ ಮುಟ್ಟಿಸುತ್ತೇನೆ. ನನ್ನಂತೆಯೇ ಅವನೂ ಒಮ್ಮೆ ನಿನ್ನ ವ್ಯಾಜ್ಯ ನಡೆಸಲು ಕುಳಿತಿದ್ದನಲ್ಲವೆ? ನಿನ್ನ ವ್ಯಾಜ್ಯ ನಡೆಸುವವನ ಮೇಲೆ ಸಂಕಟ ಬರತಕ್ಕದ್ದೇ!" ಎಂದು ಜೀವಾನಂದನು ಕುತ್ಸಿತವಾಗಿ ನಕ್ಕ.

ಷೋಡಶಿ ಮೌನವಾಗಿ ವಿಚಾರಮಾಡತೊಡಗಿದಳು. ತನಗೊದಗಿದ ಸಂಕಟವನ್ನು ತಿಳಿಸುವುದಕ್ಕಾಗಿ ಒಬ್ಬರನ್ನುದ್ದೇಶಿಸಿ ಇನ್ನೊಬ್ಬರಿಗೆ ಪತ್ರ ಬರೆದುದು, ಒಬ್ಬರ ಹೆಸರೆತ್ತಿ ಬೇರೊಬ್ಬರನ್ನು ಕರೆದುದು, ಈ ಹರಕ ಕಾಗದದ ತುಂಡಿನಿಂದ ಈ ಮನುಷ್ಯನಿಗೂ ತಿಳಿಯದಿರಲಿಲ್ಲವೆಂದ ಬಳಿಕ, ಇಡೀ ಪತ್ರವನ್ನೋದಿದ ಹೈಮವತಿಯ ದೃಷ್ಟಿಯಿಂದ ಅದು ಹೇಗೆ ಮರೆಗೊಂಡೀತು? ಬೇಕೆಂತಲೇ ಯಾರಾದರೂ ಬೊಟ್ಟಿಟ್ಟು ಹೈಮವತಿಯ ನೋಟವನ್ನು ಆ ಕಡೆ ಸೆಳೆದರೆ....ಮೋರೆ ತೋರಿಸಲು ಸ್ಥಳವೇ ಉಳಿಯಲಾರದು.

ದಿನಾಲು ಷೋಡಶಿ ಕಲ್ಪನೆಯ ಕಣ್ಣಿಂದ ನೋಡುತ್ತಿದ್ದಾಗ, ಹೈಮವತಿಯ ಒಗೆತನದ ಚಿತ್ರಗಳನ್ನು—ಅವಳ ಗಂಡ, ಅವಳ ಮಗು, ಅವಳ ಆಳು ಹೋಳುಗಳು, ಅವಳ ಸಿರಿವಂತಿಕೆ, ಅವಳ ಸುಂದರ ಸ್ವಚ್ಛಂದ ಜೀವನ ಪ್ರವಾಹ ಇವುಗಳ ಚಿತ್ರಗಳನ್ನು—ಚಿತ್ರಿಸಿಕೊಳ್ಳುತ್ತಿದ್ದಳು. ಇವೆಲ್ಲವೂ ಕಲಂಕದ ಕಾಡಿಗೆಯಿಂದ ಒಂದು ಕ್ಷಣದಲ್ಲಿ ಮಸಳಿಸಿ ಹೋಗಬಹುದು, ತನ್ನ ಮೋರೆಯನ್ನು ತನಗೇ ನೋಡಿಕೊಳ್ಳಲು ನಾಚಿಕೆಯಾಗಬಹುದು ಎಂದು ಅವಳಿಗೆನಿಸಿತು. ತನ್ನ ಮನೆಯಲ್ಲಿಯೇ ತನ್ನನ್ನು ಬೆದರಿಸುತ್ತಿರುವ ಈ ಚಂಡಾಲನು ಬೇಕಾದ ಕುಕರ್ಮವನ್ನೂ ಮಾಡಬಲ್ಲ; ಇಲ್ಲದ ಸಲ್ಲದ ಸಂಗತಿಗಳ ಬಲೆಯನ್ನು ಹೆಣೆದು, ಅಪರಿಚಿತ ನಿರಪರಾಧೀ ಸ್ತ್ರೀಯೊಬ್ಬಳ

ಬಾಳನ್ನು ಹಾಳುಮಾಡುವುದಕ್ಕೆ ಇವನು ಸ್ವಲ್ಪವೂ ಹೇಸುವವನಲ್ಲ. ಯಾರೂ ಯಾರ ಬಗ್ಗೆಯೂ ಎಂದೂ ಹೀಗೆ ಸೇಡು ಹಿಡಿದಿರಲಾರರೆಂದು ಷೋಡಶಿಗೆನಿಸಿತು. ಯಾವ ಹೃದಯದ ಮಥನದಿಂದ ಈ ವಿಷವು ಹೊರ ಟಿತೋ ಅದರ ತೀರ ತಳದಲ್ಲಿ ಈ ಅಗ್ನಿ ಧಗಧಗನೆ ಹೊತ್ತಲಾರಂಭಿಸಿತು.

ನಿರ್ಮಲನು ಬಂದೇ ಬರುತ್ತಾನೆ. ಏನೇ ಅಡೆ ತಡೆಗಳಿರಲಿ, ಆಪತ್ಕಾಲದ ತನ್ನ ಕರೆಯನ್ನು ಅವನು ಉಪೇಕ್ಷಿಸಲಾರನೆಂದು ಷೋಡಶಿಯ ಮನಸಿಗೆ ಖಂಡಿತವಾಗಿ ಎನಿಸುತ್ತಿತ್ತು. ಎಂತಲೇ ಅವಳು ನಾಚಿಕೆಯಿಂದ ಅರೆಜೀವವಾದಳು. ಅವನು ಬಂದನೆಂದರೆ ಅವನ ಮೇಲೆ ಈ ಆರೋಪವನ್ನು ಹೇರಲಾಗುವುದು. ಮಾವ ಮತ್ತು ಅಳಿಯ, ತಂದೆ ಮತ್ತು ಮಗಳು, ಜಮೀದಾರ ಮತ್ತು ರೈತರು ಇವರೊಳಗೆ ಇಡೀ ಗ್ರಾಮವ್ಯಾಪಿಯಾದ ಕದನಕೋಲಾಹಲವೇಳುವುದು. ಅದರೊಳಗೆ ತನ್ನ ಸಾಂಸಾರಿಕ ದುಃಖ ಕ್ಲೇಶಗಳು ಎಲ್ಲಿ ಯಾವ ರೀತಿ ಮುಚ್ಚಿಹೋಗುವವೆಂಬ ಕಲ್ಪನೆ ಅವಳಿಗೆ ಬರಲಿಲ್ಲ.

ಐದಾರು ನಿಮಿಷಗಳು ಹೀಗೆಯೆ ನೀರವವಾಗಿ ಕಳೆದವು. "ಏನು, ನನಗೆ ಚೆನ್ನಾಗಿ ತಿಳಿದಿದೆಯಲ್ಲವೆ?" ಎಂದು ಜೀವಾನಂದನು ಷೋಡಶಿಯ ಮುಖದ ಕಡೆ ನೋಡಿ ಕೇಳಿದ.

ಉದ್ವಿಗ್ನಳಾಗಿದ್ದ ಷೋಡಶಿ ತಟ್ಟನೆ ಉತ್ತರವಿತ್ತಳು: "ಹೌದು."

"ಇದೆಲ್ಲವೂ ನಿಜ ಹಾಗಾದರೆ?"

"ಹೌದು, ಎಲ್ಲವೂ ನಿಜ!"

ಷೋಡಶಿ ಅಷ್ಟೇ ನಿಃಸಂಕೋಚವಾಗಿ ಉತ್ತರವಿತ್ತಳು. ಕೇಳಿ ಜೀವಾನಂದನು ಬೆಪ್ಪಾದ. ಅನಪೇಕ್ಷಿತವಾದ ಈ ತೆರನ ಉತ್ತರದಿಂದ ಅವನ ಬಾಯಲ್ಲಿ ಮಾತೇ ರೂಪುಗೊಳ್ಳದಾಯಿತು. "ಉಃ, ನಿಜವೆ!" ಎಂದು ಮಾತ್ರ ಉದ್ಗರಿಸಿ, ಸಣ್ಣಾದ ದೀಪದ ಬತ್ತಿಯನ್ನು ಚಾಚುತ್ತ ಅವಳ ಮುಖವನ್ನು ನೋಡುತ್ತ ಕೇಳಿದ: "ಹಾಗಾದರೆ ನಿನ್ನಮುಂದಿನ ವಿಚಾರವೇನು?"

"ನಾನೇನು ಮಾಡಬೇಕೆಂದು ನಿಮಗೆನಿಸುತ್ತದೆ?"

"ನೀನೇ?—" ಎಂದು ನುಡಿದು ಜೀವಾನಂದನು ಮೋರೆ ತಗ್ಗಿಸಿಕೊಂಡು ಸ್ತಬ್ಧವಾಗಿ ಕುಳಿತ. ಎಣ್ಣೆ ತೀರುತ್ತ ಬಂದುದರಿಂದ ಬತ್ತಿ

ನಿಸ್ತೇಜವಾಗಿ ಉರಿಯುತ್ತಿತ್ತು. ಕೆಲಹೊತ್ತಿನ ಮೇಲೆ ಅವನು ಮಾತ ನಾಡತೊಡಗಿದಾಗ ಅವನ ದೃಷ್ಟಿ ಬತ್ತಿಯ ಕಡೆ ಇತ್ತು. ಅವನೆಂದ: "ಹಾಗಾದರೆ ಈ ಜನರೆಲ್ಲ ನಿನಗೆ ಪತಿತಳೆಂದು ಎನ್ನುತ್ತಾರೆ—"

ಷೋಡಶಿ ನಡುವೆಯೆ ತಡೆದು ಮಾತನಾಡಿದಳು: "ಈಗೇತಕ್ಕೆ ಆ ಮಾತು? ಆ ಜನರ ವಿರುದ್ಧವಾಗಿ ನಿಮ್ಮ ಮುಂದೆ ನಾನು ದೂರು ತಂದಿಲ್ಲ. ನಾನೇನು ಮಾಡಬೇಕೆಂಬುದನ್ನು ಹೇಳಿರಿ. ಕಾರಣವನ್ನು ತೋರಿಸುವ ಅಗತ್ಯವಿಲ್ಲ."

"ಅದು ಸರಿ. ಆದರೆ ಅವರು ಹೇಳುವುದೆಲ್ಲ ಸುಳ್ಳು, ನೀನೊಬ್ಬಳೇ ಸತ್ಯವಾದಿ ಎಂದು ನನಗೆ ಮನವರಿಕೆ ಮಾಡಿಕೊಡಲು ಹವಣಿಸುವೆಯಾ ಅಲಕಾ?"

ಉತ್ತರ ಕೊಡುವುದಕ್ಕಾಗಿ ಷೋಡಶಿ ಅವನ ಮುಖದ ಕಡೆ ನೋಡಿ ದಳು. ಮಾತು ಹೊರಡು ಹೊರಡುತ್ತಲೇ ಸುಮ್ಮನಾದಳು. ಇದರಿಂದ ತನ್ನ ಅಪಮಾನವಾಯಿತೆಂದು ಜೀವಾನಂದನಿಗೆನಿಸಿತು. "ಉತ್ತರವನ್ನು ಕೂಡ ಕೊಡುವುದಿಲ್ಲವೇ?" ಎಂದ.

"ಇಲ್ಲ."

"ಸರಿ! ನನ್ನೆದುರಿಗೆ ಹೇಳಿಕೊಳ್ಳುವುದಕ್ಕಿಂತ ದುರ್ನಾಮವೇ ಲೇಸು ತಾನೆ! ಒಳ್ಳೇದು. ಒಟ್ಟೇನು? ನನಗೆಲ್ಲವೂ ಸ್ಪಷ್ಟವಾಯಿತು" ಎಂದು ಜೀವಾನಂದನು ವಿಕೃತವಾಗಿ ನಕ್ಕ.

ಆದರೂ ಷೋಡಶಿಯ ದನಿಯು ಸ್ವಾಭಾವಿಕತೆ ತೊಲಗಲಿಲ್ಲ. "ಎಲ್ಲವೂ ಸ್ಪಷ್ಟವಾದ ಬಳಿಕ ಮುಂದೇನಪ್ಪಣೆ ನನಗೆ?" ಎಂದು ಕೇಳಿದಳು.

ಕೊಂಚವೂ ಚಾಂಚಲ್ಯವಿಲ್ಲದ ಪ್ರಶ್ನೆಯಿಂದ ಜೀವಾನಂದನಿಗೆ ಆಘಾತವಾದಂತಾಯಿತು. ಅವನ ಕೋಪ ಉದ್ವಿಗ್ನತೆಗಳು ನೂರ್ಮಡಿ ಯಾದುವು. ಅವನೆಂದ: "ಅದೇನೋ, ನಿನ್ನ ವಿಷಯ ನೀನು ನೋಡಿಕೊ. ನಾನು ದೇವಮಂದಿರದ ಪಾವಿತ್ರ್ಯವನ್ನು ಕಾಯಬೇಕಾಗಿದೆ. ಆ ಮುಖ್ಯ ಹೊಣೆ ನನ್ನದು, ನಿನ್ನದಲ್ಲ. ಹಿಂದಿನದು ನನಗೆ ಯಾವುದೂ ಗೊತ್ತಿಲ್ಲ. ಆದರೆ ಇನ್ನು ಮುಂದೆ ಮಾತ್ರ ಭೈರವಿ ಭೈರವಿಯಂತೆಯೇ ಇರಬೇಕು,

ಇಲ್ಲದಿದ್ದರೆ ಹೊರಟುಹೋಗಬೇಕು. ಇಂಥ ಪತ್ರಗಳನ್ನು ಬರೆಯತಕ್ಕದ್ದಲ್ಲ—" ಎಂದು ಅವನು ಮೇಲಕ್ಕೆ ನೋಡಿದಾಗ ಮತ್ಸರದಿಂದ ಉರಿಯುವ ಅವನ ಕ್ರೂರ ದೃಷ್ಟಿ ಷೋಡಶಿಗೆ ಗೋಚರಿಸಿತು. ಒಂದು ಕ್ಷಣದಲ್ಲಿ ಅವಳ ದೃಷ್ಟಿಯೂ ಅನೇಕ ಯೋಜನಗಳವರೆಗೆ ಚಿಲ್ಲಿತು. ಲಾಲಸೆಯ ಎಸರುಸಿರು ತನ್ನ ದೇಹವನ್ನು ಬೇಯಿಸುತ್ತಿರುವಂತೆ ಅವಳಿಗೆನಿಸಿ, ಜಗತ್ತಿನ ಬಗ್ಗೆ ತಿರಸ್ಕಾರವುಂಟಾಯಿತು. 'ಈ ಹೈಮ, ಅವಳ ಬಾಳ್ವೆ, ಈ ಗುಡಿ, ತನ್ನ ರೈತರ ಕಷ್ಟಗಳು, ಮತ್ತು ತನ್ನ ಭವಿತವ್ಯ – ಇವೆಲ್ಲವುಗಳ ಬಗ್ಗೆ ಏಕೆ ವಿಚಾರ ಮಾಡಬೇಕು? ಎಲ್ಲ ಬಂಧನಗಳನ್ನೂ ಚಟಚಟನೆ ಹರಿದೊಗೆದು ಎಲ್ಲಿಯಾದರೂ ದಿಗಂತಕ್ಕೆ ಹೋಗಿ ಮುಖ ಮರೆಯಿಸಿಕೊಂಡರೆ ತೀರಿತು' ಎಂದು ಅವಳಿಗೆನಿಸಿತು.

ಹೆಚ್ಚಾಗಿ, ನಿರ್ಮಲನು ಬಾರದಿದ್ದರೆ ನೆಟ್ಟಗಾಗುವುದು ಎಂದೆನಿಸಿತು.

ಅದೆಷ್ಟೋ ಹೊತ್ತು ಸ್ವಸ್ಥವಾಗಿ ಕುಳಿತಿದ್ದು ಶಾಂತವಾಗಿ ಅವಳೆಂದಳು: "ಒಳ್ಳೇದು, ಇರಲಿ. ನಿಜವಾದ ಹೊಣೆ ಯಾರದೆಂಬ ಬಗ್ಗೆ ನಾನು ವಾದಿಸುತ್ತ ಕೂಡುವುದಿಲ್ಲ. ನಾನು ಹೋಗುವುದರಿಂದ ಮಂದಿರದ ಕಲ್ಯಾಣವಾಗುವುದೆಂದು ಎನಿಸುತ್ತಿದ್ದರೆ ನಾನು ಹೀಗೆಯೆ ಹೊರಟು ಹೋಗುತ್ತೇನೆ."

ಮಾತಿನ ಮರ್ಮವನ್ನರಿತು ಜೀವಾನಂದನು ರೇಗಿದ. "ನೀನು ಹೋಗುತ್ತೀ, ನನಗೆ ಗೊತ್ತಿದೆ. ಆದರೆ ಅದು ಹೇಗೆ ಹೋಗುತ್ತೀಯೋ ನಾನು ನೋಡುತ್ತೇನೆ!" ಎಂದ.

ಮೊದಲಿನಂತೆಯೆ ಶಾಂತವಾಗಿ ಷೋಡಶಿ ಮಾರ್ನುಡಿದಳು: "ನಾನು ಸಂತೋಷದಿಂದಲೇ ಹೋಗಬೇಕೆನ್ನುತ್ತೇನೆ. ಎಂದ ಮೇಲೆ ನೀವೇಕೆ ಸಿಟ್ಟಿಗೇಳುತ್ತೀರಿ? ಆದರೆ ನನಗಿಷ್ಟೇ ಹೇಳುವುದಿದೆ — ಇನ್ನು ಮೇಲೆ ಮಂದಿರದ ಕಲ್ಯಾಣದ ಎಲ್ಲ ಹೊಣೆ ನಿಮ್ಮ ಮೇಲಿದೆ."

"ಯಾವಾಗ ಹೋಗುವಳು ನೀನು?"

"ನಿಮ್ಮ ಅಪ್ಪಣೆಯಾದ ಕೂಡಲೆ. ನಾಳೆ, ಈವೊತ್ತು, ಈಕ್ಷಣವೇ – ಯಾವಾಗ ಹೇಳುವಿರೋ ಆವಾಗ!"

ಜೀವಾನಂದನ ಸಂತಾಪವು ಕಡಿಮೆಯಾಗದೆ ಮತ್ತಷ್ಟು ಹೆಚ್ಚಿತು ಅವನೆಂದ :.“ ನಿರ್ಮಲಬಾಬೂ? ಅಳಿಯದೇವರು ? ”

“ ಇನ್ನವರ ಹೆಸರು ತೆಗೆಯಬೇಡಿರಿ. ” ದೀನ ಸ್ವರದಿಂದ ಷೋಡಶಿ ಹೇಳಿದಳು.

ನನ್ನ ಬಾಯಿಂದ ಅವನ ಹೆಸರು ಹೊರಡುವುದನ್ನೂ ಕೇಳಲಾರೆಯ ಲ್ಲವೇ ನೀನು ? ಒಳ್ಳೇದು ನಿನಗೇನು ಕೊಡಬೇಕು ? ”

“ ನನಗೆ ಏನೂ ಬೇಕಾಗಿಲ್ಲ.”

“ ಈ ಮನೆಯನ್ನೂ ಬಿಟ್ಟುಬಿಡಬೇಕಾಗುವುದು, ಗೊತ್ತೇ ? ಇದೂ ದೇವಿಯದೇ.”

ಷೋಡಶಿ ಗೋಣುಹಾಕಿ ನಮ್ರತೆಯಿಂದ ಉತ್ತರವಿತ್ತಳು : “ ಗೊತ್ತಿದೆ. ಸಾಧ್ಯವಿದ್ದ ಮಟ್ಟಿಗೂ ನಾಳೆಯೇ ಇಲ್ಲಿಂದ ಹೊರಟುಹೋಗು ತ್ತೇನೆ.”

“ ನಾಳೆಯೇ ? ಸರಿ. ಹಾಗಾದರೆ ಎಲ್ಲಿಗೆ ಹೋಗುತ್ತೀ ? ಏನು ನಿರ್ಣಯಿಸಿದ್ದೀ ? ”

“ ಇಲ್ಲಿ ಇರಬಾರದೆಂಬುದಕ್ಕಿಂತ ಹೆಚ್ಚಿಗೇನೂ ನಿರ್ಣಯಿಸಿಲ್ಲ. ಮೊದಲು ಯಾವುದೊಂದೂ ಗೊತ್ತಿಲ್ಲದೆ ಭೈರವಿಯಾದೆ ; ಈಗ ಹೋಗು ವಾಗ ಮುಂದಿನ ವಿಚಾರ ಏಕೆ ಮಾಡಲಿ ? ”

ಜೀವಾನಂದನು ಸುಮ್ಮನಾದ. ತಾನೆಲ್ಲಿಯೋ ತಪ್ಪಿದೆನೆಂದು ಅವನಿಗೆನಿಸಿತು.

ಷೋಡಶಿಯೆಂದಳು : “ ನೀವೀಪ್ರಾಂತದ ಜಮಿಾದಾರರು. ಚಂಡೀ ಗಢದ ಹಿತಾಹಿತದ ಭಾರವನ್ನು ನಿಮಗೊಪ್ಪಿಸಿ ಹೋಗುವಾಗ ಸುಮ್ಮನೆ ಮನಸಿಗೇಕೆ ಹಚ್ಚಿಕೊಳ್ಳಬೇಕು ? ಆದರೆ ನಮ್ಮ ತಂದೆ ಬಹಳ ದುರ್ಬಲ, ಅವರ ಮೇಲೆ ಭಾರಹಾಕಿ ನೀವು ಸ್ವಸ್ಥ ಕೂಡಬಾರದು. ”

ಅವಳ ಮಾತಿನಲ್ಲಿಯ ಆತುರ ಕಳವಳಗಳಿಂದ ಜೀವಾನಂದನ ಮನಸು ವ್ಯಗ್ರವಾಯಿತು. “ ನಿಜವಾಗಿಯೂ ನಿನಗೆ ಹೋಗಬೇಕೆಂದು ಎನಿಸುತ್ತದೆಯೆ ? ” ಅವನು ಪುನಃ ಕೇಳಿದ.

ಹಿಂದಿನ ಮಾತಿನ ಎಳೆಯನ್ನೇ ಹಿಡಿದು ಷೋಡಶಿ ಹೇಳಿದಳು :

"ಮತ್ತು ನನ್ನ ದುಃಖಿಗಳಾದ ದರಿದ್ರ ಒಕ್ಕಲಿಗರ ಸುಖದುಃಖಗಳ ಭಾರವನ್ನೂ ನಿಮಗೇ ಒಪ್ಪಿಸಿ ಹೋಗುತ್ತೇನೆ."

ಜೀವಾನಂದನು ಅವಸರವಸರವಾಗಿ ನುಡಿದ: "ಸರಿ ಸರಿ. ಅದನ್ನು ನಾನು ಒಪ್ಪುತ್ತೇನೆ. ಅವರ ಬೇಡಿಕೆಗಳೇನು?"

"ಅದನ್ನವರು ತಾವೇ ಹೇಳುವರು ನಿಮಗೇ. ನಾನು ಹೋಗುವ ಮೊದಲು ನಿಮ್ಮ ವಿಷಯವಾಗಿ ಅವರಿಗೆ ತಿಳಿಸುವೆ" ಎಂದು ಷೋಡಶಿ ಹೊರಗೆ ಹಣೆಯಕ್ಕಿ ನೋಡಿ "ನಾನಿನ್ನು ಹೋಗಬೇಕು. ಸ್ನಾನದ ಹೊತ್ತಾಯಿತು" ಎಂದು ನುಡಿದು ಹಗ್ಗದ ಮೇಲಿನ ಸೀರೆ ಪಂಚೆಗಳನ್ನು ಎಳೆದು ಹೆಗಲಮೇಲೆ ಚೆಲ್ಲಿಕೊಂಡಳು.

"ಸ್ನಾನದ ಹೊತ್ತು? ಇಷ್ಟು ರಾತ್ರಿಯಲ್ಲಿ?" ಜೀವಾನಂದನು ಆಶ್ಚರ್ಯಚಕಿತನಾಗಿ ಕೇಳಿದ.

"ರಾತ್ರಿ ಮುಗಿಯಿತು. ನೀವಿನ್ನು ಮನೆಗೆ ಹೋಗಿರಿ" ಎಂದೆನ್ನುತ್ತ ಷೋಡಶಿ ಮನೆಯಿಂದ ಹೊರಬಿದ್ದಳು. ಅವಳ ಈ ಆಕಸ್ಮಿಕವಾದ ಗಡಿಬಿಡಿಯಿಂದ ಜೀವಾನಂದನೂ ಅಸ್ವಸ್ಥನಾದ. "ಆದರೆ, ನನ್ನದಿನ್ನೂ ಮಾತನಾಡುವುದು ಉಳಿದಿದೆ ಅಲಕಾ!" ಎಂದ.

"ನೀವು ಮನೆಗೆ ಹೋದಿರಿ."

"ಇಲ್ಲ. ನಾನಿನ್ನೂ ಮಾತನಾಡಬೇಕು. ನಾನಿಲ್ಲಿಯೇ ನಿನ್ನ ಹಾದಿ ಕಾಯುತ್ತಿರುವೆನು." ಜೀವಾನಂದನು ಹಟದಿಂದ ನುಡಿದ.

ಥಟ್ಟನೆ ತಡೆದು ನಿಂತು ಷೋಡಶಿ ಉತ್ತರವಿತ್ತಳು. "ಬೇಡ, ನಿಮ್ಮ ಕಾಲಿಗೆ ಬೀಳುತ್ತೇನೆ. ನೀವು ಹಾದಿ ನೋಡಬೇಡಿರಿ" ಎಂದು ಅವಳು ಎಡಗಡೆಯ ಕಾಲುದಾರಿಯಿಂದ ಲಗುಬಗೆಯಿಂದ ಸಾಗಿದಳು.

## ೨೦

ಆ ದಿನ ಪ್ರಾತಃಕಾಲದಲ್ಲಿ ದಟ್ಟವಾದ ಮಂಜು ಊರನ್ನೆಲ್ಲ ಮುಸುಕಿತ್ತು. ಯಾವುದೂ ನಿಚ್ಚಳವಾಗಿ ಕಾಣುತ್ತಿರಲಿಲ್ಲ. ಅದೇ ಹಾಸಿಗೆಯಿಂದೆದ್ದು ರಾಯಮಹಾಶಯನು ಹೊರಗೆ ಬಂದಿದ್ದ. ಯಾರೋ ಸಭ್ಯ

ಗೃಹಸ್ಥರು ಮನೆಯೊಳಗೆ ಬರುತ್ತಿರುವುದನ್ನು ಕಂಡು "ಯಾರವರು?" ಎಂದು ಪ್ರಶ್ನಿಸಿದ.

"ನಾನು, ನಿರ್ಮಲ" ಎಂದೆನ್ನುತ್ತ ಅಳಿಯದೇವರು ಹತ್ತಿರ ಹೋಗಿ ಮಾವನಿಗೆ ನಮಸ್ಕಾರಮಾಡಿದ. ಅಳಿಯನ ಆಕಸ್ಮಿಕವಾದ ಆಗಮನದ ಬಗ್ಗೆ ಅವನು ಅಚ್ಚರಿಯನ್ನು ತೋರಲಿಲ್ಲ, ಆನಂದವನ್ನೂ ಪ್ರಕಟಿಸಲಿಲ್ಲ.

ಪದ್ಧತಿಯಂತೆ, "ಯಾರಿದ್ದೀರೋ ಅಲ್ಲಿ? ಇವರ ಸಾಮಾನುಗಳನ್ನು ಹೈಮಳ ಕೋಣೆಯೊಳಗೆ ಒಯ್ದಿಡಿರೋ. ಗಾಡಿಯೊಳಗೆ ಏನೂ ತ್ರಾಸ ವಾಗಲಿಲ್ಲವಷ್ಟೆ? ಹೈಮ, ಹುಡುಗ ಎಲ್ಲರೂ ಕುಶಲವೆ?" ಎಂದಿಷ್ಟೇ ಮಾತನಾಡಿದ.

ನಿರ್ಮಲನು ಎಲ್ಲರ ಕುಶಲವನ್ನೂ ಗೋಣುಹಾಕಿ ಅರುಹಿದ.

"ಒಬ್ಬನೇ ಹೀಗೇಕೆ ಬಂದೆ ನಿರ್ಮಲ? ಹುಡುಗಿಯನ್ನೂ ಕರೆದು ಕೊಂಡು ಬಂದಿದ್ದರೆ ಮತ್ತೊಮ್ಮೆ ನೋಡಿದಂತಾಗುತ್ತಿತ್ತು" ಜನಾರ್ದನ ರಾಯನೆಂದ.

"ಮೂರು ನಾಲ್ಕು ದಿನಗಳಿಗಾಗಿ ಸುಮ್ಮನೆ —"

"ಇದೇನು ಮೂರು ನಾಲ್ಕು ದಿವಸಗಳಲ್ಲಿ ಆಗುವ ಕೆಲಸವೆ? ಸಹಜ ವಾಗಿ ಮೂರು ನಾಲ್ಕು ತಿಂಗಳು ತಿಂದೀತು. ಹೋಗು, ಒಳಗೆ ಕೈಕಾಲು ತೊಳೆದುಕೊಂಡು ಬಾ" ಎಂದು ರಾಯಮಹಾಶಯನು ಸಸುನಕ್ಕು ನುಡಿದ.

ನಿರ್ಮಲನು ಒಳಗೆ ಹೋದ. ಅಲ್ಲಿಯೂ ಅದೇ ವಾತಾವರಣ. ಹೇಗೋ ಯಾರಿಗೆ ಗೊತ್ತು — ಅವನು ಬರುವನೆಂಬುದು ಎಲ್ಲರಿಗೂ ಗೊತ್ತಾದಂತಿತ್ತು. ಅವನು ಬಂದುದಕ್ಕೆ ಯಾರಿಗೂ ಆನಂದವಿಲ್ಲ.

ಅತ್ತೆ ಸ್ವಹಸ್ತದಿಂದ ಅವನಿಗೆ ಚಾ – ತಿಂಡಿ ತಂದುಕೊಟ್ಟಳು. ಹತ್ತಿ ರವೇ ಕುಳಿತು ವಿಚಾರಿಸಿದಳು. ಹೈಮವತಿ ಬರಬೇಕಾದ್ದಿರಲಿಲ್ಲವೇನೊ?"

"ಇಲ್ಲ."

"ನೀನೇಕೆ ಬಂದಿರುವೆಯೆಂಬುದು ಗೊತ್ತಿದೆಯೇನು ಅವಳಿಗೆ?"

"ಗೊತ್ತಿದೆಯಲ್ಲ! ಎಲ್ಲವೂ ಗೊತ್ತಿದೆ ಅವಳಿಗೆ!"

"ಆದರೂ ನಿನಗೆ ಬೇಡವೆನ್ನಲಿಲ್ಲವೆ?"

ಅವಳ ಪ್ರಶ್ನೆಯ ಇಂಗಿತವು ಗೊತ್ತಾಗಿ ನಿರ್ಮಲನಿಗೆ ಕೆಟ್ಟೆನಿಸಿತು. ಅವಳೇಕೆ ಬೇಡವೆಂದಾಳು? ನಾನು ಯಾವ ಕೆಟ್ಟ ಕೆಲಸಕ್ಕೂ ಕೈಹಾಕುವುದಿಲ್ಲವೆಂದು-ಅವಳು ಚೆನ್ನಾಗಿ ಬಲ್ಲಳು" ಎಂದು ಅವನು ಉತ್ತರವಿತ್ತ.

"ತನ್ನ ತಂದೆ ಮಾತ್ರ ಕೆಟ್ಟ ಕೆಲಸವನ್ನೇ ಮಾಡುತ್ತ ತಿರುಗಾಡುತ್ತಾರೆಂದು ಅವಳು ತಿಳಿದಿರುವಳೇನು ನಿರ್ಮಲ?" ಎಂದು ನುಡಿದು ಅತ್ತೆ ಕೆಲಹೊತ್ತು ತಲೆವಾಗಿ ಕುಳಿತಿದ್ದು ಬಳಿಕ ಆವೇಶದಿಂದ ಮಾತನಾಡತೊಡಗಿದಳು: "ಅವಳಿಗೆ ಗೊತ್ತಿರಲಿ ಬಿಡಲಿ, ನೀನು ಮಾತ್ರ ಈ ತಂತ್ರದೊಳಗೆ ಬೀಳಬೇಡಪ್ಪ. ಈ ಪ್ರಕರಣದಲ್ಲಿ ನಾನು ನಿನ್ನನ್ನು ಸ್ವಲ್ಪವೂ ಕೈಹಾಕಗೊಡುವುದಿಲ್ಲ. ಮಾವ ಅಳಿಯ ಬಡಿದಾಡಬೇಕು, ಊರ ಜನ ನಿಂತು ಮಜಾ ನೋಡಬೇಕು! ಅದಕ್ಕಿಂತ ಮುಂಚೆ ನಾನೇ ಎಲ್ಲಿಗಾದರೂ ಹೋಗಿ ಜೀವ ಕೊಡುತ್ತೇನೆ! – ಹೇಳಿರುತ್ತೇನೆ ನಿನಗೆ."

"ಸಂಕಟದಲ್ಲಿ ಸಿಲುಕಿದ ಅಸಹಾಯ ಮನುಷ್ಯರನ್ನು ರಕ್ಷಿಸುವುದೇ ನಮ್ಮ ಉದ್ಯೋಗ ಅತ್ತೆ" ನಿರ್ಮಲನು ಶಾಂತವಾಗಿ ನುಡಿದ.

"ಆದರೆ ಉದ್ಯೋಗವೇ ಮನುಷ್ಯನ ಸರ್ವಸ್ವವಲ್ಲ. ವಕೀಲ ಬ್ಯಾರಿಸ್ಟರಿಗೆ ಕೂಡ ತಾಯಿ ಅಕ್ಕತಂಗಿ ಇರುತ್ತಾರೆ, ಹೆಂಡತಿ – ಮಕ್ಕಳು ಇರುತ್ತಾರೆ; ಅತ್ತೆ–ಮಾವ ಇರುತ್ತಾರೆ; ಗುರುಹಿರಿಯರ ಮಾನ ಮರ್ಯಾದೆಯನ್ನು ಕಾಯುವ ಭಾರ ಅವರ ಮೇಲೆಯೂ ಇರುತ್ತದೆ."

ತಲೆ ಹಾಕುತ್ತ ನಿರ್ಮಲನೆಂದ; "ನಿಜ ಅತ್ತೆ ನಿಜ." ಎಂದು ಈ ಸಂದರ್ಭವನ್ನು ಹಾರಿಸಿಬಿಡುವ ಉದ್ದೇಶದಿಂದ ನಗುನಗುತ್ತ ಮತ್ತೆ ಅವನೆಂದ: "– ಅಲ್ಲದೆ ನನಗೆನಿಸುತ್ತದೆ, ಈ ವ್ಯಾಜ್ಯದಿಂದ ವಿಶೇಷವೇನೂ ನಿಷ್ಪತ್ತಿಯಾಗಲಿಕ್ಕೂ ಇಲ್ಲ."

ಆದರೂ ಅತ್ತೆಯ ಮಾತಿನ ಸರಪಣಿಯು ಗೊಣಸು ಬಿಚ್ಚಲಿಲ್ಲ. ಅವಳೆಂದಳು: "ಹಾಗೂ ಆಗಬಹುದು. ಮತ್ತೆ ಹಾಗಾಗುವುದೆಂದರೆ ನಿಮ್ಮ ಮಾವಂದಿರು ಸರ್ವಸ್ವೇ ಸೋಲಬೇಕು. ಆ ಬಳಿಕ ರಾಯಮಹಾಶಯರು ಊರೊಳಗೆ ನಿಲ್ಲುವುದೇ ಅಶಕ್ಯವಾಗುವುದು. ಹಾಗೆ ನೋಡಿದರೆ ಷೋಡಶಿಯೇನೂ ದುರ್ಬಲೆಯಲ್ಲ, ಅಸಹಾಯಳೂ ಅಲ್ಲ. ಆಕೆಯದೊಂದು ತುಡುಗರ ತಂಡವಿದೆ; ಜಮೀನ್ದಾರರು ಕೂಡ ಹೆದರುತ್ತಾರೆ

ಅದಕ್ಕೆ. ಅವಳೊಂದು ಚೀಟಿ ಬರೆದರೆ ಸಾಕು, ಆ ಜನರು ಮನೆ ಮಾರು ಹೆಂಡರು ಮಕ್ಕಳನ್ನು ಬಿಟ್ಟು ಐನೂರು ಹರದಾರಿಗಳಿಂದಲೂ ಧಾವಿಸಿ ಬರುತ್ತಾರೆ. ನಾವು ನೂರು ಚೀಟಿ ಬರೆದರೂ ಯಾರೂ ಕೇಳುವುದಿಲ್ಲ. ಅವಳು ಭೈರವಿ. ಮಂತ್ರ ತಂತ್ರ, ಮಾಟ ಮದ್ದು ಯಚ್ಚಾವತ್ತೂ ಅವಳಿಗೆ ಬರುತ್ತದೆ. ಅವಳಿದ್ದರೂ ಅಷ್ಟೇ, ಹೋದರೂ ಅಷ್ಟೆ; ಅದರಿಂದ ನಮ್ಮದೇನೂ ಹೋಗುವುದಿಲ್ಲ, ಬರುವುದಿಲ್ಲ. ಅವಳ ಪಾಪ ಪುಣ್ಯ ಅವಳ ಸುತ್ತ. ಆದರೆ ನನ್ನ ಕಣ್ಮುಂದೆಯೇ ನನ್ನ ಮಗಳ ಸರ್ವನಾಶವಾಗಗೊಡಲಾರೆ ನಿರ್ಮಲ! —ಮುಂದಿ ಏನಾದರೂ ಎಂದುಕೊಳ್ಳಲಿ, ಏನಾದರೂ ಮಾಡಿಕೊಳ್ಳಲಿ."

ನಿರ್ಮಲನು ಸ್ತಬ್ಧವಾಗಿ ಕುಳಿತುಬಿಟ್ಟ. ಈ ಪಕ್ಷದ ಬಗ್ಗೆ ತಿಳಿದುಕೊಳ್ಳಬೇಕಾದುದು ಏನೂ ಉಳಿಯಲಿಲ್ಲ. ಆ ರೀತಿ ಸಂಚು ಸಂಪೂರ್ಣವಾಗಿ ಅಣಿ ಮಾಡಲಾಗಿತ್ತು. ಮಾವನು ಎಲ್ಲೆಲ್ಲಿ ಹೇಗೋ ಅಲ್ಲಲ್ಲಿ ಹಾಗೆ ಎಲ್ಲವನ್ನೂ ರಚಿಸಿ ಇಟ್ಟಿದ್ದ. ಒಂದೂ ಚೂರೂ ಸಂದು ಸಿಕ್ಕುವಂತಿರಲಿಲ್ಲ.

ತನ್ನ ಶಾಂತ ಪ್ರಕೃತಿಯ ಅತ್ತೆ ಈ ಬಗೆಯಾಗಿ ಮುತ್ಸದ್ದಿತನದ ಮಾತನಾಡಿಯಾಳೆಂದು ಅವನು ಕೊಂಚವೂ ಭಾವಿಸಿರಲಿಲ್ಲ. ಅವಳು ಹೇಳುತ್ತಿದ್ದುದೆಲ್ಲ ತನ್ನನ್ನು ಕುರಿತೇ ಎಂದು ಅವನು ತಿಳಿದುಕೊಳ್ಳದಿದ್ದರೂ ಆಕೆಗೆ ಏನು ಉತ್ತರ ಕೊಡಬೇಕೆಂಬುದು ಅವನಿಗೆ ತಿಳಿಯದಾಯಿತು. ಈ ವಿನಂತಿಯನ್ನು ಇಷ್ಟು ಅಚ್ಚುಕಟ್ಟಾಗಿ ಯಾರು ರಚಿಸಿ ಅವಳ ಬಾಯಿಂದ ಹೊರಡಿಸಿದ್ದರೋ ಅವರು ನಾಲ್ಕೂ ಕಡೆ ಚೆನ್ನಾಗಿಯೇ ಲಕ್ಷ್ಯವಿಟ್ಟಿದ್ದರು. ಅಷ್ಟು ದೂರದಿಂದ, ಹೆಂಡಿರು ಮಕ್ಕಳನ್ನು ಬಿಟ್ಟು, ತಾನು ಕೇವಲ ಪರೋಪಕಾರಕ್ಕಾಗಿ ಬಂದಿಲ್ಲವೆಂದೇ ಇವರೆಲ್ಲರು ತಿಳಿದುಕೊಂಡಿದ್ದಾರೆ ಎಂಬುದನ್ನರಿತು ಅವನ ಬಾಯಲ್ಲಿ ಶಬ್ದಗಳೇ ಸ್ಫುರಿಸಲಿಲ್ಲ.

ಒಂದು ಗಳಿಗೆ ವಿರಮಿಸಿ ನಿರ್ಮಲನು ಹೊರಗೆ ಹೊರಟಾಗ ರಾಯನು ಪಡುಶಾಲೆಯಲ್ಲಿ ಕುಳಿತಿದ್ದ. ಅವನು ಎಲ್ಲಿಗೆ ಹೋಗುತ್ತೀ, ಏನು ಕೆಲಸ ಎಂದು ಮೊದಲಾಗಿ ನಿರರ್ಥಕವಾಗಿ ಪ್ರಶ್ನಿಸದೆ, ಆದಷ್ಟು ಬೇಗನೆ ತಿರುಗಿ ಬರುವಂತೆ ತಿಳಿಸಿದ ಮಾತ್ರ; ಪ್ರವಾಸದಿಂದ ದಣಿದಾಗ ಜಳಕ ಊಟ ತಡವಾದರೆ ಪ್ರಕೃತಿಗೆ ಒಳ್ಳೆಯದಲ್ಲವೆಂದು ಹೇಳಿದ.

ಶಿರೋಮಣಿ ಮಹಾಶಯನು ರಾಯನ ಪಕ್ಕದಲ್ಲಿಯೇ ಕುಳಿತಿದ್ದ.

ಏನೋ ಮಾತನಾಡುತ್ತಿದ್ದವನು ಸುಮ್ಮನಾಗಿ ಹಣಕಿ ನೋಡಿ ಆಶ್ಚರ್ಯ ಚಕಿತನಾಗಿ ಅವನೆಂದ: "ಯಾರು, ಅಳಿಯ ದೇವರೇನು?"

"ಹೌದು" ಎಂದ ರಾಯ ಮಹಾಶಯ.

ಶಿರೋಮಣಿ ಅಳಿಯನನ್ನು ಕೂಗಿ ಕರೆದು ಮಾತನಾಡಿಸುವನೆಂದರಿತು ರಾಯನು ಮತ್ತೆಂದ: "ನಿರ್ಮಲನೇನು ಓಡಿ ಹೋಗುವುದಿಲ್ಲ. ನಿಮ್ಮ ಈ ಮಾತು ಮುಗಿಸಿರಿ ಮೊದಲು. ನನಗೆ ಲಗೂನೆ ಹೋಗಬೇಕಾಗಿದೆ."

ನಿರ್ಮಲನು ಮೌನನಾಗಿ ಹೊರಬಿದ್ದ. ಅಧಿಕ ಪ್ರಸಂಗಿಯಾದ ನೆರೆಯವನಿಂದ ಮಾವನು ದಯವಿಟ್ಟು ತನ್ನನ್ನು ಉಳಿಸಿದನೆಂಬುದನ್ನರಿತು ಅವನ ಮುಖವು ವಿವರ್ಣವಾಯಿತು.

ಅವನು ಷೋಡಶಿಯ ಭೆಟ್ಟಿಗೆ ಹೊರಬಿದ್ದ. ಎರಡು ದಿನಗಳ ಹಿಂದೆ ಊರಿಂದ ಹೊರಡುವಾಗ, ಅವನು ಮನಸಿನ ತೆರೆಯಮೇಲೆ ಉತ್ಸಾಹದಿಂದ ತೆಗೆದಿದ್ದ ಚಿತ್ರ ಈಗ ಅಳಿಸಿ ಹೋಗಿತ್ತು. ಯಾವುದೋ ಹಗಲುಗನಸಿನ ಬಲದಿಂದ ಅಷ್ಟು ದೂರ ಪ್ರವಾಸದ ದಣಿವು ಅವನಿಗೆ ಆಗಿರಲಿಲ್ಲ. ಆ ಕನಸೀಗ ಅತ್ತೆ ಮಾವಂದಿರ ವ್ಯಕ್ತ ಅವ್ಯಕ್ತ ಆರೋಪಗಳ ಆಘಾತದಿಂದ ಹರಿದು ಹೋಗಿತ್ತು. ಸಂಘಟಿತವಾದ ಬಲಿಷ್ಠ ಸಮೂಹವನ್ನು ಎದುರಿಸಿ, ದುರ್ಬಲ ಪರಿತ್ಯಕ್ತ ನಿರಾಶ್ರಿತ ಸ್ತ್ರೀಯೊಬ್ಬಳನ್ನು ನಿಃಸ್ವಾರ್ಥ ಸ್ನೇಹಭಾವದಿಂದ ಕಾಪಾಡಲೆಂದು ಅವನು ಬಂದಿದ್ದ. ತನ್ನ ಬಲವೆಷ್ಟು; ಅದು ಎಷ್ಟರ ಮಟ್ಟಿಗೆ ಸಾರ್ಥಕವಾದೀತು ಎಂಬುದನ್ನು ಅರಿತುಕೊಳ್ಳದೆಯೆ ಬಂದಿದ್ದ. ತನ್ನ ಆಗಮನಕ್ಕೊಂದು ಕಾರಣವನ್ನು ಇಷ್ಟರೊಳಗೇ ನಿರ್ಧರಿಸಲಾಗಿದೆಯೆಂಬುದು ಊರೊಳಗೆ ಕಾಲಿಟ್ಟೊಡನೆಯೇ ಅವನಿಗೆ ಕಂಡುಬಂದಿತು. ಆ ಕಾರಣವು ಹೇಯವಾದುದು, ಅಭದ್ರವಾದುದು. ಎಲ್ಲ ಕಡೆಗೂ ಕಪ್ಪು ಬಳಿಯುವುದರಲ್ಲಿ ಕೊಂಚವೂ ಬಾಕಿ ಉಳಿದಿಲ್ಲ. ತನ್ನ ಮಾವನು ಒಂದು ಆದರ್ಶವ್ಯಕ್ತಿಯೆಂದು ಅವನೆಂದೂ ಬಗೆದಿರಲಿಲ್ಲ. ಹಳ್ಳಿಯ ಒಬ್ಬ ವ್ಯವಹಾರಜ್ಞ, ಮನುಷ್ಯ, ಸಾಮಾನ್ಯ ಪರಿಸ್ಥಿತಿಯಲ್ಲಿ ಬೆಳೆದು ಈಗ ಸಾಕಷ್ಟು ಸ್ಥಿತಿವಂತನಾದವನು— ಅಲ್ಲದೆ ಪರಲೋಕಪ್ರವಾಸದ ಖಾತೆಯ ಪುಟವೂ ತೀರ ಬಿಳಿದಾಗಿರಲಿಲ್ಲ—ಎಂಬುದವನಿಗೆ ಚೆನ್ನಾಗಿ ಗೊತ್ತು. ಎಂತಲೇ ಅವನು ಮಾವನ ಕಡೆ ಕ್ಷಮಾವೃತ್ತಿಯಿಂದ ನೋಡುತ್ತಲಿದ್ದ.

ಗುಡಿಯ ಪವಳಿ ಗೋಡೆಯನ್ನು ಸುತ್ತುವರಿದು ಕಾಲುದಾರಿಯಿಂದ ಹೋಗಿ ನಿರ್ಮಲನು ಷೋಡಶಿಯ ಮನೆಯೆದುರಿಗೆ ನಿಂತುಕೊಂಡ. ಆಗವನ ಅಂತಃಕರಣದಲ್ಲಿ ಮಾವನ ಬಗ್ಗೆ ಹುಟ್ಟಿದ ತಿರಸ್ಕಾರ ಭಾವನೆಯೊಂದಿಗೆ, ಷೋಡಶಿಯ ಮೇಲಿನ ಕೋಪವೂ ಸೇರಿ ಅವನ ಮನಸು ಭಾರವಾಗಿತ್ತು. ಸಂಬಂಧ ಸೂತ್ರವಿಲ್ಲದ ಗುರುತ್ತಿಲ್ಲದ ಗಂಡುಸಿಗೆ ಕಾಗದ ಬರೆದು ದಯೆಯನ್ನು ಕೋರುತ್ತಾಳೆ, ಮತ್ತೆ ತಾನು ಹಾಗೆ ಬರೆದುದನ್ನು ನಾಚಿಕೆಯಿಲ್ಲದೆ ಸಂಭ್ರಮದಿಂದ ಬೀದಿ ಬೀದಿ ಹೇಳುತ್ತ ತಿರುಗುತ್ತಾಳೆ; ಇಂತಹ ಹೆಂಗುಸನ್ನು ಸನ್ಮಾನದ ಉಚ್ಚಸ್ಥಾನದಲ್ಲಿ ಕುಳ್ಳಿರಿಸುವುದು ಯೋಗ್ಯವಲ್ಲ ಎಂದವನಿಗೆ ಮತ್ತೆ ಮತ್ತೆ ಎನಿಸತೊಡಗಿತ್ತು. ಅವನ ವಿಚಾರದ ಸರಪಣಿ ಅಲ್ಲಿಗೇ ಹರಿಯಿತು. ಷೋಡಶಿ ಅಂಗಳದ ಹೊರಗೆ ಬಂದು, ಬೇಲಿಬಾಗಿಲಿನ ದಾರವನ್ನು ಕಟ್ಟುತ್ತ ನಿಂತಿರುವುದು ಕಂಡಿತು. ಬಂದವರ ಹೆಜ್ಜೆಯ ಸದ್ದು ಅವಳಿಗೆ ಕೇಳಿಸಲಿಲ್ಲ. ಕ್ಷಣಹೊತ್ತು ನಿರ್ಮಲನು ಅಚೇತನನಾಗಿ ನಿಂತಿದ್ದ. ಆ ಸ್ಥಳದಿಂದ ಕದಲುವುದಕ್ಕೂ ಅವನಿಂದಾಗಲಿಲ್ಲ, ನೋಟವನ್ನು ಹೊರಳಿಸುವುದಕ್ಕೂ ಆಗಲಿಲ್ಲ. ನೋಡಿ ಹೆಚ್ಚು ದಿನಗಳೇನೂ ಆಗಿಲ್ಲ, ಆದರೂ ಇವಳು ಭೈರವಿಯಲ್ಲ ಎಂಬಂತೆ ತೋರಿತವನಿಗೆ.

ಅವಳಲ್ಲಿ ಆದ ವ್ಯತ್ಯಾಸವೇನೆಂದು ಕೇಳಿದರೆ ಹೇಳಲಾಗುತ್ತಿರಲಿಲ್ಲ. ಅದೇ ಕೆಂಪಂಚಿನ ಕಾವಿ ಸೀರೆ, ಅದೇ ಬಿಚ್ಚಿಬಿಟ್ಟ ಒಣಕಲು ಕೂದಲು, ಕೊರಳೊಳಗೆ ರುದ್ರಾಕ್ಷಮಾಲೆ, ಮುಖಮುದ್ರೆಯಲ್ಲಿ ಉಪವಾಸಗಳಿಂದ ಉಂಟಾದ ಗ್ಲಾನಿಯೂ ಅದೇ – ಕುಂಕುಮವನ್ನು ಬಳಿದ ಆ ತ್ರಿಶೂಲವೂ ಒತ್ತಟ್ಟಿಗೆ ಹಾಗೆಯೇ ಇಟ್ಟಿದೆ.— ಏನೂ ಹೆಚ್ಚುಕಡಿಮೆಯಾಗಿಲ್ಲ. ಆದರೂ ಅಜ್ಞಾತವಾದ ಅಪರಿಚಿತವಾದ ಯಾವ ಭ್ರಮೆಯೋ ತನ್ನನ್ನು ಸ್ಥಂಭಿತಗೊಳಿಸುತ್ತಿದೆ ಎಂದವನಿಗೆ ಭಾಸವಾಯಿತು.

ದಾರಕ್ಕೆ ಗಂಟಿಕ್ಕಿ ಷೋಡಶಿ ಮುಖವೆತ್ತಿದಳು. ನೋಡಿ ಒಮ್ಮೆಲೆ ಚಕಿತೆಯಾದಳು. ಆದರೆ ಮರುಕ್ಷಣವೇ ಸವಿನಗೆ ನಗುತ್ತ ಅವನ ಎದುರಿಗೆ ಬಂದು ಮಾತನಾಡಿಸಿದಳು: " ಬರಬೇಕು, ಮನೆಯೊಳಗೆ ಬರಬೇಕು."

ನಿರ್ಮಲನು ವಿಚಲಿತನಾಗಿ ನುಡಿದ: "ನಿಮ್ಮ ಕೆಲಸಕ್ಕೆ ನಾನು ಆತಂಕವಾದೆನೇನೋ :"

ಷೋಡಶಿ ಕೌತುಕದಿಂದ ನಕ್ಕು ಉತ್ತರವಿತ್ತಳು: "ಬಾಗಿಲನ್ನು ಕಟ್ಟುವುದೇ ನನ್ನ ಕೆಲಸವೊ? ಹಾಗಿದ್ದರೂ ಆಪ್ತೇಷ್ಟರನ್ನು ಬರಮಾಡಿ ಕೊಳ್ಳುವುದು ನನ್ನ ಕೆಲಸವಲ್ಲವೋ? ಅತ್ತೆಯ ಮನೆಯಲ್ಲಿ ಅಳಿಯನಿಗೆ ಸನ್ಮಾನ ದೊರೆತಿರಲಿಕ್ಕಿಲ್ಲ; ಆದರೆ ಈ ನಾದಿನಿಯ ಗುಡಿಸಲಿನಲ್ಲಿ ಭಾವನು ಅನಾದರದಿಂದ ತಿರುಗಿ ಹೋಗಬೇಕಾಗುವುದಿಲ್ಲ. ಬರ್ರಿ, ಒಳಗೆ ಹೋಗಿ ಕೂತುಕೊಳ್ಳುವಾ. ಹೈಮ, ಮಗು ಎಲ್ಲರೂ ನೆಟ್ಟಗೇ? ನಿಮ್ಮ ಪ್ರಕೃತಿಯೂ ಚೆನ್ನಾಗಿದೆಯಲ್ಲವೆ?"

ನಿರ್ಮಲನಿಗೆ ಹೇಗೆ ಹೇಗೋ ಆಗತೊಡಗಿತು. ಗೋಣು ಹಾಕುತ್ತ ಅವನೆಂದ: "ಎಲ್ಲರೂ ನೆಟ್ಟಗಿದ್ದಾರೆ. ಆದರೆ ನಾನೀಗ ಹೋಗುತ್ತೇನೆ, ನೀವು ಕೂತುಕೊಳ್ಳಿರಿ."

"ಅದೇಕೆ ಹೇಳಿರಿ" ಎಂದು ನುಡಿದು ಷೋಡಶಿ ಅವನ ಹತ್ತಿರಕ್ಕೆ ಹೋಗಿ, ದನಿಯನ್ನು ಕೊಂಚ ಇಳಿಸಿ, "ಒಂದು ದಿನ ಕತ್ತಲೆಯಲ್ಲಿ ಕೈಹಿಡಿದು ನಡೆಸಿಕೊಂಡು ಬಂದು ನಿಮ್ಮನ್ನು ಹಾದಿಗೆ ಹಚ್ಚಿದ್ದು ನೆನಪಿದೆಯೆ? ಈಗ ಹಗಲುಹೊತ್ತು, ಹಾಗೇನೂ ಮಾಡುವುದು ಬೇಡ. ಒಳಗೆ ಬರ್ರಿ ಎನ್ನುತ್ತೇನೆ. ಅಷ್ಟು ದೂರದಿಂದ ಎಳೆತಂದವಳಿಗೆ ಇಲ್ಲಿಂದಿಲ್ಲಿಯೇ ಸೆಳೆದೊಯ್ಯುವುದೇನೂ ಕಠಿನವಲ್ಲ" ಎಂದಳು.

ಅವಳ ಈ ಉದ್ಗಾರವು ನಿರ್ಮಲನ ಮನಸಿಗೆ ತಗುಲಿತು. ಅವನಿಗೆ ನಾಚಿಕೆಯಾಯಿತು. ಷೋಡಶಿ ತನ್ನೊಂದಿಗೆ ಹೀಗೆ ಮಾತನಾಡಿಯಾಳು, ಈರೀತಿ ನಡೆದುಕೊಂಡಾಳು ಎಂದವನಿಗೆ ಎನಿಸಿರಲಿಲ್ಲ. ವಿದುಷಿ, ಸಂನ್ಯಾಸಿನಿ, ಭೈರವಿ – ಅವಳು ಶಾಂತಪ್ರಕೃತಿಯವಳು, ಸಮದೃಷ್ಟಿಯವಳು, ಕಠೋರವೃತ್ತಿಯವಳು ಎಂದು ಅವನ ನಂಬುಗೆ. ಅವಳನ್ನು ಸ್ತ್ರೀಜಾತಿಯಲ್ಲಿ ಎಣಿಸುವುದೂ ಅವನಿಗೆ ದುಃಸಾಧ್ಯವಾಗಿತ್ತು. ಊರಲ್ಲಿದ್ದಾಗ ಅವನಿಗೆ ಮೇಲಿಂದಮೇಲೆ ಅವಳ ನೆನಪಾಗುತಿತ್ತು. ಕೆಲಸದಲ್ಲಿ ತೊಡಗಿರುವಾಗ, ದಣಿವಾರಿಸಿಕೊಳ್ಳುತ್ತಿರುವಾಗ ಅವನ ಕಣ್ಣೆದುರಿಗೆ ಬರುತ್ತಿದ್ದಳು ಷೋಡಶಿ. ಅವನ ಅಂತರಂಗವನ್ನೆಲ್ಲ ಅವಳು ವ್ಯಾಪಿಸಿಬಿಡುತ್ತಿದ್ದಳು. ಅವನು ಈ ವರೆಗೆ ಅವಳ ಮೂರ್ತಿಯನ್ನು ಒಂದು ರೀತಿಯಾಗಿ ಚಿತ್ರಿಸಿಕೊಂಡಿದ್ದ; ಅವಳ ನಿಶ್ಚಿತ ಸ್ವರೂಪವನ್ನು ನಿರ್ಧರಿಸುವ ಧೈರ್ಯ ಅವನಿ

ಗಾಗಿರಲಿಲ್ಲ; ಆ ಷೋಡಶಿಯೇ ಇಂದು ಅನಪೇಕ್ಷಿತವಾಗಿ ಸಾಮಾನ್ಯ ಮಾನವ ಜಾತಿಯ ಮಟ್ಟಕ್ಕಿಳಿದು ಅತ್ಯಂತ ಮಮತೆಯನ್ನು ತೋರಿಸುತ್ತಿರುವುದನ್ನು ಕಂಡು ನಿರ್ಮಲನ ಹೃದಯಕ್ಕೆ ಅಲಗು ತಾಗಿದಂತಾಯಿತು. ಅದೇ ಕ್ಷಣದಲ್ಲಿ ಆ ಹೃದಯದ ಒಂದು ಮೂಲೆಯೊಳಗೆ ಒಂದು ಬಗೆಯ ಕಲುಷಿತ ಆನಂದದ ಕಿರಣವು ಒಮ್ಮೆ ಮಿಂಚಿತು. ಅವನು ಮನೆಯೊಳಗೆ ಹೋದ ಬಳಿಕ, ಷೋಡಶಿ ಕಂಬಳಿಯನ್ನು ಹಾಸಿಕೊಟ್ಟು "ಹಾದಿಯಲ್ಲಿ ತ್ರಾಸವಾಗಲಿಲ್ಲ ತಾನೆ?" ಎಂದು ಕೇಳಿದಳು.

"ಇಲ್ಲ – ಇಂದು ಗುಡಿಯೊಳಗೆ ನಿಮ್ಮ ಕೆಲಸವಿಲ್ಲವೆ?"

"ಈವೊತ್ತು ರವಿವಾರವಲ್ಲವೆ? ಹಾಗೆ ನೋಡಿದರೆ ಕೆಲಸವಿತ್ತು. ಬೆಳಿಗ್ಗೆ ಮುಗಿಸಿಕೊಂಡು ಬಂದಿದ್ದೇನೆ. ಉಳಿದದ್ದು ತುಸ ತಡವಾಗಿ ಆದರೂ ನಡೆಯುತ್ತದೆ –" ಎಂದು ನಸುನಕ್ಕು ಷೋಡಶಿ ಮತ್ತೆಂದಳು: "ಅಳಿಯಂದಿರೇ, ಇದು ನಿಮ್ಮ ಕೋರ್ಟು ಕಚೇರಿ ಅಲ್ಲ; ದೇವಸ್ಥಾನ. ನಮ್ಮ ದೇವ ದೇವತೆಗಳು ತಮ್ಮ ಸೇವಕರಿಗೆ ಒಂದು ಕ್ಷಣವೂ ಬಿಡುವು ಕೊಡುವುದಿಲ್ಲ. ಇಪ್ಪತ್ತನಾಲ್ಕು ಗಂಟೆ ಕಿವಿಹಿಡಿದು ಅರೆದು ಬಿಡುತ್ತವೆ."

"ಆದರೆ ಈ ಸೇವೆಯನ್ನು ನೀವು ಸ್ವೇಚ್ಛೆಯಿಂದ ಹಿಡಿದಿದ್ದಿರೇನು?"

"ಸ್ವೇಚ್ಛೆಯಿಂದಲೇ? ಹಾಗೆನ್ನಿರಿ ಬೇಕಾದರೆ!" ಎಂದು ಷೋಡಶಿ ಹುಸಿನಗೆ ನಕ್ಕು, "ಒಳ್ಳೇದು ನೀವು ಬರುವುದನ್ನು ಮೊದಲೇ ಏಕೆ ತಿಳಿಸಲಿಲ್ಲ?" ಎಂದು ಕೇಳಿದಳು.

"ಸಮಯವೇ ಇರಲಿಲ್ಲ" ಅದಿರಲಿ ಅತ್ತೆ ಮನೆಯಲ್ಲಿ ಆದರವಾಗಲಿಲ್ಲ, ನಾನು ಬಂದದ್ದು ಅವರಿಗೆ ಸೇರಲಿಲ್ಲ ಎಂಬುದು ನಿಮಗೆ ಹೇಗೆ ತಿಳಿಯಿತು? ನಾನು ಬರುತ್ತೇನೆಂಬುದನ್ನು ಮುಂಚಿತವಾಗಿ ಯಾರು ಡಂಗುರ ಸಾರಿದರು?"

"ಅದು ನನಗೆ ಗೊತ್ತಿಲ್ಲ. ಆದರೆ ಅನುಮಾನಿಸಬಹುದು."

"ಅನುಮಾನಿಸಬಹುದು. ಆದರೆ ಈ ಉಪದ್ವ್ಯಾಪವನ್ನು ಯಾರು ಮಾಡಿದರು, ಎಲ್ಲಿಂದ ಸುದ್ದಿ ಹತ್ತಿತು ಎಂಬುದನ್ನು ನಾನು ನಿಜವಾಗಿ ತಿಳಿದುಕೊಳ್ಳಬೇಕಾಗಿದೆ. ನೀವೇ ಹೇಳಲಿಲ್ಲವಷ್ಟೇ ಇದನ್ನು?"

ಷೋಡಶಿ ನಕ್ಕು ಉತ್ತರವಿತ್ತಳು: "ಯಾರು ಏನು ಅನುಮಾನಿಸಿ

ಕೊಂಡರೂ ನಾನು ಬೇಡವೆನ್ನುವುದಿಲ್ಲ. ಆದರೆ ಅದರಿಂದ ನಿಮಗಾಗುವ ಪ್ರಯೋಜನವೇನು? ನೀವು ಬಂದದ್ದಂತೂ ಸತ್ಯ; ನನಗಾಗಿ ಬಂದದ್ದೂ ಸತ್ಯ; ಬಂದದ್ದು ಸಾರ್ಥಕವಾದೀತೋ ಇಲ್ಲವೋ, ಅದನ್ನು ಹೇಳಿರಿ ಮುಂಚೆ. ಈ ಸಂಕಟದೊಳಗಿಂದ ನನ್ನನ್ನು ದಾಟಿಸಲಾದೀತೇ ನಿಮ್ಮ ಕೈಯಿಂದ?"

"ಶಕ್ಯವಿದ್ದಷ್ಟು ಪ್ರಯತ್ನಿಸುತ್ತೇನೆ."

"ಕಷ್ಟವಾದರೂ?"

"ಹೌದು, ಕಷ್ಟವಾದರೂ."

ಷೋಡಶಿ ನಗತೊಡಗಿದಳು. ಅವಳ ಮೋರೆಯ ಕಡೆ ನೋಡಿ ಹಾಗೇ ಸ್ವಲ್ಪ ನಕ್ಕು "ಏಕೆ ನಗುವಿರಿ?" ಎಂದು ನಿರ್ಮಲನು ಕೇಳಿದ.

"ಹೌದು, ನಕ್ಕೆ. ಹಿಂದಿನ ಕಾಲದಲ್ಲಿ ಭೈರವಿಯರು ವಿದೇಶಿಗಳನ್ನು ಟಗರು ಮಾಡುತ್ತಿದ್ದರು. ಟಗರು ಮಾಡಿ ಏನುಮಾಡುತ್ತಿದ್ದರು ಅವರು? ಬರೀ ಮೇಯಿಸಲಿಕ್ಕೆ ಒಯ್ಯುತ್ತಿದ್ದರೋ, ಏನು ಹಾಯ್ದಾಟಕ್ಕೆ ಹಚ್ಚಿ ವಿನೋದಬಡುತ್ತಿದ್ದರೊ?" ಎಂದು ನುಡಿದು ಷೋಡಶಿ ಮಕ್ಕಳಂತೆ ಬಿದ್ದು ಬಿದ್ದು ನಕ್ಕಳು.

ನಿರ್ಮಲನ ಶರೀರದೊಡನೆ ಮನಸೂ ರೋಮಾಂಚಿತವಾಗಿ ನಲಿಯಿತು. ಸಂನ್ಯಾಸದ ಕಠೋರ ಆವರಣದೊಳಗೆ ವಿನೋದಪ್ರಿಯವಾದ ಕೌತುಕಮಯವಾದ ಚಂಚಲ ನಾರೀಪ್ರಕೃತಿ ಹುದುಗಿಕೊಂಡಿದೆ, ಪ್ರತೋಷ ವಾಸಗಳ ನಿಷ್ಠುರ ಸಾಧನಗಳಿಂದ ನಿರ್ಮಲ ಹಾಸ್ಯದ ಝರಿ ಇನ್ನೂ ಬತ್ತಿಲ್ಲ, ಬೂದಿ ಮುಚ್ಚಿದ ಕೆಂಡದಂತೆ ಇನ್ನೂ ಜೀವಂತವಾಗಿದೆ ಎಂಬುದನ್ನರಿತು ಅವನ ಮೈಗೂದಲು ನೆಟ್ಟಗಾದುವು.

ಅವಳ ನಗೆಚೇಟಿಕೆಯನ್ನು ಅನುಮೋದಿಸುತ್ತ ನಗುನಗುತ್ತ ಅವನೆಂದ: "ಹೌದು,– ಯಾರು ಬಲ್ಲರು? ಒಂದು ಸಮಯ ಅವನನ್ನು ದೇವಿಯ ಎದುರಿಗೆ ಬಲಿಗೊಡುತ್ತಿರಲೂ ಬಹುದು. ನಮ್ಮ ಅತ್ತೆಮಾವಂದಿರು ಇಷ್ಟರೊಳಗೆಂದಾದರೂ ನಿಮ್ಮ ಕಡೆ ಬಂದು ನಿಮ್ಮನ್ನು ಗೊಳಾಡಿಸಿ ಹೋಗಿಲ್ಲವಷ್ಟೆ?"

"ಇಲ್ಲ. ಯಾರೂ ಬಂದಿಲ್ಲ ಈ ಕಡೆ. ನನಗೆ ಮಂತ್ರ ತಂತ್ರಗಳಲ್ಲಿ

ಸಿದ್ಧಿ ದೊರಕಿದೆ ಎಂದೆನ್ನುತ್ತಾರೆ. ಅದು ಸುಳ್ಳಿದ್ದರೂ ಇರಬಹುದು. ಆದರೆ ಅದರಿಂದ ನನಗೆ ಎಲ್ಲವೂ ತಿಳಿಯುವುದೆಂದು ನಿಮಗೆನಿಸುವುದಿಲ್ಲವೇ ನಿರ್ಮಲಬಾಬೂ? ಒಟ್ಟಾರೆ ನಿಮ್ಮ ಆಗಮನದ ಧೋರಣದ ಮೂಲಕ ನಿಮ್ಮಿಷ್ಟಕ್ಕೆ ನೀವೇ ಸಾಶಂಕರಾದಂತೆ ಕಾಣುತ್ತೀರಿ. ನಾನು ನಿಮ್ಮನ್ನು ಕೆಳೆದು ತಂದದ್ದು ಸಿದ್ಧಿಯ ಬಲದಿಂದಲ್ಲ ಎಂದು ಹೇಗೆನ್ನುವಿರಿ?"

ಷೋಡಶಿಯ ಮುಖದಲ್ಲಿಯ ನಗೆಯ ಕಳೆ ಹಾಗೆಯೇ ಇದ್ದಿತು. ಮಾತಿನ ಧ್ವನಿ ಮಾತ್ರ ಬದಲಾಗಿದ್ದಿತು. ತುಟಿಯ ಮಾತಿಗೂ ಕೊರಳಿನ ದನಿಗೂ ಮೇಳವಿರಲಿಲ್ಲ.

ನಿರ್ಮಲನು ಆಶ್ಚರ್ಯಚಕಿತನಾದ. ಆಡಲಿಕ್ಕೆ ಮಾತು ಹೊಳೆಯಲಿಲ್ಲ. ಅವಳು ಚೇಷ್ಟೆ ಮಾಡುತ್ತಿದ್ದಾಳೋ ಚುಚ್ಚುತ್ತಿದ್ದಾಳೋ? ಅವಳು ಹೀಗೇಕೆ ಮಾತನಾಡುತ್ತಿದ್ದಾಳೆಂಬುದೇ ಅವನೆಣಿಕೆಗೆ ನಿಲುಕದಾಯಿತು. ಷೋಡಶಿಯು ಮತ್ತೆ ಯಾವ ಮಾತನ್ನೂ ಆಡಲಿಲ್ಲ. ಆದರೆ ಅವಳ ಬಾಗಿದ ಮುಖದಲ್ಲಿ ಅನಪೇಕ್ಷಿತವಾದ ಲಜ್ಜೆಯ ನಸುಗೆಂಪು ಮಿನುಗಿದುದು ಅವನಿಗೆ ಗೋಚರಿಸಿತು. ಅದೂ ಒಂದೇ ಒಂದು ನಿಮಿಷ.

ಮನವನ್ನು ಸಾವರಿಸಿಕೊಂಡು ಮೇಲೆ ನೋಡಿ ನಗುಮೊಗದಿಂದ ಷೋಡಶಿಯೆಂದಳು: "ಅಪ್ತರ ಸ್ವಾಗತ ಮಾಡಿದ್ದಾಯಿತು; ಸಾಕಷ್ಟು ನಗೆ ಚೇಟಿಕೆ ಮಾಡಿದ್ದೂ ಆಯಿತು. ಇದಕ್ಕಿಂತ ಹೆಚ್ಚಿಗೆ ನನಗಿನ್ನು ಸಾಧ್ಯವಿಲ್ಲ. ಇಷ್ಟು ಸಾಕು. ಕೆಲಸದ ಮಾತನಾಡುವಾ."

ಅವಳ ಮಮತೆಯ ಮಾತನ್ನು ಕೇಳುತ್ತಿದ್ದಾಗ ಅವನ ಮನಸ್ಸು ಸಾಶಂಕವೇನೋ ಆಗುತ್ತಿದ್ದಿತು. ಆದರೂ ಒಳಗೊಂದು ಬಗೆಯ ಉಲ್ಲಾಸವೂ ಇತ್ತು. "ಹೇಳಿರಿ ಮತ್ತೆ" ಎಂದ.

"ದೇವಿಯ ಆಸ್ತಿಯ ಮೇಲೆ ಇಬ್ಬರ ಕಣ್ಣಿವೆ: ಒಬ್ಬರು ರಾಯ ಮಹಾಶಯರು, ಒಬ್ಬರು ಜಮೀನುದಾರರು—"

"ಇನ್ನೊಬ್ಬರು ನಿಮ್ಮ ತಂದೆ. ಅವರಂತೂ ನಿಮ್ಮನ್ನೂ ಮೋಸಗೊಳಿಸಬೇಕೆನ್ನುತ್ತಾರೆ."

"ತಂದೆಯೆ? ಹೌದು, ಅವರೊಬ್ಬರಿದ್ದಾರೆ ನಿಜ!" ಎಂದು ನುಡಿದು ಷೋಡಶಿ ಸುಮ್ಮನಾದಳು.

"ನಮ್ಮ ಮಾವನ ಅಭಿಪ್ರಾಯ ನನಗೆ ತಿಳಿದಿದೆ. ನಿಮ್ಮ ತಂದೆಯದೂ ತಕ್ಕಮಟ್ಟಿಗೆ ತಿಳಿದಿದೆ. ಆದರೆ ಜಮೀದಾರರ ಧೋರಣವೇ ನನಗೆಷ್ಟೂ ತಿಳಿಯಲೊಲ್ಲದು. ನಿಮ್ಮ ಮೇಲೇಕೆ ಅವರಿಷ್ಟು ವಿಷ ಕಾರುತ್ತಾರೆ?"

"ದೇವಸ್ಥಾನದ ಒಡೆತನಕ್ಕೆ ಸೇರಿದ ಎಷ್ಟೋ ಭೂಮಿಯನ್ನು ತಮ್ಮದೆಂದು ಹೇಳಿ ಮಾರಬೇಕೆಂದು ಅವರ ಹಂಚಿಕೆ. ನಾನಿರುವ ತನಕ ಅದು ಸಾಧಿಸುವಂತಿಲ್ಲ!"

ನಿರ್ಮಲನು ನಕ್ಕು ನಾನು ಅದನ್ನು ನೋಡಿಕೊಳ್ಳುತ್ತೇನೆ" ಎಂದು ನುಡಿದು ಷೋಡಶಿಯ ಕಡೆ ನೋಟ ಬೀರಿದ. ಅವಳು ಅತ್ಯಂತ ನಿರ್ವಿಕಾರಭಾವದಿಂದ ನಿಂತಿದ್ದಳು. ಮುಖದಲ್ಲಿಯ ಒಂದು ಗೆರೆಯೂ ಅಳಿದಿರಲಿಲ್ಲ.

ಒಂದು ಕ್ಷಣ ಕಳೆಯಿತು. ಅವಳು ಕತ್ತೆತ್ತಿ ಮಾತನಾಡಲು ತೊಡಗಿದಳು.

"ಇನ್ನೂ ಅನೇಕ ವಿಷಯಗಳಿವೆ. ಆದರೆ ಅವು ನಿಮ್ಮ ಅಳವು ಮೀರಿದವು."

"ಅವು ಯಾವವು? ಒಂದು: ನಿಮ್ಮ ದುರ್ನಾಮದ ಸುಳ್ಳು ಹರಲಿಯೆ?"

ಯಾವ ಬಗೆಯ ಉತ್ಸುಕತೆಯನ್ನೂ ತೋರದೆ ಷೋಡಶಿ ಶಾಂತವಾಗಿ ಹೇಳಿದಳು: "ನನಗದರ ಪರಿವೆಯಿಲ್ಲ. ದುರ್ನಾಮ ಸುಳ್ಳಿರಲಿ, ಸತ್ಯವಿರಲಿ; ಭೈರವಿಯ ಜೀವನವೇ ದುರ್ನಾಮದಿಂದ ತುಂಬಿದ್ದು ನಿರ್ಮಲ ಬಾಬೂ. ಇದನ್ನೇ ನಾನವರಿಗೆ ಹೇಳಬೇಕಾಗಿದೆ."

ಆಶ್ಚರ್ಯಚಕಿತನಾಗಿ ನಿರ್ಮಲನು ಕೇಳಿದ: "ಅದನ್ನು ನೀವೇ ಹೇಳುವಿರಾ? ಅದರಿಂದ ಒಪ್ಪಿಕೊಂಡಂತೆಯೇ ಆಗುವುದಿಲ್ಲವೆ?"

ಷೋಡಶಿ ಮಾತನಾಡಲಿಲ್ಲ.

ತಡವರಿಸುತ್ತ ತಡವರಿಸುತ್ತ ನಿರ್ಮಲನೆಂದ: "ಅವರೆನ್ನುತ್ತಾರೆ—"

"ಅವರೆಂದರೆ ಯಾರು?"

"ಬಹು ಜನರು ಎನ್ನುತ್ತಾರೆ– ನೀವು ಆಗ ...."

"ಯಾವಾಗ?"

ನಿರ್ಮಲನು ಕ್ಷಣಹೊತ್ತು ಮೌನ ತಾಳಿದ. ಕೊನೆಗೆ ಸಂಕೋಚ ವನ್ನು ಬಲವಂತದಿಂದ ಹತ್ತಿಟ್ಟು ಅವನೆಂದ: "ಮ್ಯಾಜಿಸ್ಟ್ರೇಟರು ಬಂದ ಕಾಲಕ್ಕೆ, ನಿಮ್ಮ ತೊಡೆಯ ಮೇಲೇನೋ—"

"ಯಾರಾದರೂ ನೋಡಿದ್ದರೇನು?" ಆಶ್ಚರ್ಯದಿಂದ ಷೋಡಶಿ ಮಾತನಾಡಿದಳು: "ಇದ್ದರೂ ಇದ್ದೀತು. ನನಗೇನು ಸರಿಯಾಗಿ ಜ್ಞಾಪಕ ವಿಲ್ಲ. ಯಾರಾದರೂ ನೋಡಿದ್ದರೆ ಅದು ಸತ್ಯವೇ. ಜಮಿನಾದಾರರ ತಲೆ ಯನ್ನು ನಾನು ತೊಡೆಯಮೇಲಿಟ್ಟು ಕೂತಿದ್ದೆ."

ಎಷ್ಟೋ ಹೊತ್ತು ಸುಮ್ಮನಿದ್ದು ಬಳಿಕ ಮೆಲ್ಲಮೆಲ್ಲನೆ ನಿರ್ಮಲನು ಕೇಳಿದ: "ಒಳ್ಳೇದು, ಮುಂದೆ?"

ಷೋಡಶಿಯ ಶಾಂತ ಮುಖಮುದ್ರೆಯಲ್ಲಿ ನಗೆಯುರಳಿತು. ಅವ ಳೆಂದಳು: "ಮುಂದೇ? ಮುಂದಿದು ಹೀಗೆಯೇ ಸಾಗಿದೆ. ಮನಸು ಏತ ರೊಳಗೂ ನಿಲ್ಲದಾಗಿದೆ. ಎಲ್ಲವೂ ಸುಳ್ಳೆಂದು ಎನಿಸತೊಡಗಿದೆ ನನಗೆ."

"ಯಾವುದು ಸುಳ್ಳೆನಿಸುತ್ತಿದೆ?"

"ಎಲ್ಲವೂ! ಧರ್ಮ, ಕರ್ಮ, ವ್ರತ, ಉಪವಾಸ, ದೇವಸೇವೆ, ಈವರೆಗಿನದೆಲ್ಲವೂ—"

"ಆದರೂ ಭೈರವಿಯ ಪೀಠ ಬೇಕೇ!"

"ಬೇಕೆಂದರೇನು? ಆದರೆ ನೀವು ಬೇಡವೆಂದೆನ್ನುತ್ತಿದ್ದರೆ—"

"ಇಲ್ಲಿಲ್ಲ, ನಾನೇನೂ ಹೇಳುವುದಿಲ್ಲ" ಎಂದು ನುಡಿದು ನಿರ್ಮಲನು ಒಮ್ಮೆಲೆ ಎದ್ದು ನಿಂತು, "ಹೊತ್ತು ಬಹಳವಾಯಿತು. ನಾನೀಗ ಹೋಗು ತ್ತೇನೆ" ಎಂದ.

ಅವನೇಳುತ್ತಲೇ ಷೋಡಶಿಯೂ ಎದ್ದು ನಿಂತು "ನಾನೂ ಈಗ ಗುಡಿಗೆ ಹೋಗಬೇಕಾಗಿದೆ. ಮತ್ತೆ ಯಾವಾಗ ಭೆಟ್ಟಿ?" ಎಂದು ಕೇಳಿದಳು.

ನಿರ್ಮಲನು ಬಾಯೊಳಗೇ ಏನೋ ಗುಣುಗುಣು ನುಡಿದ. ಅದು ಅವಳಿಗೆ ಸರಿಯಾಗಿ ಕೇಳಿಸಲಿಲ್ಲ. ಒಮ್ಮೆಲೆ ಅವಳೆಂದಳು: "ಒಳ್ಳೇದು,

ಇಂದು ಸಂಜೆಯ ಮುಂದೆ ನನ್ನ ಬಗ್ಗೆ ವಾದವಿವಾದ ಆಗುವುದಿದೆ ಗುಡಿಯೊಳಗೆ. ಆಗ ಬರುವಿರಾ?"

ಬರೀ ಗೋಣುಹಾಕಿ ಸಮ್ಮತಿಯನ್ನು ಸೂಚಿಸಿ ನಿರ್ಮಲನು ಹೊರಟು ಹೋದ.

ಷೋಡಶಿ ತನ್ನಷ್ಟಕ್ಕೆ ತಾನೆ ಕೊಳ್ಳನೆ ನಕ್ಕಳು. ಬಾಗಿಲಿಕ್ಕಿ ಚಿಲಕ ಹಾಕಿ ಗುಡಿಗೆ ಹೊರಟಳು.

## ೨೧

ಮಾವ ಅಳಿಯ ಇಬ್ಬರೂ ಊಟಕ್ಕೆ ಕುಳಿತಿದ್ದರು. ಮೊಸರು ವಿತಾಯಿ ತರಲು ಅತ್ತೆ ಒಳಗೆ ಹೋದಳು.

"ಷೋಡಶಿಯ ಭೆಟ್ಟಿಯಾಯಿತೆ ನಿರ್ಮಲ?" ರಾಯ ಮಹಾಶಯನು ಪ್ರಶ್ನಿಸಿದ.

"ಹುಂ" ಮೋರೆಯನ್ನು ಮೇಲೆತ್ತದೆ ನಿರ್ಮಲನೆಂದ.

"ಏನೆನ್ನುತ್ತಾಳೆ ಅವಳು?"

ಪ್ರಶ್ನೆ ಎಷ್ಟು ಸಾಮಾನ್ಯ! ಅದಕ್ಕೆ ಉತ್ತರ ಕೊಡುವುದೂ ಬಿರಿಯಾಯಿತು. "ಯಾವ ವಿಷಯಕ್ಕೆ?" ಕ್ಷಣ ತಡೆದು ನಿರ್ಮಲನು ಕೇಳಿದ.

"ಅದೇ ದೇವಸ್ಥಾನದ ವಿಷಯಕ್ಕೆ. ಮಗಳು ಭೈರವಿತನವನ್ನು ಬಿಡುತ್ತಾಳಂತೆಯೋ, ಏನು ಚಂಡೀಗಡದ ಹೆಸರನ್ನೇ ಮುಳುಗಿಸುತ್ತಾಳಂತೆಯೋ? ಊರ ಜನ ಉದ್ರೇಕಗೊಂಡಿದ್ದಾರೆ. ಬೇರೆ ಊರವರಿಗೆ ಮೋರೆ ತೋರಿಸುವುದೂ ಈ ಊರವರಿಗೆ ಕಠಿನವಾಗಿದೆ."

ನಿರ್ಮಲನು ಮಾತನಾಡಲಿಲ್ಲ. ಚಂಡೀಗಡದ ಭೈರವಿಯರ ವಿಷಯದಲ್ಲಿ ಅವೆಷ್ಟೋ ಆರೋಪಗಳು ಅನಾದಿಕಾಲದಿಂದಲೂ ಇದ್ದುದುವೆ. ಆದರೆ ಅದಕ್ಕಾಗಿ ಊರಜನ ಲಜ್ಜೆಯಿಂದ ಜೀವಬಿಟ್ಟ ಉದಾಹರಣೆ ಒಂದೂ ಇಲ್ಲ. ಸಾಕ್ಷಾತ್ ಚಂಡೀಮಾತೆಯೂ ಒಮ್ಮೆಯಾದರೂ ವಿರೋಧಿಸಿದಂತೆ ಕೇಳಿಕೆಯಲ್ಲಿಲ್ಲ. ಭೈರವಿಯರ ರೀತಿನೀತಿ, ಆಚಾರ ಅನಾಚಾರ ಎಲ್ಲವೂ ಅವನಿಗೆ ಗೊತ್ತಿದುದರಿಂದಲೇ ಅವನ ಮನಸು ಈ ವಿಷಯದಲ್ಲಿ ತೀರ ನಿಸ್ಪೃಹವಾಗಿತ್ತು.

ಹೆಚ್ಚಾಗಿ, ಷೋಡಶಿಯ ಮೇಲಿನ ಆರೋಪಗಳನ್ನು ಅವನು ನಂಬು ತ್ತಿರಲಿಲ್ಲ. ಆ ಆರೋಪಗಳು ಸಪ್ರಮಾಣವಾಗಿ ಸುಳ್ಳೆಂದಾದರೆ ಅವನಿಗೆ ಸಂತೋಷವೇ. ಅಲ್ಲದೆ, ಇರುವಷ್ಟು ಪ್ರಮಾಣಗಳಿಂದ ಅವಳನ್ನು ಪದ ಚ್ಯುತಗೊಳಿಸಲು ಬಂದೀತೆಂದು ಅವನಿಗೆನಿಸುತ್ತಿರಲಿಲ್ಲ. ಅವನ ಮಾವನ ಇಂಗಿತಗಳು ಹೊಸವೇನಲ್ಲ, ಭಯಂಕರವಾದವೂ ಅಲ್ಲ. ಈ ಎಲ್ಲ ವಿಚಾರ ಗಳು ಮನಸಿನೊಳಗೆ ಅಕಸ್ಮಾತ್ ಬಂದೊಡನೆ ಫಕ್ಕನೆ ಎಚ್ಚತ್ತಂತೆ ಸಾವರಿ ಸಿಕೊಂಡು ಕುಳಿತ. ತನ್ನ ಮನಸಿನ ಈ ವಿಕ್ಷಿಪ್ತತೆಗಾಗಿ ಅವನಿಗೇ ಅಚ್ಚರಿ ಯಾಯಿತು.

ಅವನು ಮಾತನಾಡುವುದಿಲ್ಲವೆಂದರಿತು ಜನಾರ್ದನರಾಯನು ಮತ್ತೆ ಕೇಳಿದ: "ನಿನಗೇನೆನಿಸುತ್ತದೆ?"

ತಕ್ಕಂತೆ ಸರಿಯಾದ ಉತ್ತರವನ್ನು ಕೊಡುವಷ್ಟು ನಿರ್ಮಲನು ಸ್ವಸ್ಥ ಚಿತ್ತನಾಗಿರಲಿಲ್ಲ, ಅದಕ್ಕೆ ಅವಕಾಶವೂ ಇರಲಿಲ್ಲ. ಹಿಂದಿನ ಮಾತಿನ ಅನುರೋಧದಿಂದ ಅವನೆಂದ: "ಭೈರವಿಗೆ ದುರ್ನಾಮವೆಂಥದು? ಹಾಗೆ ನಡೆಯುವುದೇ."

"ಅದು ಸರಿ. ಆದರೆ ಒಟ್ಟಾರೆ ದುರ್ನಾಮ ಎಂಬುದೇ ಒಳ್ಳೆಯ ದಲ್ಲ. ಮೊದಲಿನಿಂದಲೂ ನಡೆದುಬಂದದ್ದೆಂದ ಮಾತ್ರಕ್ಕೆ ಮುಂದೆಯೂ ನಡೆಯಲಿ ಎಂಬುದು ಯೋಗ್ಯವಲ್ಲ. ಏನೆಂದೆ?"

"ಆದರೆ ಈ ಆರೋಪ ಸತ್ಯವೆಂಬುವದಕ್ಕೆ ಪ್ರಮಾಣವುಂಟೆ?"

"ಅರ್ಥಾತ್ – ಉಂಟು!" ರಾಯಮಹಾಶಯನು ನಿಃಸಂದಿಗ್ಧ ವಾಗಿ ಉತ್ತರವಿತ್ತ.

ಕ್ಷಣಹೊತ್ತು ತಡೆದು ನಿರ್ಮಲನು. "ಏನು? ನಿಶ್ಚಿತ ಪ್ರಮಾಣವನ್ನು ತೋರಿಸಿದವರು ಯಾರು?" ಎಂದು ಪ್ರಶ್ನಿಸಿದ.

"ಯಾರು ತೋರಿಸಿದರೋ ಅವರು ಈಹೊತ್ತು ತೋರಿಸಬಲ್ಲರು. ಸಂಜೆಯ ಮುಂದೆ ದೇವಸ್ಥಾನಕ್ಕೆ ಬಾ, ಎಂದರೆ ನಿನಗೆಲ್ಲವೂ ಮಂದಟ್ಟಾ ಗುವುದು. ಮಾವ-ಅಳಿಯ ಇದಿರು ಬದಿರು ನಿಂತು ಜಗಳವಾಡುವ ಮೋಜನ್ನು ಊರ ಜನ ನೋಡುವುದು ಬೇಡ. ನಿನ್ನ ಉದ್ಯೋಗನೇ

ಇದೆಂದ ಮೇಲೆ ನಿಶ್ಚಿತ ಪ್ರಮಾಣವೆಂದರೆ ಏನೆಂಬುದನ್ನು ನೀನು ಬಲ್ಲೆ. ಅಲ್ಲಿಗೆ ಬಂದು ಕೇಳಿಕೊಂಡೆಯೆಂದರೆ ನಾನು ಬೇರೆ ಹೇಳುವ ಅಗತ್ಯವಿಲ್ಲ."

ಅತ್ತೆ ಮೊಸರು ಮಿಠಾಯಿ ತಂದಳು. ಅಳಿಯನನ್ನು ನೋಡಿ, "ಇದೇನಪ್ಪ, ಉಣಲೊಲ್ಲೆಯಲ್ಲ?" ಎಂದಳು.

"ಅದೇಕೆ, ಉಣ್ಣುತ್ತೇನಲ್ಲ" ಎಂದು ನುಡಿದು ನಿರ್ಮಲನು ಊಟ ಮಾಡಲಾರಂಭಿಸಿದ.

"ನನಗೆ ಕೊಂಚ ಹಾಲು ತಾರಲ್ಲ, ಮೈಯೊಳಗೆ ಸ್ವಲ್ಪ ನೆಟ್ಟಗಿಲ್ಲ. ಮೊಸರು ಬೇಡ ನನಗೆ" ಎಂದು ರಾಯಮಹಾಶಯನು ಹೇಳಿದ.

ಅವಳು ಒಳಗೆ ಹೊರಟುಹೋದಳು. ಆಗ ಮತ್ತೆ ರಾಯಮಹಾಶಯನೆಂದ: "ಆ ದಿವಸ ಕತ್ತಲೆಯ ರಾತ್ರಿಯಲ್ಲಿ ಅವಳು ನಿನ್ನನ್ನು ಕೈ ಹಿಡಿದು ಮನೆಗೆ ತಂದು ಬಿಟ್ಟಳು. ಅದಕ್ಕಾಗಿ ನಿನಗೊಬ್ಬನಿಗೇ ಏಕೆ, ನಮಗಾದರೂ ಉಪಕಾರವೆನಿಸುತ್ತಿದೆ. ಉಪಕಾರವನ್ನು ಅಪಕಾರದಿಂದ ತೀರಿಸುವುದು ಉಚಿತವಲ್ಲ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಇದು ನನ್ನೊಬ್ಬನ ವಿಷಯವಲ್ಲ. ಇದು ಊರಿನ ಉಪದ್ವ್ಯಾಪ, ಸಮಾಜದ ಗಲಾಟೆ, ದೇವ ದೇವತೆಯ ತೊಡಕು. ಅಂತೂ, ಸ್ವಂತದ ಕರ್ತವ್ಯಕ್ಕಿಂತ ದೊಡ ಕರ್ತವ್ಯ ಯಾವುದೆಂಬುದನ್ನು ನಿರ್ಧರಿಸಿಕೊಂಡೇ ನಾವು ಸಾಗಬೇಕಾಗಿದೆ."

ಆ ರಾತ್ರಿಯ ಸಂಗತಿ ಎಲ್ಲರಿಗೂ ಗೊತ್ತಾಗಿಬಿಟ್ಟಿದೆ. ತಾನೇ ಹೇಳಿದ್ದರೆ ಚೆನ್ನಾಗಿತ್ತು!.... ಅವನ ಮನಸು ನಾಚಿಕೊಂಡಿತು. ಅವನು ಸುಮ್ಮನಿದ್ದ. ರಾಯನು ಹೇಳುತ್ತ ಹೊರಟ: "—ದೇವದೇವಿಯರು ಮಾತನಾಡುವುದಿಲ್ಲ. ಆದರೆ ಮಾಡಬೇಕಾದ ಶಾಸ್ತಿ ಮಾಡಿಯೇ ಮಾಡುತ್ತಾರೆ. ಊರಿನ ಏಳಿಗೆಯಾಗಲೊಲ್ಲದು, ದಿನದಿನಕ್ಕೆ ಅವನತಿಯೇ ಆಗುತ್ತಿದೆ; ನನಗೆನಿಸುತ್ತದೆ—ಅದಕ್ಕಿದೇ ಕಾರಣ. ಪ್ರಮಾಣವುಂಟೇ ಎಂದು ಕೇಳುತ್ತೀ. ಆದರೆ ನೀನು ಬರುತ್ತೀಯೆಂಬುದು ನಮಗೆ ಹೇಗೆ ತಿಳಿಯಿತು, ಹೇಳು. ನೀನು ನನಗೆ ಮಗನಿದ್ದ ಹಾಗೆ. ಇಂಥ ವಿಷಯವನ್ನು ನಿನ್ನ ಮುಂದೆ ಬಿಚ್ಚಿ ಹೇಳುವುದು ಕಠಿಣವೆನಿಸುತ್ತಿದೆ. ಆದರೆ ವಿಧಿಯಿಲ್ಲ. ಕೇಳು: ಒಂದಿನ ರಾತ್ರಿ ಜಮೀದಾರಬಾಬು ಆ ಕಡೆ ಹೋಗಿದ್ದರು. ಅವರ ಊಟವಾಗಿರಲಿಲ್ಲ. ಅವರಿಗಾಗಿ ಏನಾದರೂ ತಿಂಡಿ ತರುವುದಕ್ಕಾಗಿ ಷೋಡಶಿ

ಅಡುಗೆ ಮನೆಯೊಳಗೆ ಹೋಗಿದ್ದಳು. ಆಗ ಅವರಿಗೆ ಅಲ್ಲೊಂದು ಹರಿದ ಪತ್ರ ಸಿಕ್ಕಿತು. ನನಗೆನಿಸುವುದೆಂದರೆ, ಅವಳು ಮೊದಲು ನಿನಗೇ ಬರೆದಿರಬೇಕು; ಬಳಿಕ ಅದನ್ನು ಹರಿದು ಚೆಲ್ಲಿ ಹೈಮಳಿಗೆ ಬರೆದಿರಬೇಕು. ಈ ದಿನ ಸಭೆಯಲ್ಲಿ ಆ ಪತ್ರವೂ ನಿನಗೆ ನೋಡಲು ಸಿಕ್ಕಬಹುದು. ಬರುವಾಗ ಜಮಿಾದಾರಬಾಬು ಆ ಪತ್ರವನ್ನು ತಂದಿರುವರು."

ಇದನ್ನು ಕೇಳಿ ನಿರ್ಮಲನಿಗೆ ಸಿಟ್ಟುಬಂದಿತು. ಸಂತಾಪದಿಂದ ಕುದಿಯುತ್ತ ಅವನೆಂದ: "ಸುಳ್ಳು ಸುಳ್ಳು, ಆ ನಿರ್ಲಜ್ಜ ಮನುಷ್ಯನೇ ದೋಷಿ. ಆ ದುಷ್ಟ ಕುಡಕನ ಮಾತನ್ನು ನಂಬಿದಿರಾ ನೀವು?"

ರಾಯಮಹಾಶಯನು ನಸುನಕ್ಕು ಶಾಂತವಾಗಿ ಹೇಳಿದ: "ನಂಬಲೇಬೇಕಾಗಿದೆ; ಅಲ್ಲ, ನನಗೆ ಮನವರಿಕೆಯೇ ಆಗಿದೆ. ಈ ಜಮಿಾದಾರರು ನಿರ್ಲಜ್ಜರು, ದುಷ್ಟರು, ಅಯೋಗ್ಯರು, ಕುಡಕರು ಎಂಬುದು ನನಗೆ ಗೊತ್ತಿದೆ. ಇನ್ನೂ ಎಷ್ಟೋ ಗುಣಗಳು ಇದ್ದಿರಬಹುದು ಅವರಲ್ಲಿ. ಇಲ್ಲದಿದ್ದರೆ ಇಂಥ ವಿಷಯವನ್ನು ಅವರು ಹೊರಗೆಡವುತ್ತಿರಲಿಲ್ಲ. ಅವರು ನಿಷ್ಕರುಣಿ ಎಂಬುದರಲ್ಲಿ ಸಂದೇಹವಿಲ್ಲ. ಊರಿನ ಕಲ್ಯಾಣಕ್ಕಾಗಿಯೇನೂ ಈ ಕೆಲಸದಲ್ಲಿ ಕೈ ಹಾಕಿಲ್ಲ ಅವರು. ದೇವರು ದಿಂಡರು, ಧರ್ಮ ಕರ್ಮಗಳನ್ನು ಅವರೆಲ್ಲಿ ಒಪ್ಪುತ್ತಾರೆ? ಮೊನ್ನೆ ಗುಡಿಯೊಳಗೆ ಬಲಾತ್ಕಾರದಿಂದ ನಿಷಿದ್ಧ ಪಶುವನ್ನು ಬಲಿಗೊಡಿಸಿ ತಮ್ಮ ಬಾಯ್ತೀಟೆ ತೀರಿಸಿಕೊಂಡರು. ಒಂದೊಂದು ಸಮಯ ಈ ಧರ್ಮಲಂಡ ಕುರಿ ಕೋಣಗಳ ಮಾಂಸವನ್ನೇಕೆ, ಆಕಳ ಮಾಂಸವನ್ನೂ ತಿನ್ನಬಹುದು—"

"ಇಷ್ಟಿದ್ದೂ ನೀವವರಿಗೆ ಸಹಾಯ ಮಾಡುವಿರಾ?"

"ಇಲ್ಲ. ಮುಳ್ಳಿನಿಂದ ಮುಳ್ಳು ತೆಗೆಯಬೇಕಾಗಿದೆ."

ಕೊಂಚ ತಡೆದು ನಿರ್ಮಲನೆಂದ: "ನಿಮ್ಮ ಈ ಮುಳ್ಳು ಹೋಗುವುದೋ ಇಲ್ಲವೋ ಯಾರು ಬಲ್ಲರು? ಅವನು ಮಾತ್ರ ನಿಷ್ಕಂಟಕನಾದಾನು. ದೇವಿಯ ಆಸ್ತಿಯನ್ನು ಅವನು ಮಾರಬೇಕೆಂದಿದ್ದಾನೆ. ಷೋಡಶಿ ಭೈರವಿಯಾಗಿರುವ ವರೆಗೆ ಅವನಿಷ್ಟ ಕೈಗೂಡುವಂತಿಲ್ಲ."

"ಅವಳು ಹೋದರೂ ಕೈಗೂಡಲಾರದು–ನಾನಿದ್ದೇನಲ್ಲ!"

'ಇವರಿದ್ದಾರೆ!'–ಇಷ್ಟೊಂದು ಪ್ರಚಂಡ ವ್ಯವಧಾನವುಂಟೆಂಬುದು

ನಿರ್ಮಲನಿಗೆ ಹೊಳೆದಿರಲಿಲ್ಲ. ಜಮೀದಾರನಿಗೆ ಇಷ್ಟ ಕೈಗೂಡಲಾರದು, ಹಾಗೆಯೆ ದೇವಿಗೂ ಸಾಧಿಸಲಾರದು. ಯಾರಿಗೆ ಸಾಧಿಸೀತೆಂಬುದು ನಿರ್ಮಲನಿಗೆ ತಿಳಿದರೂ ಅವನು ಬಾಯಿಂದ ಆಡಿ ತೋರಿಸಲಿಲ್ಲ.

ರಾಯಮಹಾಶಯನು ಅತ್ಯಂತ ಪ್ರೀತಿಯಿಂದ ಹೇಳಿದ "ತಮ್ಮಾ, ನಿರ್ಮಲ, ನೀನು ದೊಡ್ಡ ಕಾಯದೆ ಬಲ್ಲಾತ. ನಿನಗೆಲ್ಲವೂ ತಿಳಿಯತ್ತದೆ. ಆದರೆ ನಾನು ಬರಿಗೈಯಿಂದ ಈ ಪ್ರಪಂಚಕ್ಕೆ ಬಂದು ಹೋರಾಡಿ ಆಸ್ತಿ ಪಾಸ್ತಿಗಳನ್ನು ಮಾತ್ರವೇ ಗಳಿಸಲಿಲ್ಲ; ತಲೆಯಲ್ಲಿ ಅಲ್ಪ ಸ್ವಲ್ಪ ಬುದ್ಧಿಯನ್ನು ಸಂಗ್ರಹಿಸಲೂ ಅನುವು ದೊರೆತಿದೆ. ಈ ಆಸ್ತಿಯ ಮೇಲೆ ಜಮೀದಾರರ ಕಣ್ಣಿವೆಯೆಂದು ನಿನಗೆ ಯಾರಾದರೂ ಹೇಳಿದ್ದಾರಾದೀತು. ಷೋಡಶಿ ಒಳ್ಳೇ ನಿಷ್ಠುರ ಹೆಂಗುಸು, ಅವಳಿರುವ ತನಕ ಅವರ ಆಟ ನಡೆಯಲಾರದು, ಆದ್ದರಿಂದ ಅವರೇ ಅವಳ ಮುಖಕ್ಕೆ ಕಲಂಕ ಬಳಿದು ಅವಳನ್ನು ತೆಗೆದುಹಾಕುವುದಕ್ಕೆ ಸಂಚು ಹೂಡಿದ್ದಾರೆ ಎಂದೂ ಹೇಳಿದ್ದಾರಾದೀತು. ಅದು ಸರಿ. ನೀನೇ ಹೇಳು, ಬೀಜಗಾವದ ಈ ಜಮೀದಾರರ ಹತ್ತಿರ ಏನು ಬಂಡವಾಳ ಉಳಿದಿದೆ? ಈಗವರಿಗೆ ಹಣ ಬೇಕಾಗಿದೆ. ಒಂದು ಸಿಕ್ಕದಿದ್ದರೆ ಇನ್ನೊಂದನ್ನು ಮಾರುವರು; ಅದೇನೂ ನಿಲ್ಲುವುದಿಲ್ಲ. ಆದರೆ ಅವರಿಗೆ ಇರುವ ಆತಂಕ ಬೇರೆಯೇ ಇದೆ. ಈ ಕಾಡು ಹಳ್ಳಿಯಲ್ಲಿ ತಿಂಗಳು ಗಟ್ಟಲೆ ಇರುವುದು ಅವರಿಗೆ ಅಸಾಧ್ಯ. ಪಟ್ಟಣದ ಮನುಷ್ಯನ ದೃಷ್ಟಿ ಪಟ್ಟಣದ ಕಡೆಗೇ. ಇಲ್ಲಿ ನೋಡು ನಿರ್ಮಲ, ನೀನು ನನಗೆ ಹೈಮ ಹೇಗೋ ಹಾಗೆ—ನಿನ್ನೆದುರಿಗೆ ಹೇಳುವುದಕ್ಕೆ ಸಂಕೋಚವೆನಿಸುತ್ತದೆ— ಈ ಹುಡುಗಿಗೆ ಕಲ್ಯಾಣ ಮಾಡಬೇಕೆಂದು ನಿನಗೆನಿಸುತ್ತಿದ್ದರೆ ಹಾಗೆ ನನಗೆ ಹೇಳು; ಹಿಂಜರಿಯ ಬೇಡ. ಚಂಡೀಗಡದ ಭೈರವಿತನದಲ್ಲಿ ಹೆಚ್ಚಿನ ಲಾಭವೇನೂ ಇಲ್ಲ; ಅದನ್ನು ಬಿಡುವುದರಿಂದ ಅವಳಿಗಾಗುವ ಹಾನಿಯ ನಾಲ್ಕು ಪಟ್ಟು ಹಣವನ್ನು ಕೊಡಲಿಕ್ಕೆ ಜಮೀದಾರರು ಸಿದ್ಧರಾಗಬಹುದು. ಎರಡು ಕಲ್ಲುಗಳ ಮೇಲೆ ಕಾಲಿಟ್ಟು ನಿಲ್ಲುವ ಹಲ್ಲದ ಲೋಭವನ್ನು ಅವಳು ಬಿಡುತ್ತಿದ್ದರೆ, ಅವರು ಅವಳಿಗೆ ಸ್ವಲ್ಪವೂ ತೊಂದರೆ ಕೊಡುವುದಿಲ್ಲ. ಹಾಗೆ ಅವರಿಚ್ಛೆಯೇ ಇಲ್ಲ."

ಯಾವ ಉತ್ತರವನ್ನೂ ಕೊಡದೆ ನಿರ್ಮಲನು ಸ್ತಬ್ಧನಾಗಿ ಕುಳಿತ. ತನ್ನ ಮಾವನನ್ನು ಚೆನ್ನಾಗಿಯೇ ಬಲ್ಲ. ಆದರೆ ಅವರು ಇಷ್ಟು ದೂರ

ಹೋದಾರೆಂದು ಅವನು ಭಾವಿಸಿರಲಿಲ್ಲ. ಷೋಡಶಿಯ ಕಲ್ಯಾಣದ ಬಗ್ಗೆ ಮಾವನು ತೋರಿಸಿದ ಹಾದಿಯ ಬಗ್ಗೆ ಚರ್ಚಿಸುತ್ತ ಕೂಡುವ ಪ್ರವೃತ್ತಿಯೂ ಅವನಿಗಾಗಲಿಲ್ಲ.

ಹಾಲನ್ನು ಬಿಸಿಮಾಡಿ ತರುವುದಕ್ಕೆ ಅತ್ತೆಗೆ ಸ್ವಲ್ಪ ವಿಲಂಬವಾಯಿತು. ಅವಳು ಬಂದು ಗಂಡನ ತಟ್ಟೆಯ ಹತ್ತಿರ ಹಾಲಿನ ಬಟ್ಟಲನ್ನಿಟ್ಟಳು. ಕಡಿಮೆ ಊಟ ಮಾಡುತ್ತಿದ್ದುದಕ್ಕೆ ಅಳಿಯನನ್ನು ಸ್ವಲ್ಪ ಎಚ್ಚರಿಸಿ, ಆ ಕೊರತೆಯನ್ನು ಸರಿಪಡಿಸುವುದಕ್ಕಾಗಿ ಅವಳು ಹತ್ತಿರವೇ ಕುಳಿತು ಬಡಿಸತೊಡಗಿದಳು. ಬಾಯಿಗೆ ಹಚ್ಚಿದ್ದ ಹಾಲಿನ ಬಟ್ಟಲನ್ನು ಕೆಳಗಿಡುತ್ತ ರಾಯ ಮಹಾಶಯನೆಂದ: "ಒಟ್ಟಾರೆ ಹುಡುಗಿ ಒಳ್ಳೇ ಬುದ್ಧಿವಂತೆ, ಸಂದೇಹವಿಲ್ಲ. ಮಗಳು ವಿದ್ಯೆಯಲ್ಲಿ ಸರಸ್ವತಿಯೋ ಏನೋ! ಅವಳಿಗೆ ಗೊತ್ತಿಲ್ಲದ ಶಾಸ್ತ್ರವೇ ಇಲ್ಲ."

ಅತ್ತೆ ತಟ್ಟನೆ ಅನುಮೋದಿಸಿದಳು: "ಇದನ್ನೇನು ಹೇಳಬೇಕೆ? ನೋಡಲಿಲ್ಲವೇ, ಅವಳು ಕೆಲಸಕ್ಕಾಗಿ ಎದ್ದು ನಿಂತಳೆಂದರೆ ನಿಮ್ಮ ಶಿರೋಮಣಿ ಠಾಕೂರರು ಅಂಜಿ ಸಾಯುತ್ತಾರೆ. ಅವಳು ಹೊರಟು ಹೋದ ಬಳಿಕ ಈ ಮುದುಕರ ಬಾಯಿಗೆ ಸ್ಫೂರ್ತಿ ಬರುತ್ತದೆ. ಅವಳೆದುರಿಗೆ ಅವಳ ನಿಂದೆಮಾಡುವ ಧೈರ್ಯವೇ ಅವರಿಗಾಗುವುದಿಲ್ಲ."

"ಛೆ ಛೆ, ನಿಂದೆ ಏಕೆ ಮಾಡುವರು? ಅವಳನ್ನು ಅವರು ಪ್ರಶಂಸಿಸುವರು!" ಎಂದ ರಾಯಮಹಾಶಯ.

ಅತ್ತೆ ಮೂಗಿನಲ್ಲಿಯ ದೊಡ್ಡ ನತ್ತನ್ನು ಕುಣಿಸುತ್ತ ಪತಿ-ದೇವರ ಅಭಿಪ್ರಾಯವನ್ನು ವಿರೋಧಿಸಿದಳು. "ಹೌದು ಹೌದು! ಮುದುಕರು ಏನು ಬೇಕಾದ್ದು ಎನ್ನುತ್ತಾರೆ! ಹೊಟ್ಟೆಕಿಚ್ಚಿನಿಂದ ಉರಿದುರಿದು ಸಾಯುತ್ತಾರೆ, ಪ್ರಶಂಸಿಸುತ್ತಾರಂತೆ ಅವರೇನೋ! ಅಂತುವಿನ ತಂಗಿಯ ಪ್ರಾಯಶ್ಚಿತ್ತದ ಗೊಂದಲದಲ್ಲಿ ಅವರೇನೇನು ಉಪದ್ವ್ಯಾಪ ಮಾಡುತ್ತಲಿದ್ದರೆಂಬುದು ನೆನಪಿದೆಯೋ ನಿಮಗೆ? ಇವಳದು ಹಾಗಿಲ್ಲ. ಸುಡುಗಾಡು ಮೋತಿಯವಳು ಮತ್ತೇನೇ ಮಾಡಲಿ, ಬಡಬಗ್ಗರ ದೀನ ದುಃಖಗಳ ಹೊತ್ತುವೇಳೆಗಳಲ್ಲಿ ಸಹಾಯಕ್ಕೆ ಧಾವಿಸುತ್ತಾಳೆ. ತಾಯಿಯಂತೆ ಒದಗುತ್ತಾಳೆ. ಊರೊಳಗೆ

ಇಂಥ ಜನ ಮತ್ತೆ ಯಾರಿದ್ದಾರೆ? ಯಾವ ಕೆಲಸಕ್ಕೇ ಕರೆಯಲಿ, ನಗು ಮೊರೆಯಿಂದ ಬರುತ್ತಾಳೆ; ಎಂದೂ ಒಲ್ಲೆನ್ನುವುದಿಲ್ಲ."

ಈ ಮಾತು ಪತಿದೇವರಿಗೆ ರುಚಿಸಲಿಲ್ಲ. "ಉಃ ಎಲ್ಲಾ ಭೈರವಿಯರೂ ಇದನ್ನೇ ಮಾಡುತ್ತ ಬಂದಿದ್ದಾರಲ್ಲ" ಎಂದ.

"ಎಲ್ಲರೂನೇ? ಇದನ್ನು ಯಾರಿಗೆ ಹೇಳುತ್ತಿದ್ದೀರಿ? ಮಾತಂಗಿ ಭೈರವಿಯನ್ನು ನನ್ನ ಇದೇ ಕಣ್ಣು ಕಂಡಿಲ್ಲವೆ?"

"ಕಂಡಿರಬಹುದು, ಆದರೆ ಮರೆತಿದ್ದೀ."

"ಏನು ಮರೆತಿಲ್ಲ!" ಗೃಹಿಣಿ ಸಿಡುಕಿನಿಂದ ಉತ್ತರವಿತ್ತಳು. "ಇನ್ನೂ ಆಕೆಯ ಕಡೆಯಿಂದ ನೂರು ರೂಪಾಯಿ ಬರಬೇಕು, ಅದನ್ನು ಆಕೆ ಎಂದೂ ಒಪ್ಪಿಕೊಳ್ಳುವುದಿಲ್ಲ. ಪಾಪ, ಷೋಡಶಿ ಎಂದೂ ಯಾರದನ್ನೂ ಮುಳುಗಿಸಿಲ್ಲ, ಎಂದೂ ಸುಳ್ಳು ಹೇಳುವುದಿಲ್ಲ."

ರಾಯಮಹಾಶಯನಿಗೂ ರೇಗಿತು. "ಅಲ್ಲವೆ! ಧರ್ಮರಾಯನ ಅವತಾರವೇ ತಾನೆ?" ಎಂದು ನುಡಿದು ಅವನು ಎದ್ದು ನಿಂತ.

ಅತ್ತೆ ಅಳಿಯನಿಗೆ ನುಡಿದಳು: "ಕೇಳಿದೆಯಾ? ನಾನೆನ್ನುತ್ತೇನೆ—ಅವಳ ಆಶೀರ್ವಾದದಿಂದಲೇ ನಾನು ಮೊಮ್ಮಗನ ಮುಖ ಕಂಡೆ. ಅಲ್ಲ ತಮ್ಮಾ, ಯಾರು ಏನೇ ಎನ್ನರೊಲ್ಲರೇಕೆ, ಆ ಹುಡುಗಿ ಕೆಟ್ಟವಳಲ್ಲ. ಅದಕ್ಕೇ ನನಗೆ ಆಶ್ಚರ್ಯವೆನಿಸುತ್ತಿದೆ: ಅವಳು ದೇವಿಯ ಪೂಜೆಯನ್ನು ಬಿಟ್ಟುಬಿಟ್ಟಳೆಂಬುದನ್ನು ಕೇಳಿದಾಗ, ಇದು ಹೇಗಾಯಿತೆಂಬುದೇ ನನಗೆ ಒಡೆಯದ ಒಡಪವಾಯಿತು. ಇದನ್ನು ಪ್ರತ್ಯಕ್ಷವಾಗಿ ನೋಡದಿದ್ದರೆ ಯಾರ ಮಾತನ್ನೂ ನಂಬುತ್ತಿದ್ದಿಲ್ಲ."

ಒಂದು ಕಾಲನ್ನು ಮಣೆಯ ಕೆಳಗೆ ಇಟ್ಟದ್ದಂತೆಯೆ ರಾಯಮಹಾಶಯನು ನಿಂತುಕೊಂಡ. ಕಿವಿ ನಿಮಿರಿಸಿ ಅವನೆಂದ: "ಅವಳ ಆಶೀರ್ವಾದದಿಂದ ಹುಟ್ಟಿದನಂತೆ ಈಕೆಯ ಮೊಮ್ಮಗ! ಹಾಗಾದರೆ ಮೊಮ್ಮಗನಿಗಾಗಿ ನವಸ ಪೂಜೆಮಾಡುವುದಕ್ಕೆ ಅವಳೇಕೆ ಒಪ್ಪಲಿಲ್ಲ? ಅವಳನ್ನೊಮ್ಮೆ ಕೇಳಿ ನೋಡಲ್ಲ—" ಎಂದವನೇ ಉತ್ತರಕ್ಕಾಗಿ ಕಾಯದೆ ಹೊರಟು ಹೋದ.

ನಿರ್ಮಲನ ಊಟವೂ ಮುಗಿದಿತ್ತು. ಎದ್ದು ನಿಂತು ಅವನೆಂದ: "ಷೋಡಶಿಯ ಮೇಲಿನ ನಿಮ್ಮ ಶ್ರದ್ಧೆ ಇನ್ನೂ ಹಾರಿಲ್ಲವಲ್ಲವೆ?"

"ಇಲ್ಲಪ್ಪ. ಸುಳ್ಳೇಕೆ ಹೇಳಲಿ? ಅವಳ ಮೋರೆ ನೋಡಿದಾಕ್ಷಣ ನನಗೆ ಹೇಗೆ ಹೇಗೋ ಆಗುತ್ತದೆ. ಈ ಜನ ಅವಳ ಸುತ್ತ ಕೈ ತೊಳೆದು ಕೊಂಡು ಏಕೆ ಬೆನ್ನು ಹತ್ತಿರುವರೋ ತಿಳಿಯಲೊಲ್ಲದು.

ನಿರ್ಮಲನು ಹೋಗುಹೋಗುತ್ತ ಅತ್ತೆಯನ್ನು ಮೆತ್ತಗೆ ಮಾಡು ವುದಕ್ಕಾಗಿ ನಸುನಕ್ಕು ನುಡಿದ: "ಮಂತ್ರ ತಂತ್ರ ಬರುತ್ತದಲ್ಲವೇ ಅವಳಿಗೆ? ಅದನ್ನು ಮರೆತು ಸಾಗಬಾರದು."

ಅತ್ತೆ ಅದಕ್ಕೇನೋ ಉತ್ತರ ಕೊಡಲಿದ್ದಳು. ದಾಸಿ ಬಂದು ಬಾಗಿಲ ಮರೆಗೆ ನಿಂತು ಹೇಳಿದಳು: "ಅಳಿಯದೇವರನ್ನು ಯಾರೋ ಕರೆಯಲಿಕ್ಕೆ ಬಂದಿದ್ದಾರೆ. ಅಪ್ಪ ಅವರು ಕರೆಯುತ್ತಿದ್ದಾರೆ."

ಕೈಬಾಯಿ ತೊಳೆದುಕೊಂಡು ನಿರ್ಮಲನು ಹೊರಗೆ ಬಂದನು. ಊರಿನ ಬಹುಜನರು ಅಲ್ಲಿ ಸೇರಿದ್ದರು. ಸಂಜೆಗೆ ಗುಡಿಯಲ್ಲಿ ಸೇರಲಿದ್ದ ಸಭೆಯ ಪೂರ್ವಚರ್ಚೆಗೆ ಆರಂಭವಾಗಿತ್ತು.

ಅಂದು ಅಮಾವಾಸ್ಯೆ; ಶಿರೋಮಣಿಗೆ ಉಪವಾಸ. ಅವನು ನಿರ್ಮ ಲನನ್ನು ಕರೆದು ಹರಸುತ್ತ, "ಈಗ ನನಗೆ ವಯಸ್ಸಾಯಿತು. ತಟ್ಟನೆ ನಿಮ್ಮ ಗುರುತು ಹತ್ತಲಿಲ್ಲ" ಎಂದ.

ಕಂಬದ ಹತ್ತಿರ ನಿಂತಿದ್ದ ಮನುಷ್ಯನು ನಿರ್ಮಲನಿಗೆ ನಮಸ್ಕಾರ ಮಾಡಿ ಹೇಳಿದ: "ಭೈರವಿ ನಿಮ್ಮ ಹಾದಿ ನೋಡುತ್ತಿದ್ದಾರೆ. ಒಳ್ಳೇ ಅಗ ತ್ಯದ ಕೆಲಸವಿದೆಯಂತೆ."

ನಿರ್ಮಲನು ಅತ್ಯಂತ ಲಜ್ಜಿತನಾದ. ಅವನು ಹಿಂದುಗಡೆ ತಿರುಗಿ ನೋಡಲಿಲ್ಲ. ತಾನೇನು ಉತ್ತರ ಕೊಡುವನೆಂಬುದನ್ನು ಕೇಳುವುದಕ್ಕಾಗಿ ಕೂಡಿದವರೆಲ್ಲರೂ ಕಿವಿ ನೆಟ್ಟಗೆ ಮಾಡಿಕೊಂಡು ಕುಳಿತಿರುವರಂತೆ ಅವನಿಗೆ ಎನಿಸಿತು. ಅತಿಶಯ ವಿಲಕ್ಷಣ ಪ್ರಸಂಗ. ಪ್ರತಿಯೊಬ್ಬನೂ ಏನೇನೋ ಕಲ್ಪನೆ ಮಾಡಿಕೊಂಡು ಕುಳಿತಿದ್ದ. ಅದರ ಪರಿಣಾಮವಾಗಿತ್ತು ಅವನ ಮನಸಿನ ಮೇಲೆ. ಬೇರೆ ಸಂದರ್ಭದಲ್ಲಾಗಿದ್ದರೆ ಈ ಪರಿಸ್ಥಿತಿಯನ್ನು ಅವನು ಲೆಕ್ಕಿಸುತ್ತಿರಲಿಲ್ಲ. ಅದೇಕೋ, ಈಗ ಅವನಿಗೆ ಏನುಮಾಡಿದರೂ ಆ ಬಲ

ಬಾರದಾಯಿತು. ಸಹಜ ಸರಲವಾಗಿ ಬೈಚಳಿ ಬಿಟ್ಟು ಉತ್ತರ ಕೊಡಲು ಅವನಿಗೆ ಧೈರ್ಯ ಸಾಲಲಿಲ್ಲ. 'ನಡೆ ಬಂದೆ' ಎಂದು ಕೂಡ ಹೇಳಲಿಕ್ಕಾಗಲಿಲ್ಲ. "ಆಕೆಗೆ ಹೇಳು ಸದ್ಯ ನನಗೆ ಬರಲಿಕ್ಕೆ ಪುರಸತ್ತಿಲ್ಲ" ಎಂದು ತುಸ ಕೋಪಭಾವದಿಂದಲೇ ಆ ಮನುಷ್ಯನಿಗೆ ಅವನೆಂದ.

ಶಿರೋಮಣಿ ಮುಂದೆಬಿದ್ದು ನುಡಿದ: "ಸರಿ. ಅವಳ ಹೆಮ್ಮೆ ಸ್ವಲ್ಪ ತಗ್ಗಲಿ" ಎಂದು ಕಣ್ಣು ಬಡಿಯುತ್ತ ಆಕಡೆ ಈಕಡೆ ನೋಡಿ ಗಟ್ಟಿಯಾಗಿ ನಗಲಾರಂಭಿಸಿದ. ಕೆಲವರು ಅವನ ನಗೆಯನ್ನು ಅದೇ ರೀತಿ ಅನುಕರಿಸಿದರು, ಕೆಲವರು ಕೆನ್ನೆಯೊಳಗೇ ನಕ್ಕರು. ಯಾರ ಚಟುವಟಿಕೆಗಳನ್ನೂ ಗಮನಿಸದೆ ನಿರ್ಮಲನು ಒಳಕ್ಕೆ ಹೋಗುತ್ತಲಿದ್ದ; ಶಿರೋಮಣಿ ಅವನನ್ನು ಕರೆದು "ನಿಮಗೆ ಆ ಹುಡುಗಿ ವಕೀಲಿ ಪತ್ರ ಕೊಡುವವಳಿದ್ದಾಳೇನೋ?" ಎಂದು ಕೇಳಿದ.

"ಪ್ರಕರಣ ಕೋರ್ಟಿಗೆ ಹೋದರೆ ಹಾಗೇನಾದರೂ ಮಾಡಬೇಕಾಗುವುದೆಂದು ನನಗೆನಿಸುತ್ತದೆ" ಸಿಟ್ಟನ್ನು ಸಂಯಮಿಸಿಕೊಂಡು ನಿರ್ಮಲನು ಶಾಂತವಾಗಿ ಉತ್ತರವಿತ್ತ.

ಈ ಬಗೆಯ ಉತ್ತರವನ್ನು ಶಿರೋಮಣಿ ಅಪೇಕ್ಷಿಸಿರಲಿಲ್ಲ. ಸಿಟ್ಟಿನಿಂದ ಅವನೆಂದ: "ನಾನು ಹೇಳುತ್ತೇನೆ ನಿಮಗೆ, ಹುಳುಹುಪ್ಪಡಿಯೊಡನೆ ಜಗಳವಲ್ಲ ಇದು; ಹುಲಿ ಸಿಂಹಗಳೊಡನೆ ಹೋರಾಟ. ಪ್ರಸಂಗ ಕೋರ್ಟಿನವರೆಗೆ ಹೋಗದಿರುವುದಿಲ್ಲ; ಇದು ಖಂಡಿತ."

"ಯಾವ ಪ್ರಕರಣ ಎಲ್ಲಿಯವರೆಗೆ ಹೋಗುವುದೆಂಬುದನ್ನು ನೀವು ನನಗೆ ಹೇಳಬೇಕಾಗಿಲ್ಲ, ಶಿರೋಮಣಿ ಮಹಾಶಯ!"

"ನಿಜ ನಿಜ. ನಿಮ್ಮ ಉದ್ಯೋಗವೇ ಅದು. ನಿಮಗೆ ತಿಳಿಯದೆ ಮತ್ತೆ ಯಾರಿಗೆ ತಿಳಿದೀತು? ಆದರೆ ಇದು ಬಹಳ ವೆಚ್ಚದ ಕೆಲಸವಲ್ಲವೆ? ಅದನ್ನು ಮಾಡುವವರು ಯಾರು?" ಎಂದು ಶಿರೋಮಣಿ ಮತ್ತೆ ಕಣ್ಣು ಬಡಿದು ನಕ್ಕ. ಈ ಸಲ ಅವನ ನಗೆಯನ್ನು ಯಾರೂ ಸಹಕರಿಸಲಿಲ್ಲ.

"ವೆಚ್ಚಕ್ಕೆ ಇಲ್ಲದಿದ್ದರೆ ನಾನು ಕೊಡುತ್ತೇನೆ."

ಇದನ್ನು ಕೇಳಿದೊಡನೆ ಶಿರೋಮಣಿಯೊಬ್ಬನೇ ಅಲ್ಲ, ನೆರೆದವರೆಲ್ಲರೂ ಬೆಪ್ಪಾದರು. ರಾಯಮಹಾಶಯನಿಗೂ ಸಿಟ್ಟು ತಡೆಯು

ದಾಯಿತು. ಒಮ್ಮೆಲೆ ಆವನೆಂದ: "ಇದು ಹುಡುಗಾಟಿಕೆಯ ಮಾತಲ್ಲ. ಅಲ್ಲದೆ ಶಿರೋಮಣಿ ಮಹಾಶಯರೆಂದರೆ ಹಿರಿಯ ಮನುಷ್ಯರು, ವಂದನೀಯ ವ್ಯಕ್ತಿ; ಅವರೊಡನೆ ಹುಡುಗಾಟಿಕೆ ಮಾಡುವುದು ನಿನಗೆ ತರವಲ್ಲ."

ನಿರ್ಮಲನು ಸುಮ್ಮನಿದ್ದ. ಪ್ರಸಂಗವನ್ನು ಸಂಬಾಳಿಸುವುದಕ್ಕಾಗಿ ಶಿರೋಮಣಿ ನಗುವ ಯತ್ನಮಾಡುತ್ತ ನುಡಿದ: "ನೀವು ಹಣ ಕೊಡಬಹುದು. ನಿಮಗದು ಕಠಿನವಲ್ಲ. ಆದರೆ ಕೊಡಬೇಕೆಂದು ನಿಮಗೇಕೆ ಮನಸಾಗುವುದೋ ಹೇಳುವಿರಾ?"

"ಏಕೆ ಮನಸಾಗುತ್ತದೆನ್ನುವಿರಾ? ನಿಮ್ಮ ಅತ್ಯಾಚಾರಕ್ಕಾಗಿ, ನಿಮ್ಮ ಛಲಕ್ಕಾಗಿ. ಸ್ವಲ್ಪ ವಿಚಾರಿಸಿ ನೋಡಿರಿ – ನಾನಿರುವಲ್ಲಿ ಕೇಳಿಯಾಡಿರಿ – ಈವರೆಗೆ ಇಂಥ ಎಷ್ಟೋ ಹೊಣೆಗಳನ್ನು ನಾನು ಹೊತ್ತದ್ದು ನಿಮಗೆ ತಿಳಿದೀತು."

ನಿರ್ಮಲನನ್ನು ಕರೆಯಲು ಬಂದವನು ಇನ್ನೂ ಹೋಗಿರಲಿಲ್ಲ. "ನಿಮಗೆ ಯಾವಾಗ ಪುರಸತ್ತಾಗುತ್ತದೆಂದು ಹೇಳಲಿ?" ಎಂದು ಅವನು ಕೇಳಿದ.

"ಪುರಸತ್ತು ನೋಡಿಕೊಂಡು ಒಮ್ಮೆ ಬಂದು ಹೋಗುವೆನೆಂದು ಹೇಳು" ಎಂದು ನಿರ್ಮಲನು ಒಳಕ್ಕೆ ಹೊರಟುಹೋದ.

ಹೊರಗೆ ಹೋಗಿದ್ದ ಜನಾರ್ದನರಾಯನು ಸಂಜೆಯ ಮುಂದೆ ಮನೆಗೆ ಬಂದು, ಅಂಗಳದಿಂದಲೇ ಅಳಿಯನನ್ನು ಕೂಗಿ ಕರೆದು, "ಗುಡಿಯೊಳಗೆ ಎಲ್ಲರೂ ಕೂಡಿದ್ದಾರೆ; ನಿನ್ನನ್ನು ಕರೆಯುತ್ತಿದ್ದಾರೆ. ಬರುವುದಿದ್ದರೆ ಸುಮ್ಮನೆ ಏಕೆ ತಡ? ಎಂದ.

"ನಾನು ಬರಲಿಕ್ಕೇ ಬೇಕೆಂದು ನಿಮಗೆನಿಸುತ್ತದೇನು?" ನಿರ್ಮಲನು ಹೊರಕ್ಕೆ ಬಂದು ಕೇಳಿದ.

"ಕರೆದವರಿಗೆ ಹಾಗೆನಿಸುತ್ತದೆ" ಎಂದು ನುಡಿದು ಜನಾರ್ದನನು ಹೊರ ಹೊರಟ.

ಸಂಜೆಯಾಗುವ ಮೊದಲೇ ದೇವಿಯ ಆರತಿಯಾಯಿತು. ದೇವಿಯ ಅಲಂಕಾರ ವಸ್ತುಗಳಲ್ಲಿ ಹಲವು ಕ್ರಮ ಕ್ರಮವಾಗಿ ಕಡಿಮೆಯಾಗುತ್ತ

ಬಂದಿದ್ದರೂ ಶಂಖ, ಗಂಟೆ, ಡೊಳ್ಳು ಮೊದಲಾದ ವಾದ್ಯಗಳೂ ವಾಲಗ ಬಜಂತ್ರಿಗಳ ಸಂಖ್ಯೆಯೂ ಪ್ರಾಚೀನ ಕಾಲದಲ್ಲಿದ್ದಷ್ಟೇ ಈಗಲೂ ಇದ್ದವು. ಆ ವಾದ್ಯಘೋಷವು ಕೋಣೆಯಲ್ಲಿ ಕುಳಿತಿದ್ದ ನಿರ್ಮಲನ ಕಿವಿಗೆ ಅಪ್ಪಳಿಸಿತು. ಆರತಿಯಾದ ಅನಂತರ ಪಂಚಾಯತಿ ಸೇರುವುದು ಗೊತ್ತಾಗಿತ್ತು. ಆ ಪವಿತ್ರವಾದ ವಾದ್ಯಘೋಷವು ನಿಂತೊಡನೆ ಅವನು ಗುಡಿಯ ಕಡೆಗೆ ಹೊರಟ.

ಗುಡಿಯಲ್ಲಿ ಪ್ರವೇಶಿಸಿದಾಗಲೇ, ದೀಪದ ವ್ಯವಸ್ಥೆ ಸರಿಯಾಗಿದ್ದಂತೆ ಕಂಡುಬರಲಿಲ್ಲ. ಅಂಗಳದ ಕಟ್ಟೆಯಮೇಲೆ ಒಂದೆರಡು ಲಾಟೀನು ಇಡ ಲಾಗಿದ್ದವು. ಬಹಳ ಜನ ಸೇರಿದ್ದರು. ಏನೋ ಗಜಿಬಿಜಿ ನಡೆದಿತ್ತು. ಅದೆಷ್ಟೋ ಮಂದಿ ಆ ಜನರ ಸುತ್ತಲೂ ನೆರೆದು ಏನು ನಡೆದಿದೆ ಎಂಬು ದನ್ನು ಕೇಳಿಕೊಳ್ಳಲು ಹವಣಿಸುತ್ತಿದ್ದರು.

ಆ ಕತ್ತಲೆಯಲ್ಲಿ ನಿರ್ಮಲನನ್ನು ಯಾರೂ ಗುರುತಿಸಲಿಲ್ಲ. ಗದ್ದಲ ದಲ್ಲಿ ಇಬ್ಬರ ಹೆಗಲಮೇಲೆ ಕೈಯಿಟ್ಟು ಅವನು ನಿಗುರಿ ನೋಡಿದ. ಯಾರೋ ಒಬ್ಬರು ಕೈ ತಿರುವುತ್ತ ಗಟ್ಟಿಸಿ ಗಟ್ಟಿಸಿ ಮಾತನಾಡುತ್ತಿದ್ದರು. ಅವನಿಗೆ ಕೇಳಿಸಲಿಲ್ಲ. ಆದರೆ ಒಟ್ಟಾರೆ ಆ ಮನುಷ್ಯನ ಹಾವಭಾವಗಳನ್ನು ನೋಡಿ, ಯಾರ ನಿಂದೆಯನ್ನೋ ಉಪ್ಪುಕಾರ ಹಚ್ಚಿ ಆರ್ಭಟೆಯಿಂದ ನಡೆ ಸಿರಬೇಕೆಂದು ಅರಿತುಕೊಂಡ.

ಮಾತನಾಡುವವನು ಜೀವಾನಂದ ಚೌಧರಿ ಇರಬೇಕು, ಭಾಷಣದ ವಿಷಯವು ಷೋಡಶಿಯ ಚರಿತ್ರೆಯೇ ಇರಬೇಕು ಎಂದು ನಿರ್ಮಲನು ಅನು ಮಾನಿಸಿಕೊಂಡ.

ಗದ್ದಲದೊಳಗೆ ನುಗ್ಗಿ ನುಸುಳಿ ಮುಂದೆ ಹೋಗಬೇಕೆಂದೇನೂ ಅವ ನಿಗೆ ಇಚ್ಛೆಯಾಗಲಿಲ್ಲ. ಕಿವಿಗೆ ಬಿದ್ದ ಒಂದೆರಡು ಮಾತುಗಳಿಂದ ಅವನ ಜಿಜ್ಞಾಸೆ ಕೆರಳಿದುದರಿಂದ ತುದಿಗಾಲಿನಿಂದ ನಿಮಿರಿ ನಿಂತು ಕೇಳಲು ಪ್ರಯ ತ್ನಿಸತೊಡಗಿದ.

ಕೊಂಚ ಸಮಯ ಕೇಳಿದ ಬಳಿಕ ಜೀವಾನಂದನಿನ್ನೂ ಮುಖ್ಯ ವಿಷ ಯದಲ್ಲಿ ಪ್ರವೇಶಿಸಿಲ್ಲವೆಂದು ನಿರ್ಮಲನಿಗೆನಿಸಿತು. ಷೋಡಶಿಯ ತಾಯಿಯ ಚರಿತ್ರೆಯ ಆಖ್ಯಾನವು ನಡೆದಿತ್ತು. ಅರ್ಥಾತ್ ಅದು ಎಲ್ಲ

ರಿಗೂ ಗೊತ್ತಿದ್ದುದಿತ್ತು. ಸಾಕ್ಷಿ ತಾರಾದಾಸನು ಬಳಿಯಲ್ಲಿಯೇ ಕುಳಿತಿದ್ದ. ಈ ಅನಾಚಾರಿಗಳಾದ ಸ್ತ್ರೀಯರ ದೆಸೆಯಿಂದ ಭೈರವಿಯ ಪೀಠಸ್ಥಾನವು ಸಾವಕಾಶವಾಗಿ ಹೇಗೆ ಅಪವಿತ್ರವಾಗುತ್ತಲಿದೆ, ಅದರಿಂದ ಇಡೀ ಊರಿನ ಕೆಡುಗಾಲವು ಹೇಗೆ ಸಮಿಾಪಿಸುತ್ತಿದೆ ಎಂಬ ಪುರಾಣ ನಡೆದಿತ್ತು.

ಅದೇ ಸಮಯಕ್ಕೆ ಯಾರೋ ನಿರ್ಮಲನ ಬೆನ್ನು ತಟ್ಟಿದರು. ಅವನು ಹೊರಳಿ ನೋಡಿದ. ತುಂಬ ಮುಸುಕು ಹಾಕಿಕೊಂಡಿದ್ದವರು ಯಾರೋ ತನ್ನನ್ನು ಸನ್ನೆಯಿಂದ ಕರೆಯುತ್ತಿದ್ದರು. ಅವನು ಅವರನ್ನು ಹಿಂಬಾಲಿಸಿದ. ಸ್ವಲ್ಪ ಹೊತ್ತಿನಲ್ಲಿ ಅವರು ಷೋಡಶಿಯೆಂದು ಅವನಿಗೆ ತೋರಿತು. ಬಾಗಿಲನ್ನು ದಾಟಿ ಬಂದು ಅವಳು ನಿಂತಳು. ಹಿಂದಿರುಗಿ ನಸುನಕ್ಕು ಜಬರಿಸುವ ಸ್ವರದಲ್ಲಿ ಅವಳೆಂದಳು: "ಆ ಮಾತು ಏನು ಕೇಳುತ್ತ ನಿಂತಿದ್ದಿರಿ? ನಾಲ್ಕು ಜನ ಕೇಡಿಗಳು ಕೂಡಿ ದೀನ ದರಿದ್ರ ಹೆಂಗುಸರಿಬ್ಬರ ವಿಡಂಬನೆ ಮಾಡುತ್ತಲಿದ್ದಾರೆ. ಅವರೊಳಗೊಬ್ಬಳು ಸತ್ತಾಕೆ, ಇನ್ನೊಬ್ಬಳು ಅಲ್ಲಿಲ್ಲ. ಬರ್ರಿ ನಮ್ಮಲ್ಲಿಗೆ. ಫಕೀರ ಸಾಹೇಬರು ಬಂದಿದ್ದಾರೆ. ಅವರ ಪರಿಚಯ ನಿಮಗೆ ಮಾಡಿಕೊಡುತ್ತೇನೆ, ನಡೆಯಿರಿ.

"ಯಾವಾಗ ಬಂದರು ಅವರು?"

"ಯಾರಿಗೆ ಗೊತ್ತು? ಮೂರನೆಯ ಪ್ರಹರದಲ್ಲಿ ನಾನು ಹೊರಗಿನಿಂದ ಬರುವ ಹೊತ್ತಿಗೆ ಮನೆಯ ಮುಂದೆ ನಿಂತಿದ್ದರು. ನನ್ನ ಆನಂದ ಹೊಟ್ಟೆಯೊಳಗೆ ಹಿಡಿಸದಾಯಿತು. ನಮಸ್ಕಾರ ಮಾಡಿ ಒಳಗೆ ಕರೆದುಕೊಂಡು ಹೋದೆ. ಎಲ್ಲ ಸಂಗತಿಯನ್ನೂ ಅವರು ಮನಸುಗೊಟ್ಟು ಕೇಳಿಕೊಂಡರು."

"ಅವರೇನೆಂದರು?"

"ಬರೇ ನಕ್ಕುಬಿಟ್ಟರು! ಅವರಿಗೆಲ್ಲವೂ ಗೊತ್ತಿದ್ದಿತೆಂದು ನನಗೆನಿಸಿತು. ನಿಜವೇ ನಿರ್ಮಲ ಬಾಬೂ, ನನ್ನ ಕೋರ್ಟು ಕಚೇರಿಯ ವೆಚ್ಚವನ್ನೆಲ್ಲ ನೀವೇ ನೋಡಿಕೊಳ್ಳುವಿರೆಂಬುದು ನಿಜವೆ?"

"ಹೌದು, ನಿಜ."

"ಅದೇಕೆ?"

ಕ್ಷಣ ತಡೆದು ನಿರ್ಮಲನೆಂದ: “ನಿಮಗೆ ಅನ್ಯಾಯವಾಗಿದೆ, ಅತ್ಯಾಚಾರವಾಗಿದೆ, ಅದಕ್ಕೆ.”

“ಇಷ್ಟೇ ತಾನೆ? ಇದರ ಹೊರತು ಬೇರೆ ಕಾರಣವಿಲ್ಲ ಅಲ್ಲವೆ?” ಎಂದು ಷೋಡಶಿ ಮೆಲುನಗೆ ನಕ್ಕು ಮತ್ತೆಂದಳು: “ಹೋಗಲಿ ಬಿಡಿರಿ. ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಲೇಬೇಕೆಂದು ಶಾಸ್ತ್ರವಿಲ್ಲ . . ವಿಶೇಷತಃ ಇಂಥ ಕೌಟಲ್ಯಶಾಸ್ತ್ರದ ಆಜ್ಞೆಯಂತೂ ಇಲ್ಲವೇ ಇಲ್ಲ! ಬರ್ರಿ, ಒಳಗೆ ಬರ್ರಿ.”

ಮನೆಯೊಳಗೆ ಹೋದಾಗ ಫಕೀರ ಸಾಹೇಬನಿಲ್ಲವೆಂದು ಕಂಡು ಬಂದಿತು. “ಎಲ್ಲಿ ಹೋದರು ಆಗಲೇ? ಈಗ ಬಂದಾರು” ಎಂದಳು ಷೋಡಶಿ.

ದೀಪವು ಸಣ್ಣದಾಗಿತ್ತು. ಅದನ್ನು ಥಾಳಾಗಿ ಮಾಡಿ, ಆಸನವನ್ನು ತಂದುಹಾಕಿ ಅವಳು ನುಡಿದಳು: “ಕೂಡಿರಿ. ಈ ಬಡಿದಾಟ ಹೊಡೆದಾಟಗಳಲ್ಲಿ ಒಂದು ಗಳಿಗೆ ಕೂತು ಮಾತಾಡೇನೆಂದರೆ ಸಮಯವೇ ಸಿಕ್ಕುವುದಿಲ್ಲ. ಒಳ್ಳೇದು. ಖಟ್ಲೆಯ ಭಾರವನ್ನು ನೀವು ಹೊರುವಿರಿ. ಆದರೆ ಇದರಲ್ಲಿ ನಿಮಗೆ ಸೋಲಾದರೆ ಆ ಹೊಣೆ ಯಾರು ಹೊರುವರು? ಆಗ ನೀವು ಹಿಂದೆಗೆಯಲಾರಿರಷ್ಟೇ?”

ನಿರ್ಮಲನಿಗೆ ಉತ್ತರ ಹೊಳೆಯಲಿಲ್ಲ. ಅವನ ಮೋರೆ ಕಿವಿಗಡ್ಡೆಯವರೆಗೂ ಕೆಂಪಗೆ ಕೆಂಜಿಗವಾಯಿತು. ಕೊಂಚ ಹೊತ್ತಿನ ಮೇಲೆ ಅವನೆಂದ: “ಈ ಪ್ರಕರಣದಲ್ಲಿ ಸೋಲಾದೀತೆಂದು ನನಗೆನಿಸುವುದಿಲ್ಲ.”

“ನಿಜ!” ಎಂದು ಷೋಡಶಿ ಅಷ್ಟಕ್ಕೇ ಸುಮ್ಮನಾದಳು. ಅವಳ ಮನಸು ಎಲ್ಲಿಯೋ ಅಲೆಯುತ್ತಿತ್ತು. ಅದೊಂದು ಕ್ಷಣವಷ್ಟೇ. ಒಮ್ಮೆಲೇ ವಿಷಯವನ್ನು ಬದಲಿಸಿ ಅವಳೆಂದಳು: “ಮಗುವಿನ ಪ್ರಕೃತಿ ಹೇಗಿದೆ ನಿರ್ಮಲ ಬಾಬೂ? ಅವನನ್ನು ಬಿಟ್ಟೇಕೆ ಬಂದಿರಿ ಇಲ್ಲಿಗೆ? ನಾನಾಗಿದ್ದರೆ ಬಿಟ್ಟುಬರುತ್ತಿರಲಿಲ್ಲ!”

ಈ ವಿಸಂಗತ ಪ್ರಶ್ನೆಯನ್ನು ಕೇಳಿ ನಿರ್ಮಲನು ಆಶ್ಚರ್ಯಚಕಿತನಾದ. ಅತ್ತಿತ್ತ ಗೋಣಾಡಿಸುತ್ತ ನಸುನಗುತ್ತ ಷೋಡಶಿ ನುಡಿದಳು: “ಹೈಮಳ ಸ್ಥಳದಲ್ಲಿ ನಾನಿದ್ದಿದ್ದರೆ ಜಗತ್ತಿಗೆ ಉಪಕಾರ ಮಾಡುವ ಉಪದ್ವ್ಯಾಪದಲ್ಲಿ ನಿಮ್ಮನ್ನು ಬೀಳಗೊಡುತ್ತಿರಲಿಲ್ಲ. ನಾನು ಬಲು ನಿಷ್ಠುರಳು.

ನನ್ನನ್ನು ಮೋಸಗೊಳಿಸುವುದು ನಿಮಗೆ ಸಾಧ್ಯವಾಗುತ್ತಿರಲಿಲ್ಲ. ಹಗಲೂ ರಾತ್ರಿ ಕಣ್ಣಂಜಿಕೆಯಲ್ಲಿ ಇಟ್ಟಿರುತ್ತಿದ್ದೆ."

ಅವಳ ಭಾಷಣವು ಸೂಚಕವಾಗಿತ್ತು, ಅಷ್ಟೇ ಸ್ಪಷ್ಟವೂ ಆಗಿತ್ತು. ಕೇಳಿ ನಿರ್ಮಲನ ಹೃದಯದಲ್ಲಿ ಆಶ್ಚರ್ಯದೊಂದಿಗೆ ಭೀತಿಯೂ ಹುಟ್ಟಿತು; ಆನಂದದ ಅಲೆಗಳೂ ಏಳತೊಡಗಿದವು. ಆ ಲಹರಿಗಳ ಕಲಕಲವು ಒಮ್ಮೆಲೆ ಮುಖದಿಂದ ಹೊರಬಿದ್ದಿತು: "ಕಣ್ಣಂಜಿಕೆಯಲ್ಲಿ ಯಾರನ್ನಾದರೂ ಇಡಲಿಕ್ಕೆ ಬಂದೀತೇ ಷೋಡಶಿ? ಬಂಧನದ ಉಗಮಸ್ಥಾನದ ತನಕ ದೃಷ್ಟಿ ತಲುಪುವುದು ಶಕ್ಯವಿಲ್ಲ. ಇದು ನಿನಗೆ ಇನ್ನೂ ತಿಳಿದಿಲ್ಲವೆ?"

"ತಿಳಿದಿದೆ!" ಎಂದು ಷೋಡಶಿ ನಕ್ಕಳು.

ಹೊರಗೆ ಯಾರದೋ ಹೆಜ್ಜೆಯ ಸದ್ದಾಗಲು ಅವಳು ಸ್ವರ ಎತ್ತರಿಸಿ "ಅಕಾ, ಅವರು ಬಂದರು." ಎಂದಳು.

"ಯಾರು? ಫಕೀರ ಸಾಹೇಬರೆ?"

"ಅಲ್ಲ, ಜಮೀದಾರ ಬಾಬು. ಸಭೆ ಮುಗಿದಬಳಿಕ ಒಮ್ಮೆ ನನ್ನ ಗುಡಿಸಲಲ್ಲಿ ಪಾದಧೂಳಿ ಕೆಡವಿ ಹೋಗಿರೆಂದು ಹೇಳಿ ಕಳಿಸಿದ್ದೆ. ಅದಕ್ಕೇ ಅವರು ಬರುತ್ತಾರೆಂದು ಕಾಣುತ್ತದೆ. ಸಂಗಡ ಬಹಳ ಜನ ಇದ್ದಹಾಗಿದೆ. ಹೆಂಗುಸರ ಮನೆಗೆ ಒಬ್ಬರೇ ಬರುವುದಕ್ಕೆ ಸಜ್ಜನರಾದ ಪುರುಷರಿಗೆ ಧೈರ್ಯವಾಗುವುದಿಲ್ಲ. ಸುಮ್ಮನೆ ಕೆಟ್ಟ ಹೆಸರು ಬರುವುದು." ಎಂದು ನುಡಿದು ಅವಳು ನಗಲಾರಂಭಿಸಿದಳು.

ಒಟ್ಟಾರೆ ಈ ರೀತಿ ನಿರ್ಮಲನಿಗೆ ರುಚಿಸಲಿಲ್ಲ. ಅವನಿಗೆ ಸಿಟ್ಟು ಬಂದಿತು. ಅಷ್ಟೇ ಸಂಕೋಚವೂ ಉಂಟಾಯಿತು. "ನನಗೆ ಮೊದಲೇ ತಾವೇಕೆ ಹೇಳಲಿಲ್ಲ ಇದನ್ನು?" ಎಂದ.

"ಭಲೆ! 'ನೀವು' ಹೋಗಿ 'ತಾವು' ಬಂತೇನೋ!" ಎಂದು ನಗುನಗುತ್ತ ಅವಳೆಂದಳು: "ಏನೂ ಅಂಜಬೇಡಿರಿ. ದೊಡ್ಡ ಸಭ್ಯ ಗೃಹಸ್ಥರವರು. ಜಗಳ ಬಡಿದಾಟ ಸೇರುವುದಿಲ್ಲ ಅವರಿಗೆ. ಅಲ್ಲದೆ, ನಿಮಗೆ ಅವರ ಪರಿಚಯವಿನ್ನೂ ಆಗಿಲ್ಲ. ಅದಕ್ಕೆ ಇದೊಂದು ಸುಯೋಗವೇ ಎನ್ನಬೇಕು."

ಬಳಿಕವಳು ಹೊರಗೆ ಹೋಗಿ ಸ್ವಾಗತವೀಯುತ್ತ "ಬರಬೇಕು. ನನ್ನ ಗುಡಿಸಲು ಮತ್ತೊಮ್ಮೆ ಪುನೀತವಾಯಿತೆನ್ನಬೇಕು" ಎಂದಳು.

ಹೊಸತಿಲೊಳಗೆ ಕಾಲಿಡುತ್ತಲೇ ಜೀವಾನಂದನು ಚಕಿತನಾಗಿ ನಿಂತು ಬಿಟ್ಟ. "ಯಾರು? ಇವರು ನಿರ್ಮಲಬಾಬು ಎಂದು ಕಾಣುತ್ತದೆ?" ಕ್ಷಣಹೊತ್ತು ದಿಟ್ಟಿಸಿ ನೋಡಿ ಅವನು ಕೇಳಿದ.

"ಹೌದು. ಇವರೇ ನಿಮ್ಮ ಆ ಮಿತ್ರರೆಂದು ಹೇಳಿದರೆ ಅಷ್ಟೇನೂ ಅತಿಶಯೋಕ್ತಿಯಾಗಲಿಕ್ಕಿಲ್ಲ!" ಷೋಡಶಿ ನಗುಮೊಗದಿಂದ ಉತ್ತರ ವಿತ್ತಳು.

## ೨೨

ತನ್ನ ಅನುಮಾನ ತಪ್ಪಾಗಲಿಲ್ಲ. ಅವನು ನಿಜವಾಗಿಯೂ ನಿರ್ಮಲ ಬಾಬುವೆಂದು ಗೊತ್ತಾಗುತ್ತಲೇ ಜೀವಾನಂದನು ಮೊದಲು ಕುಗ್ಗಿದ. ಆದರೆ ತನ್ನ ಮನಃಸ್ಥಿತಿಯನ್ನು ಅನ್ಯರಿಗೆ ಸಹಸಾ ತಿಳಿಯಗೊಡದ ಅವನ ಚಾತುರ್ಯವು ವಿಲಕ್ಷಣವಾಗಿತ್ತು. ಸ್ವಲ್ಪ ನಕ್ಕು ಅವನೆಂದ: "ನಿಜವೆ! ಮಿತ್ರರಲ್ಲದೆ ಏನು? ಇವರ ಕೃಪೆಯಿಂದಲೇ ನಾನಿನ್ನೂ ಬಾಳಿದ್ದೇನೆ. ಇಲ್ಲದಿದ್ದರೆ, ಮಾವನ ಜಮೀದಾರಿ ಸಿಕ್ಕಂದಿನಿಂದ ನಾನು ಮಾಡಿದ ಉಪ ದ್ವ್ಯಾಪಗಳ ಫಲವಾಗಿ, ಚಂಡೀಗಡದ ಶಾಂತಿಕುಂಜದಲ್ಲಿ ವಾಸಿಸುವ ಬದಲು ಅಂದಮಾನದ ಮಂದಿರದಲ್ಲಿ ಕೂಡಬೇಕಾಗುತ್ತಿತ್ತು!"

ಅವನ ಈ ಆರಂಭದ ಭಾಷಣವು ನಿರ್ಮಲನ ಮನಸಿಗೆ ಬರಲಿಲ್ಲ. ಎಂಥ ನಾಚಿಕೆಗೇಡಿ! ತನ್ನ ದುಷ್ಕೃತ್ಯಗಳನ್ನು ಉಲ್ಲೇಖಿಸಿ ಬಿಚ್ಚುಮಾತಿನಲ್ಲಿ ಚೇಷ್ಟೆ ಮಾಡುತ್ತಿದ್ದಾನೆ! ನಿರ್ಮಲನ ಮೈಯೆಲ್ಲ ಉರಿಯಿತು. ಅವನು ಸಿಟ್ಟುಸಿಟ್ಟಿನಿಂದ ಏನಾದರೂ ಆಡಿಬಿಡುವವನೇ. ಆದರೆ ಅದಕ್ಕೆ ಅವಕಾಶ ಸಿಕ್ಕಲಿಲ್ಲ.

ಷೋಡಶಿಯೇ ಉತ್ತರವಿತ್ತಳು. "ಚೌಧರಿ ಮಹಾಶಯರೇ, ವಕೀಲ ಬ್ಯಾರಿಸ್ಟರರೆಂದರೆ ದೊಡ್ಡ ಮನುಷ್ಯರು— ಆದರೆ ಕೌತುಕವಾಗುವುದು ಅವರ ಬಗೆಗೇನೂ ಅಲ್ಲ. ಅಂದಮಾನದಂಥ ದೊಡ್ಡ ಹೆಸರೇತಕ್ಕೆ? ನಮ್ಮ ದೇಶದ

ಸೆರೆಮನೆಗಳು ಕೂಡ ಅಷ್ಟೇನೂ ಸ್ಸುಖಕರವಾಗಿಲ್ಲ. ನಾನು ದುಃಖಿತಳು, ಮೇಲಾಗಿ ಭೈರವಿ, ಆದುದರಿಂದ ನನ್ನ ಬಗ್ಗೆಯೇ ಕೃತಜ್ಞತೆ ಏಕೆ ತೋರಿಸ ಬಾರದು ನೀವು ?"

ಜೀವಾನಂದನು ಕಕ್ಕಾವಿಕ್ಕಿಯಾದ. ಬಾಯಿಗೆ ಬಂದುದನ್ನೇ ಆಡಿ ಬಿಟ್ಟ: "ಕೃತಜ್ಞತೆ ತೋರಿಸುವ ಸಮಯ ಬಂದರೆ ತೋರಿಸುತ್ತೇನೆ."

"ಇದೇ ಈಗ ಗುಡಿಯಲ್ಲಿ ನಿಂತುಕೊಂಡು ಆದರ ಒಂದು ಕಂತನ್ನು ಮುಟ್ಟಿಸಿದಿರಲ್ಲ, ಹಾಗೆಯೇ ತಾನೆ ?" ಷೋಡಶಿ ನಕ್ಕು ನುಡಿದಳು.

ಇದಕ್ಕೆ ಜೀವಾನಂದನು ಉತ್ತರ ಕೊಡಲಿಲ್ಲ. ನಿರ್ಮಲನ ಕಡೆ ಹೊರಳಿ ಅವನೆಂದ: "ನಿಮ್ಮ ಮಾವಂದಿರಿಂದ ಇದೀಗ ಕೇಳಿದೆ, ನೀವು ಬಂದಿದ್ದೀರೆಂದು. ಗುಡಿಯೊಳಗೇ ಭೆಟ್ಟಿಯಾದೀತೆಂದು ತಿಳಿದಿದ್ದೆ."

"ಆ ತಪ್ಪು ನನ್ನದು ಚೌಧರಿಯವರೇ. ಅವರು ಅಲ್ಲಿ ಹೋಗಿದ್ದರು, ಸಭೆಯೊಳಗೆ ನುಗ್ಗುವವರೂ ಇದ್ದರು. ತುದಿಗಾಲಿನಿಂದ ನಿಂತುಕೊಂಡು, ಗೋಶಕ್ತ್ರರಿ? ಸಂ-ಗಳ ಬಗ್ಗಿ ನೋಡಲು ಯತ್ನಿಸುತ್ತಿದ್ದರು. ಅವನ್ನು ಕಂಡು ನಾನಿವರನ್ನು ಕೈಹಿಡಿದೆಳೆದು ಇಲ್ಲಿಗೆ ಕರೆದುಕೊಂಡು ಬಂದೆ. ನಡೆಯಿರಿ ನಿರ್ಮಲಬಾಬೂ, ಮನೆಯೊಳಗೆ ಕೂತುಕೊಂಡು ನಾಲ್ಕು ಮಾತು ಕತೆಯಾಡುವ ಎಂದು" ಎಂದಳು ಷೋಡಶಿ.

ಸಿಟ್ಟನ್ನು ಹತ್ತಿಟ್ಟು ತೀರ ತಂಪು ದನಿಯಲ್ಲಿ ಜೀವಾನಂದನೆಂದ: "ಹಾಗಾದರೆ ನಾನು ಬಂದದ್ದರಿಂದ ಆತಂಕವಾಯಿತೇನೋ!"

"ಆತಂಕವಾದರೂ ಆ ತಪ್ಪು ನಿಮ್ಮದೇನಲ್ಲ. ನಾನೇ ನಿಮ್ಮನ್ನು ಕರೆಕಳಿಸಿದ್ದೆ."

"ಅದೇಕೆ ? ಹರಟೆ ಹೊಡೆಯುವುದಕ್ಕೇನು ?"

ಷೋಡಶಿ ನಕ್ಕು ಹೇಳಿದಳು: "ಅಲ್ಲ ಸ್ವಾಮಿ, ಅಲ್ಲ. ಅದಕ್ಕೆ ತೀರ ವಿಪರೀತ. ನಾನು ಈ ದಿವಸ ನಿಮ್ಮ ಮೇಲೆ ಚೆನ್ನಾಗಿ ಬಾಯಿತಿಂಡಿ ತೀರಿಸಿಕೊಳ್ಳಬೇಕೆಂದಿದ್ದೇನೆ."

ಅವಳ ಮಾತಿನ ಹೊಸಪರಿಗೆ ನಿರ್ಮಲ ಜೀವಾನಂದರಿಬ್ಬರೂ ಆಶ್ಚರ್ಯಚಕಿತರಾಗಿ ನೋಡತೊಡಗಿದರು. ಷೋಡಶಿ ಒಮ್ಮೆಲೆ ಗಂಭೀರವಾಗಿ ಮಾತನಾಡಿದಳು: "ಛೆ ಛೆ, ಏನದು ? ಅಲ್ಲೇನು ಮಾಡುತ್ತಿದ್ದರಿ ?

ನನಗೆ ಹೇಳಿರಲ್ಲ. ಸಭೆಯ ಸಡಗರವನ್ನು ಹೂಡಿ ಇಬ್ಬರು ನಿರಾಧಾರ ಹೆಂಗುಸರ ಬಗ್ಗೆ ಏನೇನು ವಿಡಂಬನೆ ನಡೆಸಿದ್ದೀರಿ? ಇಷ್ಟೇ ಅಲ್ಲ, ಅವರಲ್ಲಿ ಒಬ್ಬಳು ಈಗ ಜೀವಿಸಿಲ್ಲ. ಗಂಡುಸರಂಥ ಗಂಡುಸರು ಕೂತು ನೀವು ಹೀಗೆ ಮಾಡುವುದು ಚೆಂದವೆ? ಇದರ ಆಗತ್ಯವಾದರೂ ಏನಿತ್ತು? ಆ ದಿನ ಇದೇ ಸ್ಥಳದಲ್ಲಿ ಕೂತುಕೊಂಡು ನಿಮಗೆ ಹೇಳಿದ್ದೆ – ನೀವು ಏನು ಅಪ್ಪಣೆ ಕೊಟ್ಟರೂ ಪಿಟ್ಟೆನ್ನದೆ ಪಾಲಿಸುತ್ತೇನೆಂದು. ನೀವು ನಿಮ್ಮ ಆಜ್ಞೆಯನ್ನೂ ಒಳ್ಳೇ ಸರಳವಾಗಿ ಹೇಳಿದ್ದಿರಿ; ನಾನೂ ಅದನ್ನು ವಿರೋಧಿಸಿರಲಿಲ್ಲ. ಇಕಾ, ಇದು ತಕೊಳ್ಳಿರಿ ಗುಡಿಯ ಕೀಲಿ ಕೈ, ಇದು ತಕೊಳ್ಳಿರಿ ಲೆಕ್ಕದ ಪುಸ್ತಕಗಳು—" ಎಂದು ಅವಳು ಸೆರಗಿನಲ್ಲಿ ಕಟ್ಟಿದ್ದ ಕೀಲಿಕೈಗಳ ಗುಚ್ಚನ್ನೂ ಮಣೆಯ ಮೇಲೆ ಕಟ್ಟಿಟ್ಟಿದ್ದ ಪುಸ್ತಕಗಳ ಗಂಟನ್ನೂ ಜೀವಾನಂದನ ಕಾಲ ಬಳಿ ಇಟ್ಟಳು. "ದೇವಿಯ ವಸ್ತು ಒಡವೆಗಳು, ಮಹತ್ವದ ಕಾಗದ ಪತ್ರಗಳು ಎಲ್ಲ ಆ ಪೆಟ್ಟಿಗೆಯಲ್ಲಿವೆ. ಇನ್ನೂ ಒಂದು ದಸ್ತೈವಜು ಉಂಟು. ಅದರಲ್ಲಿ ನನ್ನ ಅಂಕಿತಮುದ್ರೆ ಸಹಿತವಾದ ಭೈರವೀಪದದ ರಾಜೀನಾಮೆಯೂ ಸಿಕ್ಕುವುದು" ಎಂದಳು.

ಅವಳ ಮಾತಿನಲ್ಲಿ ಜೀವಾನಂದನಿಗೆ ಅಷ್ಟೊಂದು ನಂಬುಗೆ ಹುಟ್ಟಲಿಲ್ಲ. "ಏನೆನ್ನುತ್ತೀ? ರಾಜೀನಾಮೆ ಕೊಟ್ಟೆಯಾ? ಅದು ಯಾರ ಹೆಸರಿನಲ್ಲಿ?" ಎಂದು ಕೇಳಿದ.

"ಅದರೊಳಗೆ ಬರೆದೇ ಇದೆ. ಓದಿದರೆ ತಿಳಿಯುವುದು."

"ಹಾಗಿದ್ದರೆ ಈ ಕೀಲಿಕೈ, ಈ ಲೆಕ್ಕದ ಪುಸ್ತಕಗಳ ಗಂಟನ್ನೂ ರಾಜೀನಾಮೆಯನ್ನೂ ಯಾರ ಹೆಸರಿನಲ್ಲಿ ಕೊಟ್ಟೆಯೋ ಅವರಿಗೇ ಯಾಕೆ ಒಪ್ಪಿಸಲಿಲ್ಲ?"

"ಅವರಿಗೇ ಒಪ್ಪಿಸುತ್ತಿದ್ದೇನೆ" ಎಂದು ಷೋಡಶಿ ಗಲ್ಲದೊಳಗೇ ನಕ್ಕಳು. ಅವನ್ನು ಕಂಡು ಜೀವಾನಂದನ ಮೋರೆ ಜರ್ರನೆ ಇಳಿಯಿತು. ಅವನು ಕ್ಷಣಹೊತ್ತು ಸುಮ್ಮನೆ ಇದ್ದು ಕೊನೆಗೆ ಸಂದಿಗ್ಧತೆಯಿಂದ ಮಾತನಾಡಿದ: "ಆದರೆ ಇವನ್ನೆಲ್ಲ ತೆಗೆದುಕೊಳ್ಳಲು ಬರುವುದಿಲ್ಲ. ಈ ಪುಸ್ತಕದಲ್ಲಿ ಬರೆದಿರುವಂತೆ ಪೆಟ್ಟಿಗೆಯೊಳಗೆ ವಸ್ತುಗಳು ಇವೆಯೋ ಇಲ್ಲವೋ ನನಗೆ

ಹೇಗೆ ಗೊತ್ತಾಗಬೇಕು ? ಅಗತ್ಯವಿದ್ದರೆ ಹೀಗೆ ಮಾಡು – ಪಂಚರ ಸಮಕ್ಷ ದಲ್ಲಿ ರುಜುವಾತು ಮಾಡಿಕೊಡು.''

" ನನಗೇನೂ ಹಾಗೆನಿಸುವುದಿಲ್ಲ. ಚೌಧರಿ ಮಹಾಶಯರೇ, ನೀವು ಬಲು ದೃಢವಿಲ್ಲದ ಮನುಷ್ಯರು. ಆ ದಿವಸ ನಾನು ಕೊಟ್ಟ ವಿಷವನ್ನು ಸಂದೇಹವಿಲ್ಲದೆ ಕಣ್ಣು ಮುಚ್ಚಿಕೊಂಡು ಕುಡಿದಿರಿ. ಆದರೀಗ ಈ ಪುಸ್ತಕ ಗಳನ್ನು ಕಣ್ಣುಮುಚ್ಚಿ ತೆಗೆದುಕೊಳ್ಳಲು ಏಕೆ ಸಂಕೋಚವಾಗುತ್ತಿದೆ? ಎರಡನೆಯವರಲ್ಲಿ ವಿಶ್ವಾಸವಿಡುವ ವಿಷಯದಲ್ಲಿ ನೀವಿಷ್ಟು ಕಸಕು ಮನಸಿ ನವರಿದ್ದೀರೆಂದು ನಾನೆಂದೂ ಎನ್ನಲಾರೆ. ತಕ್ಕೊಳ್ಳಿರಿ, ಇವನ್ನು ತಕ್ಕೊ ಳ್ಳಿರಿ'' ಎಂದು ನುಡಿದು ಷೋಡಶಿ ನೆಲದ ಮೇಲಿನ ಪುಸ್ತಕಗಳನ್ನೂ ಕೀಲಿಕೈ ಗೊಂಚಲನ್ನೂ ಎತ್ತಿ, ಒಂದು ಬಗೆಯ ಒತ್ತಾಯದಿಂದಲೇ ಜೀವಾ ನಂದನ ಕೈಯೊಳಗೆ ಕೊಟ್ಟಳು. ಬಳಿಕೆಂದಳು : " ಮುಕ್ತಳಾದೆ ಒಮ್ಮೆ. ಈವರೆಗೆ ನನ್ನ ಯಾವ ಭಾರವನ್ನೂ ನೀವು ವಹಿಸಿರಲಿಲ್ಲ. ಈಗ ಇದೊಂ ದನ್ನು ವಹಿಸಿಕೊಂಡರೆ ನಿಮ್ಮ ಧರ್ಮವೇನೂ ಹಾಳಾಗುವುದಿಲ್ಲ. ಒಲ್ಲೆ ಎಂದರೆ, ಅಲ್ಲಿ ಪರಲೋಕದಲ್ಲಿ ಏನು ಹೇಳುವಿರಿ ? –'' ಎಂದು ಮತ್ತೆ ನಗು ನಗುತ್ತ "ಪರಲೋಕದ ಚಿಂತೆಯಿಂದ ನಿಮಗೆ ನಿದ್ದೆಯೇ ಬರುತ್ತಿರಲಿಕ್ಕಿಲ್ಲ, ಅದು ನನಗೆ ಗೊತ್ತಿದೆ! ಆಗುವುದು ಆಗಿಹೋಗಿದೆ. ಮುಂದೇನು ಮಾಡ ಬೇಕೆಂಬುದನ್ನು ವಿಚಾರ ಮಾಡಲಿಕ್ಕೆ ಕಲಿಯಿರಿ, ಇಷ್ಟೇ ನಾನು ಹೇಳು ವುದು'' ಎಂದಳು.

ಅವಳು ನಗುತ್ತಿದ್ದಳು ನಿಜ. ಆದರೆ ಅವಳ ದನಿಗೆ ಒಂದು ಬಗೆಯ ಕೋಮಲತೆ ಬಂದಿದ್ದಿತು. ಅವಳೆಂದಳು : " ನೀವು ಇನ್ನೂ ಒಂದು ಭಾರ ಹೊರಬೇಕು. ನಿಮ್ಮ ನೊಂದ ಬಡ ಪ್ರಜೆಗಳ ಭಾರವನ್ನೂ ನೀವು ಹೊರ ಬೇಕು. ನಾನು ಸಾವಿರ ಸಲ ನಿಶ್ಚಯ ಮಾಡಿದ್ದೆ, ಆದರೆ ನನ್ನಿಂದ ಅವರ ಕಲ್ಯಾಣ ಆಗದೆ ಹೋಯಿತು. ನೀವು ಮನಸ್ಸು ಮಾಡಿದರೆ ಬೇಕಾದ್ದು ಆಗುವುದು'' ಎಂದು ನಿರ್ಮಲನ ಕಡೆ ಹೊರಳಿ " ನನ್ನ ಮಾತು ಕೇಳಿ ನಿಮಗೆ ಆಶ್ಚರ್ಯವೆನಿಸುತ್ತಿರಬಹುದು, ಅಲ್ಲವೆ ನಿರ್ಮಲ ಬಾಬೂ ?'' ಎಂದಳು.

ನಿರ್ಮಲನು ಹೇಳಿದ : " ಬರೀ ಆಶ್ಚರ್ಯವೇಕೆ? ನಾನು

ದಿಜ್ಮೂಢನೇ ಆಗಿದ್ದೇನೆ. ಇಷ್ಟರೊಳಗೇ ನೀವು ಭೈರವಿಯ ಆಸನವನ್ನು ಬಿಟ್ಟು ಕೊಟ್ಟು ರಾಜೀನಾಮೆಗೆ ಅಂಕಿತ ಮಾಡಿಟ್ಟದ್ದೀರಿ. ಇದರ ಸುಳಿವು ನನಗೆ ಕೊಂಚವೂ ಹತ್ತಗೊಡಲಿಲ್ಲವೇಕೆ?"

ನಗುನಗುತ್ತ ಷೋಡಶಿ ಹೇಳಿದಳು : "ನಿಮಗಿನ್ನೂ ನನ್ನ ಎಷ್ಟೋ ವಿಷಯಗಳು ತಿಳಿದಿಲ್ಲ. ಒಂದಿನ ಎಲ್ಲವೂ ತಿಳಿದೀತು. ಜಗತ್ತಿನಲ್ಲಿ ಒಬ್ಬರಿಗೆ ಮಾತ್ರವೇ ನನ್ನ ಎಲ್ಲ ಸಂಗತಿ ಹೇಳಿದ್ದೇನೆ. ಅವರು ಫಕೀರ ಸಾಹೇಬರು—"

"ನಿಮಗೆ ಈ ಸಲಹೆ ಅವರೇ ಕೊಟ್ಟರೇನು?"

ಷೋಡಶಿ ತಟ್ಟನೆ ಉತ್ತರವಿತ್ತಳು : "ಇಲ್ಲ ಇಲ್ಲ. ಈ ದಿನ ಮುಂಜಾನೆಯ ವರೆಗೂ ಅವರಿಗೆ ಇದಾವುದೂ ಗೊತ್ತಿರಲಿಲ್ಲ. ಈ ರಾಜೀನಾಮೆಯನ್ನು ನಾನು ನಿನ್ನೆ ರಾತ್ರಿಯೇ ಬರೆದಿದ್ದೇನೆ. ಈ ತ್ಯಾಗ ಬುದ್ಧಿ ನನಗೆ ಯಾರಿಂದ ಉಂಟಾಯಿತೆಂಬುದನ್ನು ಮಾತ್ರ ಎಂದಿಗೂ ಯಾರೆದುರಿಗೂ ಹೇಳುವುದಿಲ್ಲ."

ಬಹಳ ಹೊತ್ತಿನವರೆಗೆ ಜೀವಾನಂದನು ನೀರವವಾಗಿ ಕೇಳುತ್ತ ಕುಳಿತಿದ್ದ. ಒಮ್ಮೆಲೆ ಉಸಿರ್ಗರೆದು ಅವನೆಂದ : "ಬೇಕೆಂತಲೇ ನನ್ನನ್ನು ಮನೆಗೆ ಕರೆಸಿಕೊಂಡು ಚೇಷ್ಟೆ ಮಾಡುತ್ತಿದ್ದೀಯೆಂದು ನನಗೆನಿಸುತ್ತಿದೆ ಷೋಡಶಿ. ಇದೆಲ್ಲವನ್ನೂ ಸತ್ಯವೆಂದು ಗ್ರಹಿಸುವುದು ಆ ಮಾರ್ಫಿಯಾ ತೆಗೆದುಕೊಳ್ಳುವುದಕ್ಕಿಂತಲೂ ನನಗೆ ಕಠಿಣವಾಗಿದೆ."

ಇಷ್ಟು ಹೊತ್ತಿನ ತರುವಾಯ ಈಗ ನಿರ್ಮಲನು ಜೀವಾನಂದನ ಕಡೆಗೆ ದೃಷ್ಟಿಯನ್ನು ತಿರುಗಿಸಿದ. ಅವನು ಕೊಂಚ ನಕ್ಕು ನುಡಿದ : "ಈ ಆಟವನ್ನು ನೋಡಲಿಕ್ಕೆ ನೀವು ಬರಬೇಕಾದ್ದು ನಾಲ್ಕು ಹೆಜ್ಜೆ ಮಾತ್ರ. ನಾನು ಕೆಲಸ ಬೊಗಸೆ, ಮನೆ ಮಾರು ಬಿಟ್ಟು ಎಂಟು ನೂರು ಮೈಲಿನಿಂದ ಬಂದಿದ್ದೇನೆ. ಇದೆಲ್ಲವೂ ನಿಜವೇ ಇದ್ದರೆ, ನಿಮಗೆ ಬಯಸಿದ್ದು ಸಿಕ್ಕಂತೆಯೇ ಆಯಿತೆನ್ನಿರಿ ; ನನ್ನ ಪಾಲಿಗೆ ಮಾತ್ರ ನೂರಕ್ಕೆ ನೂರು ನಷ್ಟವೇ. ಈ ರೀತಿಗೆ ಚೇಷ್ಟೆಯೆನ್ನಬೇಕೋ ರಸಿಕತೆಯೆನ್ನಬೇಕೋ ನನಗೆ ತಿಳಿಯದಾಗಿದೆ" ಎಂದು ನುಡಿದು ಅವನು ಜೀವಾನಂದನ ಕಡೆಗೆ ಮತ್ತೊಮ್ಮೆ ದಿಟ್ಟಿಸಿದ. ಅವನ ಕಣ್ಣುಗಳೆರಡೂ ಆಂತರಿಕ ವ್ಯಥೆಯಿಂದ ವ್ಯಾಕುಲ

ವಾಗಿರುವಂತೆ ನಿರ್ಮಲನಿಗೆ ಕಂಡಿತು. ಜೀವಾನಂದನು ಯಾವ ಉತ್ತರ ವನ್ನೂ ಕೊಡಲಿಲ್ಲ; ನಗೆಯಲ್ಲಿ ಹಾರಿಸಿಬಿಡಲು ಪ್ರಯತ್ನಿಸಿದ ಮಾತ್ರ.

"ನೀವು ನಮ್ಮೊಡನೆ ಹುಡುಗಾಟ ನಡೆಸಿಲ್ಲವಷ್ಟೆ?" ನಿರ್ಮಲನು ಷೋಡಶಿಯನ್ನು ಕೇಳಿದ.

"ಇಲ್ಲ ನಿರ್ಮಲ ಬಾಬೂ. ನನ್ನ ಹಾಗೂ ನನ್ನ ತಾಯಿಯ ನಿಂದೆ ಯಿಂದ ಊರಂತ ಊರೆಲ್ಲ ಗಜಬಜಿಸುತ್ತಿರುವಾಗ ಈ ತೆರದ ಚೇಷ್ಟೆಯ ವಿಚಾರ ನನಗೆ ಹೇಗೆ ಹೊಳೆದೀತು? ನಿಜವಾಗಿಯೂ ರಾಜೀನಾಮೆ ಕೊಟ್ಟಿದ್ದೇನೆ."

"ಅದು ನಿಜ. ಅಂಥ ಪ್ರಸಂಗವೇ ಬಂದದ್ದಕ್ಕೆ ನೀವು ಹೀಗೆ ಮಾಡಿದ್ದೀರಿ" ಎಂದು ನಿರ್ಮಲನು ನುಡಿದ.

ಷೋಡಶಿ ಮರುಮಾತು ಆಡಲಿಲ್ಲ. ಕೆಲಹೊತ್ತು ಮೌನವಾಗಿದ್ದು ನಿರ್ಮಲನು ಮಾತನಾಡಿದ: "ನಿಮ್ಮ ರಕ್ಷಣೆಗಾಗಿ ನಾನು ಬಂದಿದ್ದೆ; ರಕ್ಷಿಸುತ್ತಲೂ ಇದ್ದೆ. ಆದರೆ ನನಗೆ ಆ ಸಂಧಿಯನ್ನು ನೀವೇಕೆ ಕೊಡಲಿಲ್ಲ ವೆಂಬುದು ಈಗ ತಿಳಿಯಿತು. ಆಸ್ತಿ ಉಳಿಯುತ್ತಿತ್ತು; ಆದರೆ ಅದರಿಂದ ನಿಂದೆಯ ಬಿರುಗಾಳಿ ಮತ್ತಷ್ಟು ಬೋರ್ಗರೆದು ಬೀಸುತ್ತಿತ್ತು. ಆ ಬಿರು ಗಾಳಿಯನ್ನು ತಡೆಯುವುದು ನನ್ನ ಕೈಲಾಗುತ್ತಿರಲಿಲ್ಲ—" ಈ ಮಾತು ಯಾರನ್ನು ಕುರಿತೆಂಬುದು ಅಲ್ಲಿದ್ದ ಪ್ರತಿಯೊಬ್ಬರಿಗೂ ಗೊತ್ತಾಯಿತು. ಆದರೂ ಜೀವಾನಂದನು ಏನೊಂದೂ ಮಾತನಾಡಲಿಲ್ಲ, ಷೋಡಶಿಯೂ ಹೌದೆನ್ನಲಿಲ್ಲ.

"ಈಗೇನು ಮಾಡಬೇಕೆಂದು ನಿಶ್ಚಯಿಸಿದ್ದೀರಿ?" ಎಂದು ನಿರ್ಮಲನು ಪ್ರಶ್ನಿಸಿದ.

"ಅದನ್ನು ಆ ಮೇಲೆ ತಿಳಿಸುತ್ತೇನೆ ನಿಮಗೆ" ಎಂದು ಉತ್ತರವಿತ್ತಳು ಷೋಡಶಿ.

"ಇನ್ನು ಎಲ್ಲಿ ಇರುವಿರಿ?"

"ಅದನ್ನೂ ಹಿಂದಿನಿಂದ ತಿಳಿಸುತ್ತೇನೆ."

"ಅವ್ವಾ!" ಹೊರಗಿನಿಂದ ಕೂಗು ಬಂದಿತು.

ಷೋಡಶಿ ಉಚ್ಚಸ್ವರದಿಂದ ಮೂರ್ನುಡಿಗೊಟ್ಟಳು: "ಯಾರು ಭೂತನಾಥನೆ? ಬಾರಪ್ಪ, ಇಲ್ಲಿ ಒಳಗೆ ತೆಗೆದುಕೊಂಡು ಬಾ."

ಗುಡಿಯ ಊಳಿಗದವನು ಒಳಗೆ ಬಂದ. ದೇವಿಯ ಪ್ರಸಾದದ ಹಣ್ಣು ಹಂಪಲು, ಮಿಠಾಯಿಗಳಿಂದ ತುಂಬಿದ ದೊಡ್ಡದೊಂದು ತಟ್ಟೆ ಅವನ ಕೈಯೊಳಗಿತ್ತು. ಅದನ್ನು ಇಸಿದುಕೊಂಡು ಷೋಡಶಿ ಜೀವಾನಂದನ ಕಡೆಗೆ ನೋಟವನ್ನು ಬೀರಿ, "ಆ ದಿವಸ ನಿಮಗೆ ಹೊಟ್ಟೆತುಂಬ ತಿಂಡಿ ಕೊಡುವುದು ನನಗಾಗಲಿಲ್ಲ. ಈ ಹೊತ್ತು ಅಂದಿನ ಕೊರತೆಯನ್ನೆಲ್ಲ ಪೂರಯಿಸಿಕೊಳ್ಳದೆ ನಿಮ್ಮನ್ನು ಬಿಡುವುದಿಲ್ಲ" ಎಂದು ನುಡಿದು ನಿರ್ಮಲನ ಕಡೆ ಹೊರಳಿ "ನೀವಂತೂ ನನಗೆ ಭಾವ, ಆಪ್ತರೇ. ನಿಮ್ಮನ್ನು ಹಾಗೆಯೇ ಕಳಿಸುವುದು ಹೇಗೆ ಶೋಭಿಸೀತು? ಈವರೆಗೆ ಚಿಲ್ಲೋ ಕೆಟ್ಟ ಮಾತುಗಳೆಷ್ಟೋ ಆದುವು. ಈಗಿಬ್ಬರೂ ಕೂತುಕೊಳ್ಳಿರಿ ನೋಡುವ. ನೀವು ಬಾಯಿ ಸವಿಮಾಡಿಕೊಳ್ಳದೆ ಹೋದರೆ ನನಗೆ ಅನಿವಾರ್ಯ ಸಿಟ್ಟು ಬಂದೀತು" ಎಂದಳು.

"ಕೊಡಿರಿ ಹಾಗಾದರೆ" ನಿರ್ಮಲನೆಂದ.

ಆದರೆ ಜೀವಾನಂದನು ಒಲ್ಲೆನೆಂದ. "ನನಗೆ ತಿನ್ನುವ ಇಚ್ಛೆಯಿಲ್ಲ" ಎಂದು ಹೇಳಿದ.

"ಇಚ್ಛೆಯಿಲ್ಲವೆಂದರೇನು? ತಿನ್ನಲೇಬೇಕು!"

ಆದರೂ ಜೀವಾನಂದನು ತಲೆಯಲ್ಲಾಡಿಸಿ "ಒಲ್ಲ" ಎಂದ.

ಷೋಡಶಿ ನಕ್ಕು ನುಡಿದಳು: "ಸುಮ್ಮನೆ ಗೋಣು ಹಾಕಬೇಡಿರಿ, ಚೌಧರಿ ಮಹಾಶಯರೇ. ಈ ಯೋಗ ಮುಂದೆಂದೂ ಸಿಕ್ಕಲಾರದು. ಈಗ ನನ್ನ ಕೈಯೊಳಗೆ ಸಿಕ್ಕಿದ್ದೀರಿ. ನಿಮ್ಮನ್ನು ಬಿಟ್ಟುಬಿಟ್ಟರೆ ಇಷ್ಟು ದಿನ ಮಾಡಿದ ಭೈರವಿತನದ ದೊಡ್ಡತನ ಏನು ಉಳಿಯಿತು?" ಎಂದು ಅವಳು ಕೈಯಲ್ಲಿ ನೀರು ಹಾಕಿಕೊಂಡು ಇಬ್ಬರ ಎದುರಿನ ಸ್ಥಳವನ್ನು ಸ್ವಚ್ಛ ಮಾಡಿದಳು. ತಟ್ಟೆಗಳನ್ನಿಟ್ಟು ಬಡಿಸತೊಡಗಿದಳು.

ಮಿಠಾಯಿ ಜೀವಾನಂದನ ಗಂಟಲೊಳಗೆ ಇಳಿಯುತ್ತಿಲ್ಲವೆಂಬುದು ಷೋಡಶಿಯ ಗಮನಕ್ಕೆ ಬಂದಿತು. ಮೆಲುದನಿಯಲ್ಲಿ ಅವಳೆಂದಳು: "ಆ ಮಿಠಾಯಿ ಸರಿಸಿ ಇಡಿರಿ. ಈ ಎರಡು ಹಣ್ಣುಗಳನ್ನು ತಿನ್ನಿರಿ"

ಎಂದು ಅವನ ತಟ್ಟೆಯೊಳಗಿನ ಎಂಜಲು ಮಿಠಾಯಿಯನ್ನು ತಾನೇ ಬದಿಗೆ ಸರಿಸಿದಳು. "ಏನಾಗಿದೆ ಈವೊತ್ತು? ನಿಜವಾಗಿಯೂ ಹಸಿವೆ ಇಲ್ಲವೆ? ಹೊಟ್ಟೆ ಹಸಿದಿರದಿದ್ದರೆ ಒತ್ತಾಯದಿಂದ ಸುಮ್ಮನೆ ತಿನ್ನುವುದೇನು ಒಳ್ಳೆಯದಲ್ಲ. ನೀವು ನಿಮ್ಮ ಪ್ರಕೃತಿಯನ್ನು ಈ ದೆಸೆಗೆ ತಂದುಕೊಂಡದ್ದನ್ನು ನೋಡಿದರೆ ನನಗೆ ಹೆದರಿಕೆಯಾಗುತ್ತದೆ" ಎಂದಳು.

ನಿರ್ಮಲನು ಕೈಗೆ ಬಾಯಿಗೆ ಜಗಳ ಹಚ್ಚಿದ್ದ. ಒಮ್ಮೆಲೆ ಮುಖವೆತ್ತಿ ನೋಡಿದ. ಆ ದೃಶ್ಯವನ್ನು, ಆ ಮಾತಿನ ರೀತಿಯನ್ನು ಕಂಡು ಎಂಟುನೂರು ಮೈಲುಗಳಾಚೆಯ ಹೈಮಳ ನೆನಪಾಯಿತು ಅವನಿಗೆ. ಈವರೆಗೆ ಇಬ್ಬರಲ್ಲಿಯೂ ಎಷ್ಟೋ ಮಾತುಕತೆಗಳಾಗಿದ್ದವು, ಹಾಸ್ಯವಿನೋದಗಳು ನಡೆದಿದ್ದವು. ಇಂದು ಬೆಳಗ್ಗೆ ಇದೇ ಷೋಡಶಿಯ ಸೂಚಕ ಭಾಷಣದಿಂದ ಅವನ ಸರ್ವಾಂಗವೂ ವಿದ್ಯುತ್ಪ್ರವಾಹದಿಂದ ರೋಮಾಂಚಿತವಾಗಿತ್ತು. ಆದರೆ—

ಆದರೆ ಇದು ಆ ಸ್ವರವಲ್ಲ. ಅಂತಃಕರಣದ ಇಷ್ಟೊಂದು ಮಧುರ ಝುರಿ ಬೆಳಗಿನ ಮಾತಿನಲ್ಲಿ ಇರಲಿಲ್ಲ. ಮಿಠಾಯಿಯ ಸವಿ ಬಾಯಲ್ಲಿ ಇದ್ದಕಿದ್ದ ಹಾಗೆ ಕಹಿಯಾಯಿತು. ಒಂದು ಕ್ಷಣದೊಳಗೇ ತಿನ್ನುವ ಆನಂದವೆಲ್ಲ ಲುಪ್ತವಾಗಿ ಹೋಯಿತು.

ಕೊಂಚ ಹೊತ್ತಿನಲ್ಲಿ ಷೋಡಶಿಯ ಗಮನವು ಆ ಕಡೆ ಹೋಯಿತು. "ನಿಮ್ಮದೂ ಇದೇ ಅವಸ್ಥೆಯಾಯಿತೇ ನಿರ್ಮಲಬಾಬೂ?" ಎಂದು ಅವಳು ಆಶ್ಚರ್ಯಚಕಿತಳಾಗಿ ಕೇಳಿದಳು.

"ತಿನ್ನತಕ್ಕದ್ದನ್ನು ನೀವು ಹೇಳುವುದಕ್ಕೆ ಮುಂಚೆಯೇ ತಿಂದು ತೀರಿಸಿದ್ದೇನೆ. ನಿಮ್ಮ ಆಗ್ರಹದ ಹಾದಿಯನ್ನು ನೋಡಲಿಲ್ಲ ನಾನು."

"ತಿಂಡಿಗಳೇ ರುಚಿಯಾಗಿಲ್ಲವೇನೋ ಈವೊತ್ತು?"

"ಇರಬಹುದು. ನಿತ್ಯ ಹೇಗಿರುತ್ತವೆಯೋ ನನಗೇನೂ ಗೊತ್ತಿಲ್ಲ" ಎಂದು ನಿರ್ಮಲನು ಕೈ ತೊಳೆಯಲಾರಂಭಿಸಿದ. ಇದು ಷೋಡಶಿಗೆ ಮಾತ್ರವಲ್ಲ, ಜೀವಾನಂದನ ದೃಷ್ಟಿಗೂ ಗೋಚರಿಸದಿರಲಿಲ್ಲ. ಆದರೆ ಆ ವಿಷಯವಾಗಿ ಯಾರೂ ಯಾವ ಚರ್ಚೆಯನ್ನೂ ಎತ್ತಲಿಲ್ಲ.

ಹೊರಗೆ ಬಂದು ಷೋಡಶಿ ಬಾಯಿ ಮುಕ್ಕುಳಿಸಲು ನೀರು ಕೊಟ್ಟಳು.

ಸಿದ್ಧಮಾಡಿಟ್ಟ ವೀಳ್ಯವನ್ನು ಅವನ ಕೈಗಿತ್ತು ತೆರೆದುನೋಡಿ ಹಾಕಿಕೊಳ್ಳಲು ಹೇಳಿದಳು. ಇದಕ್ಕೂ ಹೆಚ್ಚಿಗೆ ಅವಳೇನೂ ಮಾತನಾಡಲಿಲ್ಲ.

“ಹಾಗಾದರೆ ನಾನಿನ್ನು ಬರುತ್ತೇನೆ” ನಿರ್ಮಲನೆಂದ.

“ನೀವು ಊರಿಗೆ ಯಾವಾಗ ಹೊರಡುವವರು?”

“ಇನ್ನು ನನ್ನ ಅಗತ್ಯವೇ ಇಲ್ಲ. ನಾಳೆಯೇ ಹೊರಡಬೇಕೆನ್ನು ತ್ತೇನೆ.”

“ಮಗುವಿಗೆ, ಹೈಮಳಿಗೆ ನನ್ನ ಆಶೀರ್ವಾದ ಹೇಳಿರಿ.”

ಕ್ಷಣಹೊತ್ತು ಸುಮ್ಮನಿದ್ದು ನಿರ್ಮಲನು ವಿಚಾರಿಸಿದ: “ಹಾಗಾದರೆ ನಿಜವಾಗಿಯೂ ನನ್ನ ಕೈಯಿಂದ ಏನೂ ಆಗುವಂತಿಲ್ಲವೆ?”

ಷೋಡಶಿಯೂ ಒಂದು ಕ್ಷಣ ಮೌನವಾಗಿದ್ದು ಉತ್ತರವಿತ್ತಳು: “ಹಾಗೆ ಹೇಗೆ ಹೇಳಲಿ ನಿರ್ಮಲಬಾಬೂ? ಸುಮ್ಮನೆ ಏತಕ್ಕೆ ಅಭಿಮಾನ ಹಿಡಿಯುವುದು? ಆದರೆ ಇಷ್ಟು ಮಾತ್ರ ನಿಜ– ಇನ್ನು ಮೇಲೆ ದೇವಿಯ ಮಂದಿರದ ವಿಷಯದಲ್ಲಿ ನಿಮಗೆ ತೊಂದರೆ ಕೊಡುವ ಪ್ರಸಂಗ ಇನ್ನು ಮೇಲೆ ಬರಲಾರದು.”

ಇಳಿದ ಮುಖಮುದ್ರೆಯಿಂದ ನಗಲು ಪ್ರಯತ್ನಿಸುತ್ತ ನಿರ್ಮಲನೆಂದ: “ಶೀಘ್ರವೇ ನನ್ನನ್ನು ಮರೆಯುವುದಿಲ್ಲ ತಾನೆ?”

ಷೋಡಶಿ ಗೋಣು ಹಾಕುತ್ತ “ಇಲ್ಲ” ಎಂದು ಮಾತ್ರ ನುಡಿದಳು.

ನಮಸ್ಕಾರ ಮಾಡಿ ನಿರ್ಮಲನೆಂದ: “ನಾನಿನ್ನು ಬರುತ್ತೇನೆ. ಬೆಳಗಿನ ಗಾಡಿಗೆ ಹೋಗುವುದಾದರೆ ಇನ್ನು ಭೆಟ್ಟಿಯಾಗುವ ಸಂಭವವಿಲ್ಲ. ನಿಮ್ಮ ಮೇಲೆ ಹೈಮಳಿಗೆ ಬಹಳ ಪ್ರೀತಿ. ಪುರಸತ್ತಾದಾಗ ಮೇಲಿಂದ ಮೇಲೆ ಸುದ್ದಿ ತಿಳಿಸುತ್ತಿರ್ರಿ.”

ಪ್ರತ್ಯುತ್ತರಕ್ಕಾಗಿ ಕಾಯದೆ ನಿರ್ಮಲನು ಹೊರಟುಹೋದ. ಅವನ ಅಂತಃಕರಣಕ್ಕೆ ಪೆಟ್ಟು ತಗಲಿತ್ತು. ತಾನು ವಂಚಿತನಾದುದಕ್ಕಾಗಿ ಅವನಿಗೆ ನಾಚಿಕೆಯಾದಷ್ಟೂ ಆ ಸಂಗತಿ ಅವನ ಮನಸಿಗೆ ಹತ್ತಿತು. ಹೆಂಡದಂಗಡಿ ಮುಚ್ಚಿರುವುದನ್ನು ಕಂಡು ತಿರುಗಿ ಹೊರಟ ಕುಡಕನು ನಿರುಪಾಯನಾಗಿ ತನ್ನ ಮನಸಿಗೆ ಸಮಾಧಾನ ಹೇಳುವಂತೆ, ಅವನ ಸ್ಥಿತಿಯಾಗಿತ್ತು. ದಾರಿಯಲ್ಲಿ ಅವನು ತನಗೆ ತಾನೇ ಹೇಳಿಕೊಂಡ: ‘ಬದುಕಿಕೊಂಡೆ,

ಖಂಡಿತ ಬದುಕಿಕೊಂಡೆ. ಈ ಸ್ವೈರವರ್ತನೆಯ ಹೆಂಗುಸಿನ ಮೋಹ ಜಾಲದಿಂದ ಹೊರಬಿದ್ದೆ. ಇನ್ನು ನನ್ನ ಹೈಮ ನನಗೆ ದೊರಕಿದಳು.' ತಿರು ತಿರುಗಿ ಇವೇ ಶಬ್ದಗಳನ್ನು ತನ್ನಷ್ಟಕ್ಕೆ ತಾನು ಉಚ್ಚರಿಸುತ್ತಲಿದ್ದ. ಹೃದಯ ಕ್ಕಾದ ಆಘಾತದ ಕಾರಣವನ್ನು ಸಮರ್ಥಿಸುವುದಕ್ಕಾಗಿ ಪುನಃ ಪುನಃ ಅವ ನೆನ್ನುತ್ತಿದ್ದ: "ಆದದ್ದು ಒಳ್ಳೆಯದೇ ಆಯಿತು. ಷೋಡಶಿಯ ಮನೆ ಬಾಗಿಲು ನನಗೆ ಚಿರವಾಗಿ ಮುಚ್ಚಿದಂತಾಯಿತು."

ಒಂದೆರಡು ನಿಮಿಷಗಳ ತರುವಾಯ ಜೀವಾನಂದನು ಹೊರಗೆ ಬಂದು ನೋಡಿದ. ಷೋಡಶಿ ಕಂಬಕ್ಕೆ ಆತುಕೊಂಡು ನಿಶ್ಚಲವಾಗಿ ನಿಂತಿದ್ದಳು. "ನಿರ್ಮಲಬಾಬು ಹೋದರೇನು?" ಹತ್ತಿರ ಹೋಗಿ ಅವನು ಮೆಲ್ಲನೆ ಕೇಳಿದ.

ಷೋಡಶಿ ಹಾಗೆಯೇ ನೀರವವಾಗಿ ನಿಂತಿದ್ದಳು. ಆ ಪ್ರಶ್ನೆಗೆ ಉತ್ತರ ಕೊಡುವ ಆವಶ್ಯಕತೆಯೂ ಇರಲಿಲ್ಲ.

"ಈ ಸದ್ಗೃಹಸ್ಥನ ಪರಿಚಯ ನನಗೆ ಸರಿಯಾಗಿ ಆಗಲಿಲ್ಲ" ಜೀವಾನಂದನೆಂದ.

ಷೋಡಶಿ ಬೀದಿಯ ಕಡೆ ನೋಡುತ್ತಲಿದ್ದಳು. ಅಲ್ಲಿಂದ ದೃಷ್ಟಿ ಯನ್ನು ಕದಲಿಸದೆ ಅವಳೆಂದಳು: "ಅದರಿಂದ ತಮ್ಮದೇನು ಕೆಟ್ಟಿತು?"

"ಕೆಡುವುದೇನಿದೆ? ಇಲ್ಲ. ಹಾಗೇನೂ ಇಲ್ಲ. ಆದರೆ ನೀನಾದರೂ ಅವನನ್ನು ಗುರುತಿಸಿದೆಯಾ?"

"ನನಗೆ ಅಗತ್ಯವಿದ್ದ ಮಟ್ಟಿಗೆ ಗುರುತಿಸಿದ್ದೇನೆ."

"ಹಾಗಾದರೇನು ಅಡ್ಡಿಯಿಲ್ಲ" ಎಂದು ನುಡಿದು ಕ್ಷಣಹೊತ್ತು ನೀರವವಾಗಿದ್ದು, ಕೊನೆಗೆ ತನ್ನೊಳಗೇ ಮಾತನಾಡಿಕೊಂಡಂತೆ ಜೀವಾ ನಂದನೆಂದ: "ಎಷ್ಟು ಕಳಕಳಿಯಿಂದ 'ಮರೆಯಬೇಡಿರಿ' ಎಂದು ಹೇಳಿ ಕೊಳ್ಳುತ್ತಿದ್ದ! ಅವನ ವಿನಂತಿಯನ್ನು ಮನ್ನಿಸಿದೆಯಾ?"

ಕತ್ತಲೆಯಲ್ಲಿ ಇಬ್ಬರೂ ಕಣ್ಣೆತ್ತಿ ಒಬ್ಬರನ್ನೊಬ್ಬರು ನೋಡಿದರು. ಷೋಡಶಿಯ ಕಣ್ಣುಗಳು ಚಲಿಸದಾದವು. ಅವಳೆಂದಳು: "ನಾನು ಅವ ರನ್ನು ಗುರುತಿಸಿದ ಅರ್ಥದಷ್ಟಾದರೂ ನನ್ನನ್ನು ಗುರುತಿಸುವ ಸಂಧಿ ಅವ ರಿಗೆ ಸಾಧಿಸಿದ್ದರೆ, ಇಷ್ಟು ಕಳಕಳಿಯಿಂದ ಹೇಳುವ ಅಗತ್ಯವೇ ಉಂಟಾಗು

ತ್ತಿರಲಿಲ್ಲ. ನನ್ನಲ್ಲಿ ಕೆಲವೊಂದು ತಿಳಿವಳಿಕೆ ಹುಟ್ಟಿದ್ದು, ಕೆಲವೊಂದು ಆನಂದದ ಭಾವನೆಗಳ ಉದಯವಾದದ್ದು ಅವರಿಂದಲೇ. ಅವರನ್ನು ನೋಡಿದ್ದರಿಂದಲೇ ಹಿಂದಿನ ಷೋಡಶಿ ಇಂದು ಉಳಿದಿಲ್ಲ. ಚಂಡೀಗಡದ ಭೈರವಿಯ ಅಧಿಕಾರವನ್ನು ವಿಭಾಗಿಸಿಕೊಳ್ಳಲಿಕ್ಕೆ ನೀವು ಇಷ್ಟೊಂದು ಪ್ರಯತ್ನ ನಡೆಸಿರುವಿರಿ; ಅದಕ್ಕಾಗಿ ಸಿಕ್ಕಸಿಕ್ಕಲ್ಲಿ ನನ್ನ ದುರ್ನಾಮವನ್ನು ಹರಡುತ್ತಿರುವಿರಿ. ಆ ಭೈರವೀ ಪದವಿಯನ್ನು ಹರಿದ ಬಟ್ಟೆಯಂತೆ ನಾನು ಬಿಟ್ಟುಕೊಡುತ್ತಿದ್ದೇನೆ. ಈ ಜ್ಞಾನ ನನಗೆ ಎಲ್ಲಿಂದ ಬಂತು ಗೊತ್ತೇ? ಅಲ್ಲಿಂದಲೇ. ಈ ಎಲ್ಲ ಅಧಿಕಾರವು ಸ್ತ್ರೀ ಜಾತಿಗೆ ಹೇಗೆ ನಿರರ್ಥಕ ವೆಂಬುದು ನನಗೆ ಗೊತ್ತಾದದ್ದು ಅವರನ್ನು ಕಂಡ ಮೇಲೆಯೆ! ಆದರೆ ಇದು ಅವರಿಗೆ ಎಳ್ಳಷ್ಟೂ ಗೊತ್ತಾಗಿಲ್ಲ; ಎಂದೂ ಗೊತ್ತಾಗುವುದಿಲ್ಲ."

ಜೀವಾನಂದನು ಸ್ತಬ್ಧವಾಗಿ ಕೇಳುತ್ತಲಿದ್ದ. ಅಷ್ಟರಲ್ಲಿ ಷೋಡಶಿಯ ದೃಷ್ಟಿ ಆವನ ಕಡೆ ಹೋಯಿತು. ತಾನು ಆವೇಗ ಭರದಲ್ಲಿ ಮಾತನಾಡು ತ್ತಿರುವೆನೆಂಬ ಅರಿವು ಅವಳಿಗಾಗುತ್ತಲೇ ಲಜ್ಜಿತಳಾಗಿ ಸುಮ್ಮನಾದಳು.

ಕೆಲ ಹೊತ್ತು ಯಾರೂ ಮಾತನಾಡಲಿಲ್ಲ. ಬಳಿಕ ಜೀವಾನಂದನೇ ಮಾತಿಗೆ ಮೊದಲು ಮಾಡಿದ: "ನಾನೊಂದು ಮಾತು ಕೇಳಬೇಕಾಗಿದೆ. ಆದರೆ ಕೇಳಲಿಕ್ಕೆ ನಾಚಿಕೆಯಾಗುತ್ತಿದೆ. ಕೇಳಿದರೆ ಅದಕ್ಕೆ ನಿಜವಾದ ಉತ್ತರ ಕೊಡಬಲ್ಲೆಯಾ ಅಲಕಾ?"

ಜೀವಾನಂದನ ಬಾಯಿಂದ 'ಅಲಕಾ' ಎಂಬ ಹೆಸರನ್ನು ಕೇಳಿ ದೊಡನೆ ಷೋಡಶಿ ವಿಹ್ವಲೆಯಾಗುತ್ತಿದ್ದಳು. ಈ ಮೂರಕ್ಷರದ ಶಬ್ದವು ತನ್ನನ್ನು ಎಲ್ಲಿ ತಾಗುತ್ತಿತ್ತೆಂಬುದು ಅವಳಿಗೆ ತಿಳಿಯುತ್ತಿರಲಿಲ್ಲ. ವಿಶೇಷ ವಾಗಿ, ಅವನ ಈ ವಿಚಿತ್ರವಾದ ಪ್ರಶ್ನೆಯ ರೀತಿಗೆ ಷೋಡಶಿಗೆ ನಗು ಬಂದಿತು. ಅವಳೆಂದಳು: "ನೀವು ಒಂದು ಅದ್ಭುತ ಸಂಗತಿಯನ್ನು ಮಾಡಿ ತೋರಿಸಿದಿರೆನ್ನಿರಿ; ಬಳಿಕ, ನನಗೂ ಅಂಥ ಅದ್ಭುತವನ್ನು ಮಾಡ ಲಾದೀತೋ ಇಲ್ಲವೋ ಎಂಬುದನ್ನು ಹೇಳುವ ಸಾಮರ್ಥ್ಯ ನನಗಿಲ್ಲ. ಆದರೆ ನೀವು ಹಾಗೆ ಯಾವುದನ್ನೂ ಮಾಡುವ ಅಗತ್ಯವಿಲ್ಲ!– ನನಗೆ ತಿಳಿ ಯಿತು. ನೀವು ಅಪವಾದವನ್ನು ತೋರಿಸಿಕೊಟ್ಟರೆಂದು, ಅದನ್ನು ಸತ್ಯ ವೆಂದು ತೀರ್ಮಾನಿಸುವುದರಲ್ಲಿ ಏನೂ ಅರ್ಥವಿಲ್ಲ. ಯಾವ ಪ್ರಸಂಗ

ದಲ್ಲಿಯೂ ಯಾರವ ಆಸರೆಯನ್ನೂ ನಾನು ತೆಗೆದುಕೊಳ್ಳಬಯಸುವುದಿಲ್ಲ. ಎಲ್ಲಿಯೇ ಆಗಲಿ, ನನ್ನ ಗಂಡನಿದ್ದಾನೆಂಬುದನ್ನು ಯಾವ ಲಾಲಸೆಯಿಂದಲೂ ನಾನು ಮರೆಯುವುದಿಲ್ಲ. ಇಂಥ ಭಯಂಕರ ಪ್ರಶ್ನೆಯನ್ನು ಕೇಳುವುದಕ್ಕೆ ನಿಮಗೆ ನಾಚಿಕೆಯಾಗುವುದಿಲ್ಲವೆ, ಚೌಧರಿ ಮಹಾಶಯ?"

"ನೀನು ನನಗೆ ಚೌಧರಿ ಮಹಾಶಯ ಎಂದೇಕೆ ಎನ್ನುತ್ತೀ?"

"ಹಾಗಾದರೆ ಏನೆನ್ನಲಿ? ಧನಿಯರೇ ಎನ್ನಲೇ?"

"ಬೇಡ. ನಾಲ್ಕು ಜನ ಎನ್ನುವ ಹಾಗೆ ಜೀವಾನಂದ ಬಾಬೂ ಎನ್ನು."

"ಒಳ್ಳೇದು. ಇನ್ನು ಮುಂದೆ ಹಾಗೇ ಎನ್ನುತ್ತೇನೆ."

"ಮುಂದೇಕೆ, ಇಂದೇ ಎನ್ನು."

ಷೋಡಶಿ ಉತ್ತರ ಕೊಡಲಿಲ್ಲ. ಒಳಗಿನ ದೀಪ ಮಂದವಾಗುತ್ತಲಿತ್ತು. ಅವಳು ಒಳಗೆ ಹೋಗಿ ಬತ್ತಿಯನ್ನು ಚಾಚಿದಳು. ಜೀವಾನಂದನು ಪುನಃ ಒಳಗೆ ಬಂದು ಕುಳಿತುದನ್ನು ಕಂಡು ಅವಳು ಅಚ್ಚರಿಗೊಂಡಳು. "ರಾತ್ರಿಯಾಯಿತು. ನೀವು ಮನೆಗೆ ಹೋಗುವುದಿಲ್ಲವೆ? ನಿಮ್ಮ ಆಳುಗಳು ಎಲ್ಲಿದ್ದಾರೆ?" ಎಂದು ಕೇಳಿದಳು.

"ನಾನು ಅವರನ್ನು ಕಳಿಸಿಬಿಟ್ಟೆ."

"ಒಬ್ಬರಿಗೇ ಹೋಗುವುದಕ್ಕೆ ಭಯವಾಗುವುದಿಲ್ಲವೆ?"

"ಇಲ್ಲ. ನನ್ನ ಕಡೆ ಪಿಸ್ತೂಲಿದೆ."

"ಹಾಗಾದರೆ ಅದನ್ನು ಸಂಗಡ ತೆಗೆದುಕೊಂಡೇ ಮನೆಗೆ ಹೋಗಿರಿ. ನನಗೆ ಬಹಳ ಕೆಲಸವಿದೆ."

"ನಿನಗೆ ಕೆಲಸ ಇದ್ದಿರಬಹುದು. ಆದರ ನನ್ನ ಕೆಲಸ ಬಹಳ ಮಹತ್ವದ್ದಿದೆ. ನಾನೀಗ ಹೋಗುವುದಿಲ್ಲ."

ಷೋಡಶಿಯ ದೃಷ್ಟಿ ಒಮ್ಮೆಲೆ ಉಜ್ವಲವಾಯಿತು. ಆದರೆ ಶಾಂತವಾಗಿಯೇ ಅವಳು ಹೇಳಿದಳು: "ರಾತ್ರಿಯಾಗಿದೆ. ನಾನು ಆಳನ್ನು ಕರೆದು ಜೊತೆಗೆ ಕಳಿಸುತ್ತೇನೆ. ಅವರು ನಿಮ್ಮನ್ನು ಮನೆಯ ತನಕ ಮುಟ್ಟಿಸಿ ಬರುವರು."

ಒಟ್ಟಿನಲ್ಲಿ ಪ್ರಕರಣವು ಚೆನ್ನಾಗಿಲ್ಲವೆಂದು ಜೀವಾನಂದನಿಗೆನಿಸಿತು.

"ಯಾರನ್ನೂ ಕರೆಯುವುದು ಬೇಡ. ನಾನೇ ಹೋಗುತ್ತೇನೆ. ಹೋಗುವ ಹಾಗೆ ಆಗಲೊಲ್ಲದೆಂದು ಸುಮ್ಮನೆ ಹಾಗೆಂದೆ! – ನೀನು ನಿಜವಾಗಿಯೂ ಚಂಡೀಗಡವನ್ನು ಬಿಟ್ಟು ಹೋಗುವೆಯಾ ಅಲಕಾ?" ಎಂದ.

ಮತ್ತೆ ಅದೇ ಹೆಸರು. ಜೀವಾನಂದನ ಮುಖದ ಕಡೆ ನೋಡಿದಾಗ ಅವಳಿಗೆ ಬಹಳ ವ್ಯಸನವಾಯಿತು. ಬರೀ ತಲೆಹಾಕಿ ಹೌದೆಂದು ಸೂಚಿಸಿದಳು.

"ಯಾವಾಗ ಹೋಗುತ್ತೀ?"

"ಯಾರಿಗೆ ಗೊತ್ತು? ನಾಳೆಯೇ ಹೋದರೂ ಹೋದೆ."

"ನಾಳೆಯೇ? ನಾಳೆ ಹೋಗಲಿಕ್ಕಾದೀತೇ ನಿನಗೆ?" ಎಂದು ನುಡಿದು ಜೀವಾನಂದನು ಒಮ್ಮೆಲೆ ಸ್ತಬ್ಧನಾಗಿ ಕುಳಿತ.

ಬಹಳ ಹೊತ್ತಿನ ತರುವಾಯ ನಿಟ್ಟುಸಿರ್ಗರೆದು ಅವನೆಂದ: "ಆಶ್ಚರ್ಯ. ತನ್ನ ಮನವನ್ನೇ ಪರೀಕ್ಷಿಸಿಕೊಳ್ಳುವಾಗ ಮನುಷ್ಯನು ಎಷ್ಟು ತಪ್ಪುತ್ತಾನೆ! ನಿನ್ನನ್ನು ಇಲ್ಲಿಂದ ಹೊರಡಿಸುವುದಕ್ಕೆ ನಾನು ಮನಃಪೂರ್ವಕವಾಗಿ ಪ್ರಯತ್ನಿಸಿದೆ. ಆದರೆ ಈಗ ನೀನು ಹೋಗುವೆಯೆಂಬುದನ್ನು ಕೇಳಿ, ಕಣ್ಣುಮುಂದಿನ ಜಗತ್ತೆಲ್ಲ ಒಮ್ಮೆಲೆ ಬಾಡಿ ಒಣಗಿ ಹೋದಂತೆ ಎನಿಸುತ್ತಿದೆ. ನಿರ್ಮಲಬಾಬು ದೊಡ್ಡ ಮನುಷ್ಯ, ದೊಡ್ಡ ಬ್ಯಾರಿಸ್ಟರ್, ಅವನು ನಿನ್ನ ಬೆನ್ನು ಕಟ್ಟಲು ಬಂದಿದ್ದಾನೆ! ಜಗಳವಾಗುವುದು, ಕದನವಾಗುವುದು, ನಾವೇ ಗೆಲ್ಲುವೆವು! ಸಾಲ ತೀರಿಸುವುದಕ್ಕಾಗಿ ಮಾರಿದ ಭೂಮಿಗಳ ವಿಷಯದಲ್ಲಿ ಯಾವ ಗೊಂದಲವೂ ಏಳಲಾರದು, ಕೈಯೊಳಗೆ ಸ್ವಲ್ಪ ಹಣವೂ ಆಗಬಹುದು, ಆ ಬಳಿಕ ನಾನು ಹೇಳಿದಂತೆಯೇ ನೀನು ಕೇಳಬೇಕಾಗುವುದು ಎಂದು ನಾನು ಗೋಪುರ ಕಟ್ಟುತ್ತಲಿದ್ದೆ. ಆದರೆ ಈ ಪ್ರಕರಣ ಇನ್ನೊಂದು ರೀತಿಯಿಂದ ಕೊನೆಗೊಳ್ಳಬಹುದು, ನೀನು ಸರ್ವಸ್ವಕ್ಕೂ ನೀರು ಬಿಟ್ಟು ಹೊರಟುಹೋದರೆ ಈ ಪ್ರಕರಣ ಯಾವ ಮೆಟ್ಟಿಗೆ ಮುಟ್ಟಬಹುದು ಎಂಬುದು ನನಗೆ ಕನಸಿನಲ್ಲಿಯೂ ಕಾಣಲಿಲ್ಲ. ಇರಲಿ ಅಲಕಾ, ನನ್ನ ಹಾಗೆ ನಿನಗೂ ತಪ್ಪುಕಲ್ಪನೆಯಾಗಿರುವ ಸಂಭವವಿದೆ; ನಿನಗೂ ನಿನ್ನ ಮನಸ್ಸನ್ನು ಚೆನ್ನಾಗಿ ಪರೀಕ್ಷಿಸಿಕೊಳ್ಳುವುದಾಗಿರಲಿಕ್ಕಿಲ್ಲ."

ಅವನ ಈ ಭಾಷಣವು ಷೋಡಶಿಗೆ ಅನಪೇಕ್ಷಿತವಾದುದು. ಅದವಳಿಗೆ ಒಳ್ಳೇ ವಿಲಕ್ಷಣವಾಗಿ ತೋರಿತು. ಜೀವಾನಂದನ ಬಾಯಿಂದ ಇದು ಹೇಗೆ ಹೊರಟಿತೆಂಬುದೇ ಅವಳಿಗೆ ಆಶ್ಚರ್ಯ. ಅದಕ್ಕೆ ಉತ್ತರವೀಯುವುದಕ್ಕೆ ಕೊಂಚ ಹೊತ್ತು ತಡೆಯಬೇಕಾಯಿತು. ಕೊನೆಗೆ ಸಮ್ಮತಿಪೂರ್ವಕವಾಗಿ ಅವಳೆಂದಳು: "ಒಂದು ವೇಳೆ ಹಾಗೂ ಇರಬಹುದು! ಆದರೆ ನಾನೀಗ ಮಾಡಿದ ನಿಶ್ಚಯದಲ್ಲಿ ವ್ಯತ್ಯಾಸವಾಗಲಾರದೆಂದು ಮಾತ್ರ ನನಗೆ ಖಂಡಿತವಾಗಿ ತಿಳಿಯುತ್ತದೆ."

"ಅಬ್ಬಬ್ಬಾ! ನೀನು ಗಂಡುಸಾಗಬೇಕಿತ್ತು, ನಾನು ಹೆಂಗುಸಾಗಬೇಕಿತ್ತು! – ಒಳ್ಳೇದು, ಅಲ್ಲಿ ಹೋದಲ್ಲಿ ನಿನಗೆ ಹೇಗೆ ಸಾಗೀತು?"

"ಈ ವಿಷಯದಲ್ಲಿ ನಿಮ್ಮೊಡನೆ ವಿಚಾರ ವಿನಿಮಯಮಾಡಬೇಕಾದ ಅಗತ್ಯವಿಲ್ಲ." ಷೋಡಶಿ ಮೊದಲಿನಂತೆಯೆ ನಿರ್ದಾಕ್ಷಿಣ್ಯವಾಗಿ ಉತ್ತರವಿತ್ತಳು.

ಜೀವಾನಂದನು ಕಂಗೆದ್ದು ನುಡಿದ: "ಇದು ಇಲ್ಲ, ಅದು ಇಲ್ಲ, ಮಾಡಬೇಕಾದ್ದೇನೂ ಇಲ್ಲ ನಿನಗೆ! ನನ್ನ ಕೂದಲು ಹಣ್ಣಾಗುತ್ತ ಬಂದಿವೆ, ನಾನು ಮುದುಕನಾಗಿದ್ದೇನೆ: ನಾನು ನಿನ್ನೆದುರಿಗೆ ಕೈಜೋಡಿಸಿಕೊಂಡು ಅಳಬೇಕೆಂದು ನಿನಗೆ ಎನಿಸುತ್ತಿದೆಯೆ?"

"ಇಲ್ಲಿ ನೋಡಿರಿ. ಈಗ ರಾತ್ರಿ ಬಹಳವಾಯಿತು. ಇನ್ನೂ ನನ್ನ ಆಹ್ನಿಕ ಕೂಡ ಆಗಿಲ್ಲ."

ಹೊರಗೆ ಕೆಮ್ಮುತ್ತ ಬರುತ್ತಿದ್ದ ಪುರೋಹಿತನ ಹೆಜ್ಜೆಯ ಸದ್ದಾಯಿತು. ಬಾಗಿಲ ಬಳಿ ಬಂದು ಅವನು ಹೇಳಿದ: "ಕೇಳಿದಿರಾ ತಾಯಿ, ಗುಡಿಯ ಬಾಗಿಲಿಕ್ಕಿ, ಎಲ್ಲರ ಸಮಕ್ಷಮ ಕೀಲಿಕೈಯನ್ನು ತಾರಾದಾಸ ಭಟ್ಟರ ಕಡೆಗೆ ಕೊಟ್ಟೆ. ರಾಯಮಹಾಶಯರು, ಶಿರೋಮಣಿಯವರು ಇಬ್ಬರೂ ಇದ್ದರು."

"ಸರಿಯಾಯಿತು" ಎಂದು ಷೋಡಶಿ, "ನೀವು ಸ್ವಲ್ಪ ನಿಂದಿರಿ. ನಾನು ಸಾಗರನ ಕಡೆ ಹೋಗಿ ಬರುತ್ತೇನೆ" ಎಂದು ನುಡಿದು ಎದ್ದು ನಿಂತಳು.

ಜೀವಾನಂದನೂ ಎದ್ದು ನಿಂತು "ಈ ವಸ್ತುಗಳನ್ನೂ ರಾಯಮಹಾ ಶಯರ ಕಡೆ ಕಳಿಸಿಬಿಡಲ್ಲೆ" ಎಂದ.

"ಬೇಡ. ಪೆಟ್ಟಿಗೆಯ ಕೀಲಿಕೈಯನ್ನು ಬೇರೆ ಯಾರ ಕಡೆಗೆ ಕೊಡು ವುದಕ್ಕೂ ನನಗೆ ವಿಶ್ವಾಸವಿಲ್ಲ."

"ನನ್ನಲ್ಲಿ ಮಾತ್ರ ವಿಶ್ವಾಸವೆ?"

ಈ ಪ್ರಶ್ನೆಗೆ ಉತ್ತರವನ್ನು ಕೊಡದೆ ಮನೆಯ ಕೀಲಿಯನ್ನು ಕೈಯಲ್ಲಿ ತೆಗೆದುಕೊಂಡು ಹೊರಗೆ ಬಂದು ನಿಂತಳು. ಜೀವಾನಂದನೂ ಹೊರಗೆ ಬಂದ. ಅವಳು ಬಾಗಿಲಿಕ್ಕಿ ಕೀಲಿ ಹಾಕಿ ಅವನ ಕಾಲಮೇಲೆ ತಲೆಯಿಟ್ಟು ನಮಸ್ಕರಿಸಿದಳು. ಬಳಿಕ ಮೌನವಾಗಿ ಪುರೋಹಿತನನ್ನು ಹಿಂಬಾಲಿಸಿ ಹೊರಟಳು.

ಜೀವಾನಂದನೊಬ್ಬನೇ. ಪಾಪ, ಆ ಕತ್ತಲೆಯಲ್ಲಿ ಪೆಪ್ಪನಂತೆ ನಿಶ್ಚಲ ನಾಗಿ ನಿಂತುಕೊಂಡ.

## ೨೩

ಬ್ಯಾರಿಸ್ಟರ್ ಸಾಹೇಬರು ಹೊರಟು ಹೋದರು. ಷೋಡಶಿ ಹೊರಟು ನಿಂತಿದ್ದಾಳೆ, ಗುಡಿಯಲ್ಲಿ ಭದ್ರವಾಗಿಟ್ಟಿದ್ದ ಬೆಲೆಯುಳ್ಳ ವಸ್ತು ಒಡವೆಗಳು ವಶವಾಗಿವೆ ಮುಂತಾದ ಸುದ್ದಿಗಳು ನಾಲ್ಕು ದಿಕ್ಕುಗಳಿಗೂ ಹರಡಲು ವಿಲಂಬವಾಗಲಿಲ್ಲ. ಶಿರೋಮಣಿಯ ಆನಂದಕ್ಕೆ ಮೇರೆಯಿಲ್ಲ. ಅವನು ಹೇಗೆ ಹೇಗೋ ಬಟ್ಟೆ ಧರಿಸಿಕೊಂಡು ಬಡಿಗೆಯೂರುತ್ತ ರಾಯಮಹಾ ಶಯನ ಸಭಾಭವನಕ್ಕೆ ಹೋಗಿ ಹಾಜರಾದ.

ನಿರ್ಮಲನನ್ನು ಬೀಳ್ಕೊಟ್ಟ ಪ್ರಸಂಗವು ಅಷ್ಟೊಂದು ಸಮಾಧಾನ ಕರವಾಗಿ ಜರುಗಲಿಲ್ಲವೆಂದು ಜನಾರ್ದನನ ಮುಖಮುದ್ರೆ ಗಂಭೀರ ವಾಗಿತ್ತು. ಆದರೆ ಆ ಕಡೆ ಗಮನಿಸುವುದಕ್ಕೆ ಶಿರೋಮಣಿಯ ಮೈಮೇಲೆ ಎಚ್ಚರವೆಲ್ಲಿತ್ತು? ಆಶೀರ್ವದಿಸುವುದಕ್ಕಾಗಿ ಬಲಗೈ ಮೇಲೆತ್ತಿ ಉತ್ಸಾ ಹದ ಸ್ವರದಲ್ಲಿ ಅವನೆಂದ: "ದೀರ್ಘಜೀವಿಯಾಗು ಬಂಧೂ! ಈ ಜಗತ್ತಿ ನಲ್ಲಿ ನೀನೊಬ್ಬ ನಿಜವಾಗಿಯೂ ಬುದ್ಧಿವಂತ!"

ಮುಖವೆತ್ತಿ ನೋಡಿ ಜನಾರ್ದನನು ಪ್ರಶ್ನಿಸಿದ: ಏನು ಗೊಂದಲ ಮತ್ತೆ?"

"ಗೊಂದಲ ಏತರದು? ಹತ್ತು ಊರುಗಳಿಗೂ ಸುದ್ದಿ ಹಬ್ಬಿದೆ. ಕೀಲಿಕೈ, ಕಾಗದ ಪತ್ರ ಎಲ್ಲವನ್ನೂ ಕೊಟ್ಟುಬಿಟ್ಟು ಹುಡುಗಿ ಹೊರಟು ಹೋಗುತ್ತಿದ್ದಾಳಂತೆ! ನಿಜವಾಗಿಯೂ ನಿನಗೆ ತಿಳಿದಿಲ್ಲವೆ?"

ತಿಂಗಳ ಬಡ್ಡಿಯಲ್ಲಿ ಕೊಂಚವನ್ನಾದರೂ ಬಿಡಿಸಿಕೊಳ್ಳುವುದಕ್ಕಾಗಿ, ಬೆಳಗಿನಿಂದಲೂ ಅಂಗಲಾಚಿ ಬೇಡಿಕೊಳ್ಳುತ್ತ ಒಬ್ಬ ಗೃಹಸ್ಥನು ಕುಳಿತಿದ್ದ. ಅವನೆಂದ: "ಸರಿ ಸರಿ! ಧನಿಯರಿಗೆ ಗೊತ್ತಿಲ್ಲದ್ದು ಸೇವಕರಿಗೆ ಗೊತ್ತಾಗುತ್ತದಂತೆ! ಅಲ್ಲ ಶಿರೋಮಣಿ ಮಹಾಶಯರೇ, ಇದನ್ನೆಲ್ಲ ಮಾಡಿದವರು ಬೇರೆ ಯಾರು? ರಾಯಮಹಾಶಯರೇ ಅಲ್ಲವೇ?"

ಶಿರೋಮಣಿ ಕುಳಿತುಕೊಳ್ಳುತ್ತ ನುಡಿದ: "ಅದೆಲ್ಲ ಸರಿ. ಮುಖ್ಯ ಕೀಲಿಕೈ ಜಮಾದಾರರ ಕೈಸೇರಿದೆಯಲ್ಲವೆ? ಮಗ ಮಹಾ ಕುಡುಕ! ಕೊನೆಗೆ ದೇವಿಯ ಬೆಳ್ಳಿ ಬಂಗಾರ ಕಲಾಲರ ಪೆಟ್ಟಿಗೆ ಸೇರುವುದೇ! ಪಾಪ ಶಿಖರಕ್ಕೇ ಮುಟ್ಟಿತೆನ್ನಬೇಕು!"

ಕ್ರಮಕ್ರಮವಾಗಿ ಒಬ್ಬೊಬ್ಬರೇ ಬಂದು ಸೇರತೊಡಗಿದರು. ಎಲ್ಲರ ಅಭಿಪ್ರಾಯದ ಮೇರೆಗೆ, ಶಕ್ಯವಿದ್ದಷ್ಟು ಬೇಗನೆ ಜಮಾದಾರನ ಕೈಯಿಂದ ಕೀಲಿಕೈಯನ್ನು ಪಡೆಯಬೇಕೆಂದು ತೀರ್ಮಾನವಾಯಿತು. ಮೂರನೆಯ ಪ್ರಹರದಲ್ಲಿ ವಾಮಕುಕ್ಷಿಯಾದ ಬಳಿಕ ಧನಿಯರ ಮದ್ಯಪಾನ ಆರಂಭವಾಗುತ್ತದೆ. ಮತ್ತು ತಲೆಗೇರುವುದರೊಳಗೇ ಬೀಗದ ಕೈಯನ್ನು ದೊರಕಿಸಿಕೊಳ್ಳುವುದು ಅಗತ್ಯವಾಗಿತ್ತು. ತಮ್ಮ ದುರ್ಲಕ್ಷ್ಯದಿಂದಲೇ ಕೀಲಿಕೈ ಜಮಾದಾರನ ಕೈಗೆ ಹೋಯಿತೆಂದು ತಪ್ಪೊಪ್ಪಿಕೊಂಡು ಜನಾರ್ದನರಾಯನೆಂದ: "ಎಲ್ಲ ಹಂಚಿಕೆಗಳೂ ಸರಿಯಾಗಿಯೆ ಕೈಗೂಡಿದ್ದವು. ಈ ಮನುಷ್ಯ ಮಧ್ಯದಲ್ಲಿಯೇ ಬೀಗದ ಕೈ ಹೊಡೆದುಕೊಂಡಾನೆಂಬುದು ನನ್ನ ಗಮನಕ್ಕೆ ಬರಲಿಲ್ಲ. ಈಗ ಅವನು ಒಳ್ಳೆಯ ಮಾತಿನಿಂದ ಕೊಟ್ಟನೋ ಸಟ್ಟಗೆ. ಎಂಟು ಹತ್ತು ದಿವಸ ಹೋದರೆ, ಪೆಟ್ಟಿಗೆಯೊಳಗೆ ಮುಂಚೆಯೇ ಏನೂ ಇದ್ದಿಲ್ಲ ಎಂದೂ ಹೇಳಿಯಾನು. ನೋಡಲಿ ಅದು ಹೇಗೇ ಇರಲಿ,

ದೇವಿಯು ಸಂಪತ್ತಿಯನ್ನು ಎತ್ತಿಹಾಕುವವಳಲ್ಲ, ಒಂದು ಪೈಯನ್ನೂ ಮುಟ್ಟುವವಳಲ್ಲ ಎಂಬುದು ನನಗೆ ಗೊತ್ತಿದೆ."

ಇದು ಎಲ್ಲರಿಗೂ ಹೌದೆನಿಸಿತು. ಈ ಮನುಷ್ಯನಿಗಿಂತ ಅವಳೇ ಇದ್ದರೂ ಚೆನ್ನಾಗಿತ್ತು ಎಂದೂ ಕೆಲವರೆಂದರು.

ಎಲ್ಲರೂ ಕೂಡಿಕೊಂಡು ಒಳ್ಳೇ ಸಂಭ್ರಮದಿಂದ ಜಮೀದಾರನ ಶಾಂತಿಕುಂಜಕ್ಕೆ ತೆರಳಿದರು. ಜಮೀದಾರನು ಹೊರಗಿನ ಕೋಣೆಯಲ್ಲಿ ಕುಳಿತಿದ್ದ. ಮದ್ಯದ ಸೀಸೆ ಗ್ಲಾಸುಗಳ ಬದಲು ಅವನೆದುರಿಗೆ ದೊಡ್ಡ ದೊಡ್ಡ ಲೆಕ್ಕದ ಪುಸ್ತಕಗಳಿದ್ದವು. ಹತ್ತಿರವೇ ಕುಳಿತು ಅವನ ಗೆಳೆಯ ಪ್ರಫುಲ್ಲನು ವೃತ್ತಪತ್ರಿಕೆ ಓದುತ್ತಲಿದ್ದ. ಅವನೇ ಎಲ್ಲರನ್ನು ಬರ ಮಾಡಿಕೊಂಡ.

ಮಾತನಾಡುವುದಕ್ಕೆ ಎಲ್ಲಕ್ಕೂ ಮುಂದೆ, ಕ್ಷಮೆ ಬೇಡುವುದಕ್ಕೆ ಎಲ್ಲಕ್ಕೂ ಹಿಂದೆ, ಎಂಬುದು ಶಿರೋಮಣಿಯ ಬಿರುದು. ಈಗಲೂ ಮೊದಲು ಮಾತನಾಡಿದುದು ಆತನೇ. "ಧನಿಯರ ನಿದ್ದೆಗೆ ತೊಂದರೆ ಯಾಗಬಾರದೆಂದು ನಾವೆಲ್ಲರೂ ಕೊಂಚ ತಡವಾಗಿಯೇ—"

ಲೆಕ್ಕದ ಪುಸ್ತಕವನ್ನು ಪಕ್ಕಕ್ಕೆ ಸರಿಸಿ ಜೀವಾನಂದನು ನಗುತ್ತ ನುಡಿದ: "ನೀವು ಬೇಗನೆ ಬಂದಿದ್ದರೂ ಧನಿಯರ ನಿದ್ದೆಗೆ ಅಡ್ಡಿಯಾಗು ತ್ತಿರಲಿಲ್ಲ, ಶಿರೋಮಣಿ ಮಹಾಶಯ! ಏಕೆಂದರೆ, ಧನಿಯರು ಹಗಲು ಮಲಗುವುದಿಲ್ಲ."

"ಆದರೆ ನಾವು ಕೇಳಿದ್ದೇವೆ—"

"ಏನು ಕೇಳಿದ್ದೀರಿ? ಸತ್ಯವಲ್ಲದ್ದನ್ನು ನೀವು ಅದೆಷ್ಟೋ ಕೇಳಿರು ತ್ತೀರಿ, ಅಲ್ಲದೆ ಬಹಳಮಟ್ಟಿಗೆ ಸುಳ್ಳನ್ನೇ ಆಡುತ್ತಿರುತ್ತೀರಿ. ಭೈರವಿಯು ಮತ್ತು ನನ್ನ ಸಂಬಂಧದ ಸಂಗತಿಯನ್ನೇ ತೆಗೆದುಕೊಳ್ಳಿರಿ—" ಎಂದು ಅವನು ನಕ್ಕ. ಸಭಿಕರು ಕಕ್ಕಾವಿಕ್ಕಿಯಾದರು.

"ಇಷ್ಟು ಅವಸರದಿಂದ ಬಂದ ಕೆಲಸವೇನು?" ಎಂದು ಜೀವಾ ನಂದನು ಪ್ರಶ್ನಿಸಿದ.

ಉದ್ರೇಕಗೊಂಡ ಮನವನ್ನು ಸಾವರಿಸಿಕೊಂಡು ಜನಾರ್ದನ ರಾಯನು ಮಾತನಾಡಲು ಮುಂದಾದ. ಇದರೊಳಗೆ ಹೆದರುವಂತಹ

ದೇಸಿದೆ ಎಂದವನಿಗೆನಿಸಿತು. ಅವನೆಂದ: "ದೇವಸ್ಥಾನ ಸಂಬಂಧದ ಗೊಂದಲ ಇಷ್ಟು ಬೇಗನೆ ಮುಗಿದೀತೆಂದು ಭಾವಿಸಿದ್ದಿಲ್ಲ. ನಿರ್ಮಲನೇನು ಆತಂಕ ತಂದಿದ್ದ – ಅವನೇನು ಅಡ್ಡಬಂದಿದ್ದ—"

"ಅದು ಹೇಗೆ ಸರಳವಾಯಿತು?"

ಜೀವಾನಂದನ ಈ ಮಾತಿನ ಮರ್ಮವು ರಾಯನಿಗೆ ತಿಳಿಯಿತು. ಶಿರೋಮಣಿಯ ಲಕ್ಷ್ಯಕ್ಕೆ ಮಾತ್ರ ಬರಲಿಲ್ಲ. ಒಳ್ಳೇ ಉಬ್ಬಿನಿಂದ ಅಭಿಮಾನದಿಂದ ಅವನೆಂದ: "ಎಲ್ಲವೂ ದೇವಿಯ ಇಚ್ಛೆ ಧನಿಯರೆ. ಸರಳ ಆಗಲೇ ಬೇಕು! ಪಾಪದ ಭಾರ ದೇವಿಗೆ ಹೇಗೆ ಸಹನವಾದೀತು?"

ಸಮ್ಮತಿಯನ್ನು ಸೂಚಿಸುತ್ತ ಜೀವಾನಂದನೆಂದ: "ಸರಿ ಸರಿ! ಮತ್ತೇನು ಮುಂದೆ?"

"ಪಾಪವಂತೂ ದೂರಾಯಿತು. ಇನ್ನು – ಹೇಳು ಜನಾರ್ದನ, ಧನಿಯರಿಗೆ ಎಲ್ಲವನ್ನೂ ತಿಳಿಸಿ ಹೇಳಲ್ಲ" ಎಂದು ನುಡಿದು ಶಿರೋಮಣಿ ರಾಯನಿಗೆ ಕೈಸನ್ನೆ ಮಾಡಿದ.

ಚಕಿತನಾಗಿ ರಾಯನೆಂದ: "ಗುಡಿಯ ಬೀಗದ ಕೈಯನ್ನು ಪುರೋಹಿತ ನಮ್ಮೆದುರಿಗೇ ತಾರಾದಾಸರ ಕೈಯೊಳಗೆ ಕೊಟ್ಟ. ಈಪೊತ್ತು ಮುಂಜಾನೆ ಅವರೇ ಬಾಗಿಲು ತೆರೆದರು. ನಾವು ಕೇಳಿದ್ದೇವೆ. ಪೆಟ್ಟಿಗೆಯ ಕೀಲಿಕೈ ನಿಮ್ಮ ಕಡೆ ಕೊಟ್ಟಿದ್ದಾಳಂತೆ ಷೋಡಶಿ."

"ನಿಜ, ಕೊಟ್ಟಿದ್ದಾಳೆ! ಅಲ್ಲದೆ ಗಳಿಕೆಬಳಕೆಯ ಲೆಕ್ಕದ ಪುಸ್ತಕವನ್ನೂ ಕೊಟ್ಟಿದ್ದಾಳೆ."

"ಹುಡುಗಿ ಇನ್ನೂ ಇಲ್ಲಿಯೇ ಇದ್ದಾಳೆ ನಿಜ. ಆದರೆ ಯಾವಾಗ ಎಲ್ಲಿಗೆ ಹೊರಟು ಹೋಗುವಳೋ ನಿಯಮವಿಲ್ಲ" ಎಂದು ಶಿರೋಮಣಿ ನುಡಿದ.

ಕ್ಷಣಹೊತ್ತು ಮುದುಕನ ಮೋರೆಯನ್ನೇ ನೋಡುತ್ತಿದ್ದು ಜೀವಾನಂದನು "ನಿಮಗೇಕೆ ಅದರ ಉಸಾಬರಿ?" ಎಂದು ಕೇಳಿದ.

ಉತ್ತರಕ್ಕಾಗಿ ಅವನು ಜನಾರ್ದನನ ಕಡೆಗೆ ದೃಷ್ಟಿಯನ್ನು ಚೆಲ್ಲಿದ. ಅವನು ಹೇಳಿದ: "ಮಹತ್ವದ ಕಾಗದ ಪತ್ರಗಳು, ಬೆಲೆಯುಳ್ಳ ವಸ್ತುಗಳು, ದೇವಿಯ ಆಭರಣಗಳು ಮೊದಲಾದುವು ಯಾವುಯಾವಿವೆ ಎಂಬುದು ಊರಿನ ಹಳೇ ಜನಕ್ಕೆ ಗೊತ್ತಿದೆ. ಶಿರೋಮಣಿ ಮಹಾಶಯರೆನ್ನುತ್ತಾರೆ–

ಷೋಡಶಿ ಇಲ್ಲಿ ಇರುವುದರೊಳಗೇ ಅವುಗಳನ್ನು ಪ್ರಮಾಣಿಸಿ ನೋಡಿಕೊಳ್ಳ ಬೇಕು. ಒಂದು ವೇಳೆ—"

"ಒಂದು ವೇಳೆ ಏನು? ಇದೇ ಹೌದಲ್ಲವೊ? ಒಳಗೆ ಏನೂ ಹೊರಡ ಲಿಲ್ಲವೆಂದು ತಿಳಿಯಿರಿ. ಆ ಕೊರತೆಯನ್ನು ತುಂಬಿಸಿಕೊಳ್ಳುವಿರಿ ಹೇಗೆ?"

ತಟ್ಟನೆ ಏನೆಂದು ಉತ್ತರ ಕೊಡಬೇಕೆಂಬುದು ಜನಾರ್ದನನಿಗೆ ಹೊಳೆಯಲಿಲ್ಲ. ಅವನೆಂದ: "ಆದರೆ ಏನೆಂಬುದು ತಿಳಿದಾದರೂ ತಿಳಿಯು ವುದು ಧನಿಯರೇ."

"ಆದರೆ ನನಗೆ ಈವೊತ್ತು ಸಮಯವಿಲ್ಲ ರಾಯಮಹಾಶಯರೇ."

ಜನಾರ್ದನರಾಯನಿಗೆ ಒಳಗೊಳಗೆ ಸಂತೋಷವಾಯಿತು. ಇಂತ ಹದೇ ಏನಾದರೂ ಉತ್ತರ ಬರುವುದೆಂದು ಅವನು ಎಣಿಸಿದ್ದ.

ಶಿರೋಮಣಿ ಅಸ್ವಸ್ಥನಾಗಿ ನುಡಿದ: "ಜನಾರ್ದನರಾಯನ ಕೈಯಲ್ಲಿ ಬೀಗದ ಕೈ ಕೊಟ್ಟರೆ ಸಂಜೆಯೊಳಗಾಗಿ ಎಲ್ಲವೂ ಸರಿಯಾಗಿ ಇವೆಯೋ ಹೇಗೆಂಬುದನ್ನು ನೋಡಿಕೊಳ್ಳುತ್ತೇವೆ. ಧನಿಯರ ಮೇಲಿನ ಹೊಣೆ ಅಷ್ಟು ಹಗುರಾದಂತಾಗುವುದು. ಅವಳು ಓಡಿಹೋಗುವ ಮೊದಲು ಏನಿದೆ ಏನಿಲ್ಲ ಎಂಬುದು ತಿಳಿಯುತ್ತದೆ. ಏಕಪ್ಪ, ಇದೇ ಅಲ್ಲವೆ ಹೇಳು ವುದು?"

ಈ ಪ್ರಸ್ತಾವಕ್ಕೆ ಎಲ್ಲರೂ ತಲೆದೂಗಿದರು. ಕೀಲಿಕೈ ಇದ್ದ ವ್ಯಕ್ತಿ ಮಾತ್ರ ಇದಕ್ಕೊಪ್ಪಲಿಲ್ಲ. ಅವನು ಹುಸಿನಗೆ ನಕ್ಕು ನುಡಿದ: "ಇಷ್ಟೇಕೆ ಗಾಬರಿಯಾಗುತ್ತೀರಿ ಶಿರೋಮಣಿ ಮಹಾಶಯರೇ? ಅವುಗಳಲ್ಲಿ ಕೆಲವು ಹೋಗಿದ್ದವೆಂದು ತಿಳಿಯಿರಿ. ಆ ಭಿಕ್ಷುಕಿಯಿಂದ ಪಡೆಯುವ ಆಶೆಯಂತೂ ಇಲ್ಲ. ನೀವೀಗ ಹೋಗಿರಿ. ನನಗೆ ಬಿಡುವಾದಾಗ ರುಜುವಾತು ಮಾಡಿ ಕೊಳ್ಳುವುದಕ್ಕಾಗಿ ನಿಮ್ಮೆಲ್ಲರನ್ನೂ ಕರೆಸುತ್ತೇನೆ."

ಮೀನು ಗಾಳಕ್ಕೆ ಸಿಕ್ಕಲಿಲ್ಲವೆಂದು ಎಲ್ಲರಿಗೂ ಸಿಟ್ಟು ಬಂದಿತು. ರಾಯಮಹಾಶಯನು ಎದ್ದುನಿಲ್ಲುತ್ತ ನುಡಿದ: "ಆದರೆ ಒಂದು ಪ್ರಕಾರದ ಹೊಣೆಯಿದೆ—"

ತಟ್ಟನೆ ಒಪ್ಪಿ ಜೀವಾನಂದನೆಂದ: "ಸರಿಯಾಗಿ ಹೇಳಿದಿರಿ ರಾಯ ಮಹಾಶಯ! ಆ ಹೊಣೆ ನನ್ನ ಮೇಲೆಯೇ ಇದೆಯೆನ್ನಿರಿ."

ಹೊರಗೆ ಬಂದಮೇಲೆ ರಾಯಮಹಾಶಯನನ್ನು ಚಿವುಟಿ ಶಿರೋಮಣಿ ನುಡಿದ: "ನೋಡಿದೆಯಾಪ್ಪ, ಕುಡಕಮಗ ಅಂತ ಹತ್ತಿಗೊಡುವುದಿಲ್ಲ. ಆಡುವ ಮಾತು ಕೇಳಿದೆಯಾ, ಒಗಟ ಇದ್ದಹಾಗೆ!– ಹೆಂಡ ಒಳಗೆಲ್ಲಾ ಕೊಳೆಯಿಸಿಬಿಟ್ಟಿದೆ. ಹೆಚ್ಚುದಿನ ಬದುಕುವುದಿಲ್ಲ ಖಂಡಿತ!"

"ಹೌದು. ನಮಗೆ ಯಾವ ಅಂಜಿಕೆಯಿತ್ತೋ ಅದೇ ಅನುಭವಕ್ಕೆ ಬಂದ ಹಾಗಾಯಿತು."

"ಇನ್ನು ಎಲ್ಲವೂ ಹೆಂಡದಂಗಡಿಯ ಪಾಲೇ ಆಗುವುದು! ಹೋಗವಾಗ ನಮಗೆ ಚೆನ್ನಾಗಿಯೇ ಕೈತೋರಿಸಿದಳು ಮಗಳು!"

ಸಂಗಡಿದ್ದವರಲ್ಲಿ ಒಬ್ಬನು "ಧನಿಯರು ಇನ್ನು ಮೇಲೆ ಬೀಗದ ಕೈಯನ್ನೇನೂ ಕೊಡುವುದಿಲ್ಲ!" ಎಂದು ನುಡಿದ.

ಶಿರೋಮಣಿ ರೇಗಿ ನುಡಿದ: "ಇನ್ನು ಮೇಲೆ? ಇನ್ನು ಮೇಲೆ ಯಾರಾದರೂ ಹೋದರೆ ಅವರನ್ನು ಕತ್ತುಹಿಡಿದು ಬಾಯಿ ತೆರಸಿ ಹೆಂಡ ಹೊಯ್ದೇ ಬಿಡುತ್ತಾನೆ!" ಈ ಮಾತನ್ನು ಆಡುವಾಗ ಶಿರೋಮಣಿಯ ಮೈಮೇಲೆ ಮುಳ್ಳೆದ್ದವು.

ತೆರೆದ ಬಾಗಿಲ ಕಡೆಗೆ ಶೂನ್ಯದೃಷ್ಟಿಯಿಂದ ನೋಡುತ್ತ ಜೀವಾನಂದನು ಕುಳಿತಿದ್ದ. ಪ್ರಫುಲ್ಲನೆಂದ: "ಈ ಮತ್ತೊಂದು ಉಪದ್ವ್ಯಾಪವನ್ನು ಏಕೆ ಮೈಮೇಲೆ ಹಾಕಿಕೊಂಡಿರಿ ಅಣ್ಣಾ? ಕೀಲಿಕೈ ಅವರಿಗೆ ಕೊಟ್ಟುಬಿಟ್ಟಿದ್ದರೆ ತಂಟೆಯೇ ಇರಲಿಲ್ಲ."

ಜೀವಾನಂದನು ಅವನ ಕಡೆ ನೋಟ ಹೊರಳಿಸಿ ಹೇಳಿದ: "ತಂಟೆ ಮುಗಿಯುತ್ತಿರಲಿಲ್ಲ ಪ್ರಫುಲ್ಲ. ಹಾಗಿದ್ದರೆ ಬೀಗದಕೈ ಕೊಟ್ಟುಬಿಡುತ್ತಿದ್ದೆ ನಾನು. ಏನಾದರೂ ಗೊಂದಲವಾಗಬಹುದೆಂದೇ ಅವಳು ನಿನ್ನೆ ರಾತ್ರಿ ಅದನ್ನು ನನ್ನ ಕೈಯಲ್ಲಿ ಕೊಟ್ಟಳು."

ಪ್ರಫುಲ್ಲನಿಗೆ ಅವನ ಮಾತಿನ ಮನವರಿಕೆಯಾಗಲಿಲ್ಲವೇನೋ. "ಏನಿವೆ ಆ ಪೆಟ್ಟಿಗೆಯಲ್ಲಿ?" ಎಂದು ಅವನೆಂದ.

ನಸುನಕ್ಕು ಜೀವಾನಂದನು ಹೇಳಿದ: "ಇಂದು ಬೆಳಗ್ಗೆ ಲೆಕ್ಕದ ಪುಸ್ತಕದಲ್ಲಿ ಅದನ್ನೇ ನೋಡುತ್ತಲಿದ್ದೆ. ಮೊಹರು, ರೂಪಾಯಿ, ಪಚ್ಚೆ, ಹವಳ, ಮುತ್ತಿನ ಹಾರಗಳು, ಕಿರೀಟ, ನಾನಾತೆರದ ಆಭರಣಗಳು

ಕೆಲವೊಂದು ಸನದುಗಳು, ಕಾಗದ ಪತ್ರಗಳು; ಬೆಳ್ಳಿ ಬಂಗಾರದ ಪಾತ್ರೆಗಳು ಇತ್ಯಾದಿ–ಅಷ್ಟೋ ಇಷ್ಟೋ ಇಲ್ಲ! ಯಾವಾಗಿನಿಂದಲೋ ಕೂಡಿಟ್ಟ ಸಂಪತ್ತಿಯದು. ಚಂಡೀಗಡದ ದೇವಿಯ ಸಂಸ್ಥಾನದಲ್ಲಿ ಇಷ್ಟು ಐಶ್ವರ್ಯ ಇದ್ದೀತೆಂದು ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಕಳ್ಳರು ಕಾಕರ ಭೀತಿಯಿಂದ ಈ ಭೈರವಿ ಯಾರಿಗೂ ಇದರ ಸುಳಿವು ಹತ್ತಗೊಟ್ಟಿಲ್ಲ.

ಪ್ರಫುಲ್ಲನು ಬೆರಗಾಗಿ ನುಡಿದ: "ಇದೇನು ಹೇಳುವಿರಿ? ಅದರ ಕೀಲಿಕೈ ನಿಮ್ಮ ಕಡೆಗೇ? ಒಬ್ಬನೇ ಒಬ್ಬ ಮಗನನ್ನು ಡಾಕಿನಿಯ ಕೈಯೊಳಗೆ ಕೊಡುವುದೇ?"

ಜೀವಾನಂದನು ಕೋಪಗೊಳ್ಳಲಿಲ್ಲ. "ನೀನೆನ್ನುವುದೇನು ತೀರ ಸುಳ್ಳಲ್ಲ. ಇಷ್ಟು ಐಶ್ವರ್ಯವನ್ನು ನೋಡಿದಾಗ ನನ್ನದು ನನಗೇ ವಿಶ್ವಾಸವೆನಿಸಲಿಲ್ಲ" ಎಂದು ನುಡಿದು ಕೊಂಚ ಯೋಚಿಸಿ ಅವನೆಂದ: "ಈ ಹೊಣೆ ನನಗೆ ಬೇಡವಾಗಿತ್ತು ಪ್ರಫುಲ್ಲ. ಜನಾರ್ದನರಾಯರ ಕೈಯೊಳಗೆ ಬೀಗದ ಕೈ ಕೊಡೆಂದು ಎಷ್ಟೋ ಆಗ್ರಹದಿಂದ ಹೇಳಿದೆ. ಆದರೂ ಕೇಳದೆ ಅವಳು ಬಲವಂತದಿಂದಲೇ ನನ್ನ ಕಡೆ ಕೊಟ್ಟಳು."

ಸ್ವಲ್ಪ ಹೊತ್ತು ವಿಚಾರಮಾಡಿ "ಅದೇಕೆ?" ಎಂದು ಪ್ರಫುಲ್ಲನು ಕೇಳಿದ.

"ಇಷ್ಟು ನಿಂದೆಯನ್ನು ಹೊತ್ತದ್ದೇ ಸಾಕು, ಕಳ್ಳತನದ ಕಲಂಕವೊಂದು ಹತ್ತುವುದು ಬೇಡ ಎಂದು ಅವಳಿಗೆ ಎನಿಸಿರಬೇಕು. ಈ ಕಳ್ಳರನ್ನು ಅವಳು ಚೆನ್ನಾಗಿಯೇ ಬಲ್ಲಳು."

"ಆದರೆ ನಿಮ್ಮನ್ನು ಮಾತ್ರ ಅವಳು ಅರಿತುಕೊಳ್ಳಲಿಲ್ಲ."

ಜೀವಾನಂದನು ನಕ್ಕ–ಆ ನಗೆ ಸಂತೋಷದ್ದಲ್ಲ. ಅವನೆಂದ: "ಆ ತಪ್ಪು ಅವಳದು, ನನ್ನದಲ್ಲ. ಅವಳ ವಿಷಯದಲ್ಲಿ ನಾನು ಎಷ್ಟೇ ಅಪರಾಧ ಮಾಡಿರಲಿ, ಮೊದಲಿನಿಂದ ಕೊನೆಯ ವರೆಗೂ ನನ್ನನ್ನು ಅರಿತುಕೊಳ್ಳದ ತಪ್ಪನ್ನು ಅವಳೆಂದೂ ಮಾಡಲಿಲ್ಲ ಈ ಜಗತ್ತು ಮಹಾ ಅದ್ಭುತ! ಅದಕ್ಕಿಂತಲೂ ಅದ್ಭುತವಾದದ್ದು ಮಾನವನ ಮನಸ್ಸು! ಎಲ್ಲಿಂದ ಎಲ್ಲಿಗೆ ಒಯ್ದೀತೆಂಬುದನ್ನು ಹೇಳಲಿಕ್ಕೆ ಬರುವುದಿಲ್ಲ. ಅವಳು ಹೇಳುವುದೇನು ಗೊತ್ತೇ ತಮ್ಮಾ? ಅವಳ ಕೈಯೊಳಗಿನ ಮಾರ್ಫಿಯಾ ನಾನು ಕಣ್ಣು ಮುಚ್ಚಿ

ಕುಡಿದದ್ದನ್ನು ನಿನ್ನ ಮುಂದೆ ಹೇಳಲಿಲ್ಲವೇ? ನನ್ನಲ್ಲಿ ಅವಳಿಟ್ಟ ನಂಬಿಗೆಗೆ ಆ ಒಂದು ಸಂಗತಿಯೇ ಆಧಾರ. ಅದೇ ಅವಳ ಕೊನೆಯ ಯುಕ್ತಿವಾದ. ಆದರೆ ನಾನು ಆ ರಾತ್ರಿ ನಿರುಪಾಯನಾಗಿದ್ದೆ. ಹಾಗೂ ಸಾಯುವುದೇ, ಹೀಗೂ ಸಾಯುವುದೇ ಅದರ ಹೊರತು ಗತ್ಯಂತರವೇ ಇರಲಿಲ್ಲ. ಆದರೆ ಷೋಡಶಿ ಅದನ್ನು ಎಣಿಸುವುದೇ ಇಲ್ಲ. ಅವಳ ಮನಸಿನಲ್ಲಿ ನೆಲಸಿದ್ದು ಒಂದೇ ವಿಷಯ—ಪ್ರಾಣವನ್ನು ನಿಃಶಂಕವಾಗಿ ತನ್ನ ಕೈಗೆ ಒಪ್ಪಿಸಿದವನ ಬಗ್ಗೆ ಅಪನಂಬಿಗೆ ತೋರಿಸುವುದು ಹೇಗೆ? ಸರಿ! ಅಷ್ಟೆ! ಇದ್ದುಬಿದ್ದುದನ್ನೆಲ್ಲ ಅವಳು ಕಣ್ಣುಮುಚ್ಚಿ ನನಗೆ ಒಪ್ಪಿಸಿಬಿಟ್ಟಳು. ಜಗತ್ತಿನೊಳಗೆ ಭಯಂಕರ ಕೆಟ್ಟ ಮನುಷ್ಯರು ಕೂಡ ಒಮ್ಮೊಮ್ಮೆ ತದ್ರೂಪ ಹೀಗೆಯೇ ತಪ್ಪು ಮಾಡುತ್ತಾರೆ ಪ್ರಫುಲ್ಲ! ಹೀಗಾಗುವುದರಿಂದೇ ಸೆಟ್ಟಗೆ—ಇಲ್ಲದಿದ್ದರೆ ಇಡೀ ಜಗತ್ತೇ ಸಹರಾ ಉಸುಕಿನ ಕಾಡಾಗುತ್ತಿತ್ತು. ರಸಿಕತೆಯ ಒಂದು ಹನಿಗೂ ಸ್ಥಳ ವಿ[illegible]”

ಪ್ರಫುಲ್ಲನು ತಲೆದೂಗುತ್ತ ಹೇಳಿದ: “ಅತ್ಯಂತ ಸತ್ಯವನ್ನೇ ಹೇಳಿದಿರಿ ಅಣ್ಣಾ. ಇನ್ನು ಹೀಗೆ ಮಾಡಿರಿ. ಮೊದಲು ಈ ಪುಸ್ತಕ ಹರಿದು ಹಾಕಿರಿ. ತಾರಾದಾಸ ಭಟ್ಟರನ್ನು ಕರೆಯಿಸಿ ಬೆದರಿಸಿರಿ. ಸಿಕ್ಕ ಮೊಹರುಗಳಿಂದ ನಾಲೊಮನ್ ಸಾಹೇಬರ ಸಾಲವನ್ನು ಹರಿದುಬಿಟ್ಟರೆ, ರಸಿಕತೆಯ ಒಂದು ಹನಿಯೇ ಏಕೆ, ಮುಸಲಧಾರೆಯ ಮಳೆಯೇ ಸುರಿಯುವುದು!”

“ಪ್ರಫುಲ್ಲ, ಇದಕ್ಕಾಗಿಯೇ ನಾನು ನಿನ್ನನ್ನು ಮೆಚ್ಚಿದ್ದು!” ಎಂದ ಜೀವಾನಂದ.

ಪ್ರಫುಲ್ಲನು ಕೈಜೋಡಿಸಿ ಹೇಳಿದ: “ಈ ಮೆಚ್ಚಿಕೆಯನ್ನು ಈ ಸಂದರ್ಭದಲ್ಲಿ ಕಾರ್ಯರೂಪಕ್ಕೆ ತರಬೇಕು ಅಣ್ಣಾ. ನಿಮ್ಮ ರಸಿಕತೆಯ ತಡಸಲು ಒಂದೇ ಸಮನೆ ಧಬಧಬ ಸುರಿಯುತ್ತಿರಲಿ. ಆದರೆ ಮೆಚ್ಚಿಸುವ ಕೆಲಸದಲ್ಲಿ ಈ ಸೇವಕನ ಗಂಟಲೊಣಗಿ ತರಗಾಗಿದೆ. ಇನ್ನು ಎಲ್ಲಿಯಾದರೂ ಬೇರೆ ಕಡೆ ಹೋಗಿ ಒಂದು ತುತ್ತು ಅನ್ನ ಸಾರಿನ ವ್ಯವಸ್ಥೆ ಮಾಡಿಕೊಳ್ಳಬೇಕು. ನಾಳೆ ನಾಡಿದರೊಳಗೆ ಈ ಸ್ಥಳ ಬಿಡುತ್ತೇನೆ.”

ಜೀವಾನಂದನು ನಕ್ಕು ನುಡಿದ: “ಪೂರಾ ಬಿಟ್ಟುಬಿಡುತ್ತೀಯಾ? ಆದರೆ ಮೊದಲು ಹೀಗೆಷ್ಟು ಸಾರಿ ಹೋಗಿದ್ದಿ ಪ್ರಫುಲ್ಲ?”

" ನಾಲ್ಕೈದು ಸಾರಿ " ಎಂದು ಪ್ರಫುಲ್ಲನೂ ಗಟ್ಟಿಯಾಗಿ ನಕ್ಕ. " ದೇವರು ಬಾಯಿ ಕೊಟ್ಟಿದ್ದಾನೆ, ದೊಡ್ಡ ಮನುಷ್ಯರ ಮೆಚ್ಚಿಕೆ ಸಂಪಾದಿಸಿ ಕಾಲ ಕಳೆಯುತ್ತೇನೆ. ನಡು ನಡುವೆ ನಾಲ್ಕಾರು ದೊಡ್ಡ ದೊಡ್ಡ ಮಾತುಗಳನ್ನಾಡಬಾರದಿದ್ದರೆ ಜಾತಿಗೆ ಬಟ್ಟೆ ಬಂದೀತು. ಈ ದೋಷ ಸಂಪೂರ್ಣ ನನ್ನದಲ್ಲ. ನಿಮ್ಮನ್ನು ಒಮ್ಮೆ ಏರಿಸಿ, ಒಮ್ಮೆ ಇಳಿಸಿ ಎಷ್ಟೋ ದಿವಸಗಳಿಂದ ಈ ದೇಹದ ರಕ್ತಮಾಂಸ ಬೆಳೆಯಿಸಿದ್ದೇನೆ. ಮೂಲರಕ್ತದ ನಾತವೂ ಉಳಿದಿಲ್ಲ. ಅಂತೆಯೆ ಈಗ ಒಂದು ಕೆಲಸ ಮಾಡಬೇಕೆಂದು ಮನಸಾಗುತ್ತಿದೆ. ಸಂಜೆಯ ಮಬ್ಬುಗತ್ತಲಲ್ಲಿ ಮುಖ ಮರೆಸಿಕೊಂಡು ಮೆಲ್ಲನೆ ಹೋಗಿ ಭೈರವೀ ಮಾತೆಯ ಪಾದಗಳ ಮೇಲೆ ದೊಪ್ಪನೆ ತಲೆಯಿಟ್ಟು ಬರುತ್ತೇನೆ. ಇಲ್ಲದಿದ್ದರೆ ಈವರೆಗೆ ನಿಮ್ಮಲ್ಲಿ ಸೇವಿಸುತ್ತ ಬಂದಿದ್ದ ಜಿಲೋ ಕೆಟ್ಟ ಪದಾರ್ಥಗಳು ಅರಗಲಿಕ್ಕಿಲ್ಲ. ಸೀಸೆಯ ಗಂಟಾಗಿ ಬಿಟ್ಟೀತು ಹೊಟ್ಟೆಯೊಳಗೆ."

" ಇಂದು ನಿನ್ನ ವಿನೋದ ಬುದ್ಧಿ ಸ್ವಲ್ಪ ಏರಿಕೆಯಲ್ಲಿದ್ದಂತೆ ಕಾಣುತ್ತದೆ ಪ್ರಫುಲ್ಲ." ನಗಲು ಪ್ರಯತ್ನಿಸುತ್ತ ಜೀವಾನಂದನೆಂದ.

ಪ್ರಫುಲ್ಲನು ಮತ್ತೆ ಕೈಜೋಡಿಸಿ ನುಡಿದ: " ಹಾಗಾದರೆ ಅಣ್ಣಾ, ಇಷ್ಟಕ್ಕೇ ಮಾತು ಸಾಕುಮಾಡುತ್ತೇನೆ. ನೀವು ಆ ದಿನ ವಿಲ್ಲು ಮಾಡಿದಿರಿ. ಅದರೊಳಗೆ ನನ್ನ ಹಾಸ್ಯವಿನೋದದ ಪೆನ್ಸ್ಯನ್ ಎಂತ ಐದಾರು ಸಾವಿರ ರೂಪಾಯಿ ನನ್ನ ಹೆಸರಿನಲ್ಲಿ ಬರೆದಿಟ್ಟಿದ್ದೀರಿ; ದಯವಿಟ್ಟು ಅವರ ಮೇಲೆ ಮಸಿಯ ಗೆರೆ ಎಳೆದುಬಿಡಿರಿ. ಚಂಡೀದೇವಿಯ ಹಣ ಕೈಗೆ ಬಂತೆಂದರೆ ಬೇಕಾದಷ್ಟು ಹಾಸ್ಯ ವಿನೋದ ನಿಮಗೆ ಸಿಕ್ಕಬಹುದು. ನನಗೆ ಮೆಚ್ಚು ಕೊಟ್ಟು ಇಷ್ಟು ಹಣ ಸುಮ್ಮನೆ ಹಾಳುಮಾಡಬೇಡಿರಿ."

" ಎಂದರೇನು ? ಈಗ ನಿಜವಾಗಿಯೂ ನನ್ನನ್ನು ಬಿಟ್ಟುಹೋಗುವವನೋ ನೀನು ? "

" ನನ್ನ ಈ ಸದ್ಬುದ್ಧಿ ಹೀಗೆಯೇ ಕಡೆತನಕ ಉಳಿಯಲೆಂದು ಹರಸಿರಿ " ಎಂದು ಪ್ರಫುಲ್ಲನು ಮತ್ತೆ ಕೈಜೋಡಿಸಿದ.

ಜೀವಾನಂದನು ಸುಮ್ಮನಿದ್ದ.

" ಅವಳೆಂದು ಹೋಗುತ್ತಾಳೆ? " ಪ್ರಫುಲ್ಲನು ಕೇಳಿದ.

“ ಗೊತ್ತಿಲ್ಲ.”

“ ಎಲ್ಲಿಗೆ ಹೋಗುತ್ತಾಳೆ ? ”

“ ಅದೂ ಗೊತ್ತಿಲ್ಲ.”

“ ಗೊತ್ತಾಗಬೇಕಾದ ಅಗತ್ಯವಾದರೂ ಏನು ಅಣ್ಣಾ ? ” ಮಾತನಾಡುತ್ತಿದ್ದಂತೆ ಪ್ರಫುಲ್ಲನ ಮುಖಮುದ್ರೆ ಬದಲಾಯಿತು. ಅವನೆಂದ: “ ಅಬ್ಬಬ್ಬಾ, ಏನು ಹೆಂಗುಸೊ ! ಗಂಡುಸರ ಅಪ್ಪನೋ ಏನೊ ! ಆ ದಿನ ಗುಡಿಗೆ ಹೋಗಿದ್ದೆ. ಎಷ್ಟೋ ಹೊತ್ತು ದಿಟ್ಟಿಸಿ ನೋಡಿದೆ. ಕಾಲಿನಿಂದ ತಲೆಯ ತನಕ ಕಲ್ಲಿನಿಂದಲೇ ಆದದ್ದೋ ಏನೋ ಎಂದೆನಿಸಿತು. ಪೆಟ್ಟು ಹಾಕಿ ತುಂಡರಿಸಿ ಒಗೆಯಲು ಬಂದೀತು, ಬೆಂಕಿಯಲ್ಲಿ ಕಾಸಿ ಬಡಿದು ತಿದ್ದಿಕೊಳ್ಳಲು ಬರುವ ವಸ್ತುವಲ್ಲ. ಈ ವಿಚಾರವನ್ನು ಬದಲಿಸಿಕ್ಕಾದರೆ ನೋಡಿರಿ.”

ಸಹಜವಾದ ಚೇಷ್ಟೆಯ ಸ್ವರದಲ್ಲಿ ಜೀವಾನಂದನು ಪ್ರಶ್ನಿಸಿದ: “ ಹಾಗಾದರೇನು ಪ್ರಫುಲ್ಲ, ನೀನೀ ಸಮಯದಲ್ಲಿ ನಿಜವಾಗಿಯೂ ಹೋಗುವವನೇ ? ”

“ ಗುರುಹಿರಿಯರ ಆಶೀರ್ವಾದವಿದ್ದರೆ ಈ ಮನಸಿನ ಇಚ್ಛೆ ಪೂರ್ಣವಾಗಬಹುದು.” ಅತ್ಯಂತ ವಿನಯದಿಂದ ಪ್ರಫುಲ್ಲನು ಉತ್ತರವಿತ್ತ.

“ ಹಾಗೆ ಆಗಲೂ ಬಹುದು. ಆದರೆ ಮುಂದೇನು ಮಾಡಬೇಕೆಂದು ನಿಶ್ಚಯಿಸಿದ್ದೀ ? ”

ನನ್ನ ಮನೋಗತವನ್ನು ಮೊದಲೇ ತಿಳಿಸಿದ್ದೇನೆ ನಿಮಗೆ – ಮೊದಲು ತುತ್ತನ್ನಕ್ಕೆ ಹಾದಿಯನ್ನು ಹುಡುಕುವವನಿದ್ದೇನೆ.”

ಕೆಲಹೊತ್ತು ಜೀವಾನಂದನು ಮೌನವಾಗಿದ್ದ. ಬಳಿಕ “ ನಿನಗೆ ಹೇಗೆ ಕಾಣುತ್ತದೆ ? ಷೋಡಶಿ ನಿಶ್ಚಯವಾಗಿ ಹೊರಟುಹೋಗಬಹುದೇ ?” ಎಂದು ಕೇಳಿದ.

“ ಹಾಗೆನಿಸುತ್ತದೆ ನಿಜವಾಗಿ. ಅದಕ್ಕೆ ಕಾರಣವಿದೆ. ಈ ಜಗತ್ತಿನಲ್ಲಿ ಎಲ್ಲರೂ ಪ್ರಫುಲ್ಲರಲ್ಲ. ಹೌದಣ್ಣಾ, ನಿಮಗೊಂದು ಸುದ್ದಿ ಹೇಳುವುದೇ ಮರೆಯಿತು. ನಿನ್ನೆ ಸಂಜೆ ಹೊತ್ತಿನಲ್ಲಿ ನದಿಯ ಕಡೆ ತಿರುಗಾಡಲಿಕ್ಕೆ ಹೋಗಿದ್ದೆ. ಅಕಸ್ಮಾತ್ ಫಕೀರ ಸಾಹೇಬನನ್ನು ಕಂಡೆ. ಒಂದು ದಿನ

ನೀವು ಬೇಟೆಯಾಡುತ್ತಿದ್ದಾಗ ನಿಮ್ಮ ಕೈಯೊಳಗಿನ ಬಂದೂಕು ಕಸಿದು ಕೊಂಡಿದ್ದನಲ್ಲ, ಅವ. ಸಲಾಮು ಮಾಡಿ ಅವನು ಯೋಗಕ್ಷೇಮ ವಿಚಾರಿಸಿದ. ನಾಲ್ಕು ಒಳ್ಳೇ ಮಾತುಗಳನ್ನಾಡಿ, ಅವನಿಂದ ಉತ್ತಮ ಗಿಡಮೂಲಿಕೆಗಳ ಔಷಧ ದೊರಕಿಸಿ, ಅವುಗಳ ಪೇಟೆಂಟ್ ತೆಗೆದುಕೊಂಡು ದುಡಿದು ನಾಲ್ಕು ದುಡ್ಡು ಗಳಿಸೋಣ ಎಂದುಕೊಂಡಿದ್ದೆ. ಆದರೆ ಮಾಗ ಬಲು ಬೆರಿಕೆ. ಏನೂ ಅಂತ ಹತ್ತಗೊಡಲಿಲ್ಲ. ಮಾತಿಗೆ ಮಾತು ಬಂದು, ಷೋಡಶಿಯನ್ನು ಕಾಣಲಿಕ್ಕೆ ಬಂದಿದ್ದೇನೆಂದು ಹೇಳಿದ. ಈಗವನು ಹೋಗುವವನಿದ್ದಾನೆ. ಇದೆಲ್ಲವನ್ನೂ ಬಿಟ್ಟುಕೊಟ್ಟು ಷೋಡಶಿ ಹೋಗುತ್ತಾ ಳೆಂದು ಅವನಿಂದಲೇ ತಿಳಿಯಿತು ನನಗೆ.”

ಜೀವಾನಂದನ ಕುತೂಹಲ ಕೆರಳಿತು. “ಆ ಉಪದೇಶ ಅವಳಿಗೆ ಅವನೇ ಕೊಟ್ಟದ್ದೇನೋ ?” ಎಂದು ಕೇಳಿದ.

ತಲೆಯಲ್ಲಾಡಿಸಿ ಪ್ರಫುಲ್ಲನೆಂದ: “ಅಲ್ಲ. ಅವನ ಉಪದೇಶವನ್ನು ಮೀರಿಯೇ ಅವಳು ಹೋಗುತ್ತಿದ್ದಾಳಂತೆ”

ಉಪಹಾಸದೊಡನೆ ಜೀವಾನಂದನೆಂದ: “ಇದೇನು ಹೇಳುವೆ ಪ್ರಫುಲ್ಲ? ಆ ಫಕೀರ ಸಾಹೇಬ ಅವಳ ಗುರುವಂತೆ. ಗುರುವಿನ ಮಾತು ಮೀರುವುದೆ ?”

“ಈ ವಿಷಯದಲ್ಲಿಯಂತೂ ಸತ್ಯವಾಗಿದೆ.”

“ಇಷ್ಟೊಂದು ವೈರಾಗ್ಯದ ಕಾರಣವೇನು ?”

“ವೈರಾಗ್ಯದ ಕಾರಣ ನೀವು !” ಎಂದು ತುಸ ತಡೆದು ಪ್ರಫುಲ್ಲನು ಮತ್ತೆ ಮಾತನಾಡಿದ: “ಈ ಸಂಗತಿಯನ್ನು ನಿಮ್ಮ ಕಿವಿಗೆ ಹಾಕುವುದು ಸರಿಯೋ ಅಲ್ಲವೋ ಯಾರಿಗೆ ಗೊತ್ತು ? ಅವಳ ಮನಸಿನಲ್ಲಿ ನಿಮ್ಮಿಂದಲೇ ಭುಗಿಲು ಹುಟ್ಟಿದೆಯೆಂದು ಫಕೀರ ಸಾಹೇಬನಿಗೆ ಎನಿಸಿದೆ. ಜಗಳ ತಂಟೆ ಆದರೆ ನಿಮ್ಮೊಡನೆ ವಿರಸವುಂಟಾಗುವುದೆಂದು ಅವಳು ಬಹಳ ಅಂಜಿದ್ದಾ ಳಂತೆ. ಊರಜನರದು ಎಳ್ಳಷ್ಟೂ ಪರಿವೆ ಅವಳಿಗಿಲ್ಲ.”

ಜೀವಾನಂದನು ನಟ್ಟನೋಟದಿಂದ ನೋಡುತ್ತ ಸುಮ್ಮನೆ ಕುಳಿತಿದ್ದ. ಪ್ರಫುಲ್ಲನು ನಸುನಕ್ಕು ಹೇಳತೊಡಗಿದ: “ನಿಮಗೆ ಬುದ್ಧಿ ಕೊಡುವುದರಲ್ಲಿ ದೇವರೇನು ಜಿಪುಣತನ ಮಾಡಿಲ್ಲ. ಆದರೂ ನಿನ್ನೆ ಸರ್ವಸ್ವಕ್ಕೂ ನೀರು

ಬಿಟ್ಟದ್ದು ಅವಳದು ಭಯಂಕರ ತಪ್ಪಾಯಿತೋ, ಆ ನೀರನ್ನು ಅಂಗೈಮೇಲೆ ಬಿಡಿಸಿಕೊಂಡದ್ದು ನಿಮ್ಮದು ಭಯಂಕರ ತಪ್ಪಾಯಿತೋ ಎಂಬುದು ಇಂದೇ ನಿಶ್ಚಿತವಾಗಿ ತಿಳಿಯಲಾರದು. ಜೀವದಿಂದಿದ್ದರೆ ಒಮ್ಮಿಲ್ಲೊಮ್ಮೆ ಈ ಸಮಸ್ಯೆ ಬಗೆಹರಿಯುವುದೆಂದು ನನಗೆನಿಸುತ್ತದೆ."

ಜೀವಾನಂದನು ಮಾತನಾಡಲಿಲ್ಲ. ನೀರವವಾಗಿ ಹಾಗೆಯೇ ಕುಳಿತಿದ್ದ. ಕತ್ತಲೆ ಬೀಳತೊಡಗಿತ್ತು. ಆಳು ಪೇಲೆಗೆ ಮದ್ಯವನ್ನು ಸುರಿದುಕೊಂಡು ತಂದ. ಕೈಸನ್ನೆ ಮಾಡುತ್ತ ಜೀವಾನಂದನು ಹೇಳಿದ: " ತಕ್ಕೊಂಡು ನಡೆ. ಅದು ಬೇಕಾಗಿಲ್ಲ."

ಆಳಿಗೆ ತಿಳಿಯದಾಯಿತು. ಅವನು ಸುಮ್ಮನೆ ನಿಂತುಬಿಟ್ಟ. ಅದನ್ನು ಕಂಡು ಪ್ರಫುಲ್ಲನೆಂದ: " ಯಾವಾಗ ಬೇಕು ಹೇಳಿರಲ್ಲ ಅವನಿಗೆ."

ಜೀವಾನಂದನ ಮನಸು ಇಂಬುದಪ್ಪಿತ್ತು. ಪ್ರಫುಲ್ಲನು ಮಾತನಾಡಿ ದುದಕ್ಕೆ ಅವನು ಮೇಲೆ ನೋಡಿ " ಈಗಂತೂ ತಕ್ಕೊಂಡು ಹೋಗು. ಬೇಕಾದಾಗ ಕರೆಯುತ್ತೇನೆ " ಎಂದ. ಆಳು ಹೊರಟ. ಜೀವಾನಂದನು ಅವನನ್ನು ಕೂಗಿ ಪ್ರಶ್ನಿಸಿದ: " ಏನೋ, ಚಹಾ ಇದೆಯೇನು ನಿಮ್ಮಲ್ಲಿ ? "

" ಅದೆಂಥ ಮಾತು! ಚಹಾ ಇಲ್ಲದಿದ್ದರೆ ನಾನು ಬದುಕಿದ್ದು ಏತ ರಿಂದ ? " ಎಂದ ಪ್ರಫುಲ್ಲ.

" ಹಾಗಾದರೆ ಒಂದು ಕಪ್ಪು ಚಹಾ ತಕೊಂಡು ಬಾ."

ಆಳು ಹೊರಟುಹೋದ. ಪ್ರಫುಲ್ಲನೆಂದ: " ಅಮೃತ ಏಕೆ ಒಮ್ಮೆಲೆ ಸೇರದಾಯಿತು ? "

" ಸೇರದಾಗಿಲ್ಲ, ಕುಡಿಯುವುದಿಲ್ಲ."

ಪ್ರಫುಲ್ಲನು ನಕ್ಕ. ಕೊಂಚ ಸಮಯದ ಹಿಂದೆ ಜೀವಾನಂದನು ಮಾಡಿದ ಚೇಷ್ಟೆಯನ್ನು ಅವನ ಮೇಲೇ ಪ್ರಫುಲ್ಲನು ತಿರುಗಿಸಿದ: " ಹೀಗೆ ಎಷ್ಟು ಸಲ ಆಗಿದೆ ಅಣ್ಣ ? "

ಜೀವಾನಂದನಿಗೆ ಸಿಟ್ಟು ಬರಲಿಲ್ಲ. ಅವನೂ ನಕ್ಕು ಕೊಂಚ ಹೊತ್ತಿನ ಮುಂಚೆ ಪ್ರಫುಲ್ಲನಾಡಿದ ಮಾತನ್ನೇ ಅವನಿಗೆ ಮುಟ್ಟಿಸಿದ: " ಈಗ ಈ ವಿಚಾರ ಇರಲಿ ಬಿಡು ಪ್ರಫುಲ್ಲ. ಬದುಕಿದ್ದರೆ ಒಂದಿಲ್ಲೊಂದು ದಿನ ಈ ಒಡಪ ಒಡೆದೀತು."

ಪ್ರಫುಲ್ಲನು ಬಾಯಿ ಮುಚ್ಚಿಕೊಂಡು ನಕ್ಕ ಮಾತ್ರ. ತಿರುಗಿ ಮಾತನಾಡಲಿಲ್ಲ.

ಆಳು ಬಂದು ದೀಪ ಹಚ್ಚಿ ಹೋದ. ಹೊರಗೆ ಕತ್ತಲೆ ಘನವಾಗುತ್ತಿತ್ತು. ಜೀವಾನಂದನು ಒಮ್ಮೆಲೆ ಎದ್ದು ನಿಂತು ಹೇಳಿದ: "ಒಂದು ಸ್ವಲ್ಪ ತಿರುಗಾಡಿ ಬರುತ್ತೇನೆ—"

"ಬಟ್ಟೆ ಬದಲು ಮಾಡಲಿಲ್ಲವಲ್ಲ?" ಆಶ್ಚರ್ಯಚಕಿತನಾಗಿ ಪ್ರಫುಲ್ಲನು ಕೇಳಿದ.

"ಇರಲಿ."

"ಮತ್ತೆ ನಿಮ್ಮ ಗೆಳೆಯ? ಪಿಸ್ತೂಲು?"

"ಅದೂ ಇರಲಿ. ಈಪೊತ್ತು ಒಬ್ಬನೇ ಅಡ್ಡಾಡಿಕೊಂಡು ಬರುತ್ತೇನೆ."

ಪ್ರಫುಲ್ಲನು ಅವನನ್ನು ತಡೆದು, "ಬೇಡ ಬೇಡ. ಹೀಗೆ ಮಾಡುವುದುಂಟೆ? ಕತ್ತಲೆಯ ರಾತ್ರಿ, ಬೀದಿ ಬೀದಿಗೂ ಅನೇಕ ಶತ್ರುಗಳು—" ಎಂದು ಲಗುಬಗೆಯಿಂದ ನಾಗೊಂದಿಗೆಯ ಮೇಲಿನ ಪಿಸ್ತೂಲನ್ನು ತೆಗೆದು ಅವನ ಕಡೆ ನೀಡಿದ.

ಜೀವಾನಂದನು ಅದನ್ನು ತೆಗೆದುಕೊಳ್ಳಲಿಲ್ಲ. ಎರಡು ಹೆಜ್ಜೆ ಹಿಂದೆ ಸರಿದು ಅವನೆಂದ: "ಇನ್ನು ಮೇಲೆ ಅದನ್ನೂ ಮುಟ್ಟುವುದಿಲ್ಲ, ಪ್ರಫುಲ್ಲ!

ಪ್ರಫುಲ್ಲನು ಬೆರಗು ಬೆಪ್ಪಾದ. ಅವನೆಂದ: "ಈಪೊತ್ತು ನಿಮಗೇನಾಗಿದೆ ಅಣ್ಣಾ? – ಇಲ್ಲದಿದ್ದರೆ ಆಳನ್ನು ಕರೆಯುತ್ತೇನೆ, ಯಾರಾದರೂ ಬರುತ್ತಾರೆ ಜೊತೆಗೆ."

"ಬೇಡ, ಯಾರೂ ಬೇಡ. ಇನ್ನು ಮೇಲೆ ಹೊರಗೆ ಒಬ್ಬನೇ ಅಡ್ಡಾಡುತ್ತೇನೆ. ಎಲ್ಲಿಯೂ ಯಾರೂ ಶತ್ರುಗಳಿಲ್ಲವೆಂದು ನಂಬಿ ತಿರುಗಾಡುತ್ತೇನೆ. ನನ್ನಿಂದಲೂ ಯಾರಿಗೂ ಯಾವ ಹೆದರಿಕೆಯೂ ಬೇಡ! ಇಷ್ಟಕ್ಕೂ ಏನಾಗುವುದು ಆದೀತು. ನಾನು ಯಾರನ್ನೂ ದೂರುವುದಿಲ್ಲ" ಎಂದು ನುಡಿದು ಜೀವಾನಂದನು ಕತ್ತಲೆಯಲ್ಲಿ ಒಬ್ಬನೇ ಹೊರಬಿದ್ದ.

## ೨೪

ತುಂಬಿದ ಮದ್ಯದ ಗ್ಲಾಸನ್ನು ತಿರುಗಿ ಕಳಿಸಿದ್ದಕ್ಕೇ ಪ್ರಫುಲ್ಲನು ಜೀವಾನಂದನಿಗೆ ಅಣಕವಾಡಿದ್ದ. ಪ್ರಸಂಗವೇ ಹಾಗಿತ್ತು. ಲಿವ್ಹರಿನ ಯಾತನೆ ದುಸ್ಸಾಧ್ಯವಾಗಿದ್ದಾಗ, ಹಾಸಿಗೆ ಹಿಡಿದು ಬಿದ್ದುಕೊಂಡಾಗ, ಡಾಕ್ಟರರ ಕಡ್ಡಾಯಕ್ಕಾಗಿ ಜೀವಾನಂದನು ಹಿಂದಕ್ಕೆಷ್ಟೋ ಸಲ **ಈ** ಸೋಗು ಮಾಡಿದ್ದ. ಸ್ವೇಚ್ಛೆಯಿಂದ ವೈಯಲ್ಲಿ ನೆಟ್ಟಗಿದ್ದಾಗ, ಮದ್ಯವನ್ನು ಬಿಟ್ಟು ಚಹಾ ಕುಡಿದು ಹೊರಗೆ ಹೋದದ್ದು ಇದೇ ಮೊದಲು.

ಅವನಿಗೆ ಜಗತ್ತೇ ಬೇಸರವಾಗಿತ್ತು. ಶಾಂತಿಕುಂಜದ ದಟ್ಟವಾದ ಕತ್ತಲೆಯಲ್ಲಿ ಹಾದಿ ನಡೆಯುತ್ತಿದ್ದಾಗ, ನೋಡಿದತ್ತ ಕಡೆಯಿಂದ ಅಸ್ಪಷ್ಟವಾದ ರೋದನ ಸ್ವರವು ಅವನ ಕಿವಿಗೆ ಬಿದ್ದು ಹೃದಯವನ್ನು ಆಘಾತಿಸುತ್ತಿತ್ತು. ಈವರೆಗಿನ ಅಭ್ಯಾಸದಿಂದ ಅವನ ಜೀವನಕ್ಕೆ ಒಂದು ವಿಶಿಷ್ಟವಾದ ದಿಶೆ ನಿರ್ದಿಷ್ಟವಾಗಿದ್ದಿತು. ಅದರ ಹೊರತು ಸತ್ಯವಾದ ದಿಶೆ ಬೇರೊಂದಿದೆ, ಅದೆಲ್ಲಿಯೋ ಒಂದು ಕಡೆ ಜಾಗೃತವಾಗಿದೆ ಎಂಬುದು ಅವನಿಗಿನ್ನೂ ಗೊತ್ತಾಗಿರಲಿಲ್ಲ.

ಆವಾರದ ಬಾಗಿಲನ್ನು ದಾಟಿ, ಅವನು ಹೊಲದೊಳಗಿನ ಹಾದಿಯನ್ನು ಹಿಡಿದಾಗ, ಸಂಧ್ಯಾಕಾಲದ ಧೂಸರ ಆಕಾಶವು ಸಾವಕಾಶವಾಗಿ ರಾತ್ರಿಯ ಕತ್ತಲೆಯಲ್ಲಿ ಪರಿವರ್ತನೆ ಹೊಂದುತ್ತಲಿದ್ದಿತು. ಒಂದು ಕಡೆ ಬತ್ತಿದ ಹೊಳೆಯ ಒಣಮಳಲಿನಲ್ಲಿ ಅಂಕುಡೊಂಕಾಗಿ ಹೋಗಿ ಎಲ್ಲಿಯೋ ಲಯಹೊಂದಿದ ಹಾದಿಯೊಂದು; ಇನ್ನೊಂದು ಕಡೆ ಚಂಡೀಗಡದವರೆಗೂ ಹಬ್ಬಿದ, ಹುಲ್ಲು ಕೂಡ ಇಲ್ಲದ ವಿಸ್ತಾರವಾದ ಬಟ್ಟಬಯಲು ಹೊಲಗಳು.

ದಾರಿಯಲ್ಲಿ ಆಡ್ಡಾಡುವವರಿಲ್ಲ, ಹೊಲಗಳಲ್ಲಿ ಒಕ್ಕಲಿಗರ ಸುಳಿವಿಲ್ಲ. ದನಗಾಹಿ ಹುಡುಗರು ಆಗಲೇ ದನಗಳನ್ನು ತಿರುವಿಕೊಂಡು ಹೋಗಿ ಗೂಡು ಸೇರಿದ್ದಾರೆ. ಸಂಜೆ ಮುಗಿಲಿನ ಅಂಚಿಗೆ ಹತ್ತಿದ, ನಿರ್ಜನವಾದ ಭೂಮಿಯ ಸ್ತಬ್ಧ ವಿಷಣ್ಣ ಮೂರ್ತಿ ಇಂದವನಿಗೆ ಅತ್ಯಂತ ದುಃಖಮಯವಾಗಿ ಅದ್ಭುತವಾಗಿ ತೋರಿತು.

ಜನರಿಲ್ಲದ ಸಂಜೆ ಹೊತ್ತಿನಲ್ಲಿ ಇದೇ ಮಾರ್ಗದಿಂದ ಅವನೆಷ್ಟೋ

ಸಾರಿ ಹೋಗಿದ್ದ, ಬಂದಿದ್ದ. ಆದರೆ ಧರಿತ್ರೀದೇವಿ ತನ್ನ ಈ ಶಾಂತ ಶೋಕಾಚ್ಛನ್ನ ಸ್ವರೂಪವನ್ನು, ನಾಚಿಕೆಯಿಂದ ಈ ಕುಡಕನ ದೃಷ್ಟಿಗೆ ಈವರೆಗೂ ಬೀಳಗೊಟ್ಟಿರಲಿಲ್ಲವೇನೊ !

ಇಡೀ ದಿನ ಬಿಸಿಲಿನಲ್ಲಿ ಕಾಯ್ದು ಆಚೆ ದಂಡೆಯ ಉಸುಕಿನ ಮೇಲಿಂದ ಬರುತ್ತಿದ್ದ ಬಿಸಿಗಾಳಿ ಆಗಾಗ ಅವನ ಮೈಯನ್ನು ತಾಗುತ್ತಿತ್ತು. ಅದೇನೂ ನೂತನವಲ್ಲ. ಆದರೆ ಬುದ್ಬುದಿಸುವ ಅಸಂತೋಷದ ಅಳುನೋಟದಿಂದ ಆ ಕಡೆ ನೋಡುತ್ತಿದ್ದಾಗ ಈ ದಿನ ಅವನೆದೆ ಒಮ್ಮೆಲೆ ತುಂಬಿಬಂದಿತು.

ಅವನು ಮನಸಿನೊಳಗೇ ಎಂದುಕೊಂಡ – 'ತಾಯಿಾ ಭೂದೇವಿ, ನಿನ್ನ ದುಃಖದ ಬಿಸಿಯುಸಿರನ್ನು ಯಾವ ಲಜ್ಜೆಯಿಂದ ಹತ್ತಿಕ್ಕಿಕೊಂಡಿದ್ದೆ? ನಾನು ಚಾಂಡಾಲನೆಂದು ನನಗದನ್ನು ತೋರಗೊಟ್ಟಿರಲಿಲ್ಲವೆ? ಈ ಜಗತ್ತಿನಲ್ಲಿ ನನ್ನವರೆಂಬವರು ಯಾರೂ ಇಲ್ಲ. ನನ್ನ ಸ್ವಾರ್ಥವನ್ನು ಬಿಟ್ಟು ಅನ್ಯರ ಸುಖದುಃಖಗಳಲ್ಲಿ ನಾನೆಂದೂ ಪಾಲುಗಾರನಾಗಲಿಲ್ಲ. ತಾಯಿಾ, ಇದೇ ನನ್ನ ತಪ್ಪೆ? ನಾನು ಇಂದು ಇದ್ದೇನೆ, ನಾಳೆ ಇರಲಿಕ್ಕಿಲ್ಲ, ಆದರಿದರಿಂದ ಜಗತ್ತಿಗೆ ಲಾಭವೂ ಇಲ್ಲ ನಷ್ಟವೂ ಇಲ್ಲ ಎಂದು ನೀನು ಭಾವಿಸಿದ್ದೆಯಾ ?'

ಹೀಗೆ ಅವನು ಯಾರಲ್ಲಿ ನಿವೇದಿಸಿಕೊಳ್ಳುತಲಿದ್ದ? 'ತಾಯಿಾ' ಎಂದು ಯಾರನ್ನು ಸಂಬೋಧಿಸುತ್ತಲಿದ್ದ? ಅವನದು ಅವನಿಗೇ ತಿಳಿದಿರಲಾರದು. ಒಮ್ಮಿಂದೊಮ್ಮೆಲೆ ಉದ್ಭವಿಸಿದ ಹೃದಯದೊಳಗಿನ ವೇದನೆಯ ಅನುಭೂತಿ, ಗತಕಥೆಯ ಮಾಲೆಯನ್ನು ಪೋಣಿಸುತ್ತಿದ್ದಂತೆ ಕಣ್ಣೀರಿನ ಧಾರೆಯೊಡನೆ ಒಂದೇ ಸವನೆ ಹರಿಯುತ್ತಲಿತ್ತು.

ಹೊಲಗಳಿಗೆ ನೀರು ಹಾಯಿಸುವುದಕ್ಕಾಗಿ ಒಕ್ಕಲಿಗರು ಆ ಹಾದಿಯಲ್ಲಿಯೇ ಕಾಲುವೆ ಅಗೆದಿದ್ದರು. ನಂದಿ ಮಹಾಶಯನ ಅನುಮತಿಯನ್ನು ಪಡೆಯುವುದಕ್ಕಾಗಿ ಸಾಕಷ್ಟು ದಕ್ಷಿಣೆ ಕೊಡುವ ಸಾಮರ್ಥ್ಯವಿಲ್ಲದುದಕ್ಕೆ, ಹೊಲಗಳು ಪೂರಾ ಹಾಳಾಗಬಾರದೆಂದು ಅವರು ಸ್ವಸಂರಕ್ಷಣೆಗಾಗಿ ಈ ಕೆಲಸವನ್ನು ಕೈಕೊಂಡಿದ್ದರು. ಆದರೆ ಆ ದರಿದ್ರ ಜನರ ಈ ಅಸಹನೀಯ ಸ್ಪರ್ಧೆಯನ್ನು ಏಕಕೌಡಿ ಧನಿಯರ ಗಮನಕ್ಕೆ ತಂದ. ತೀರಿತು, ಕೂಡಲೆ

ಕಾಲುವೆ ತಡೆಯಲ್ಪಟ್ಟಿತು. ಅವರು ನಿರುಪಾಯರಾಗಿದ್ದರು. ಪಾಪ, ಅವರು ಅಶ್ರುಪೂರ್ಣ ನೇತ್ರಗಳಿಂದ ಕೂಡ ಆ ಕಡೆ ನೋಡಲಿಲ್ಲ.

ಆ ಸ್ಥಳವಿನ್ನೂ ತಗ್ಗುಮಿಟ್ಟೆಯಾಗಿ ಇತ್ತು. ಬಡವರ ಗೋಳನ್ನು ಕಟ್ಟಿಕೊಂಡುದಕ್ಕೆ ಅದು ಪ್ರತ್ಯಕ್ಷಪ್ರಮಾಣವಾಗಿತ್ತು. ಈ ದಾರಿಯಿಂದ ಅಡ್ಡಾಡುವಾಗ ಅವನೆಷ್ಟೋ ಸಲ ಇದನ್ನು ನೋಡಿದ್ದ. ಆದರೆ ಈ ದಿನ ಅದನ್ನು ಕಂಡಾಗ ಅವನ ಎರಡು ಕಣ್ಣುಗಳಲ್ಲಿಯೂ ನೀರ ಕಾಲುವೆ ಹರಿಯಿತು. ಅವನು ತನ್ನ ಮನಸಿನೊಳಗೇ ಎಂದುಕೊಂಡ–' ಚುಚು, ಎಷ್ಟು ನಷ್ಟವಾಗಿರಬಹುದು! ಅದೆಷ್ಟೋ ಸಣ್ಣ ಸಣ್ಣ ಕೂಸು ಕುನ್ನಿಗಳಿಗೆ ಎರಡು ಹೊತ್ತು ಹೊಟ್ಟೆತುಂಬ ಅನ್ನಕೂಡ ಸಿಕ್ಕದಾಗಿದ್ದೀತು. ಮಾನವನ ರೀತಿ ಹೀಗೇಕೆ? ಕೆಲಹೊತ್ತು ನಾಲ್ಕೂ ಕಡೆ ಕಣ್ಣಾಡಿಸಿ ಅವನು ಮತ್ತೆಂದುಕೊಂಡ – ' ಈ ಮಿತಿಗೆ ಕೈಯೊಳಗೆ ಹಣವಿದ್ದಿದ್ದರೆ ನಾಳೆಯೇ ಆಳು ಹಚ್ಚಿ ಈ ಕಾಲುವೆ ಕಟ್ಟಿಸಿಕೊಡುತ್ತಿದ್ದೆ. ಪ್ರತಿ ವರುಷವೂ ಅವರಿಗಾಗುತ್ತಿದ್ದ ತೊಂದರೆಯನ್ನು ತಪ್ಪಿಸುತ್ತಿದ್ದೆ. ಒಳ್ಳೇದು! ಎಷ್ಟು ವೆಚ್ಚ ತಗಲೀತು ಈ ಕೆಲಸಕ್ಕೆ?'

ಅವನು ಹಾದಿಯನ್ನು ಬಿಟ್ಟು ಹೊಲದೊಳಗೆ ಇಳಿದ. ಮನಸು ಗೊಟ್ಟು ಎಲ್ಲ ಕಾಲುವೆಗಳ ಲೆಕ್ಕ ಹಾಕತೊಡಗಿದ. ಅದು ಅವನಿಗೆ ಕೊಂಚವೂ ತಿಳಿಯದ ವಿಷಯ. ಎಷ್ಟು ಇಟ್ಟಿಗೆ, ಎಷ್ಟು ಸುಣ್ಣ, ಎಷ್ಟು ಉಸುಕು – ಅಲ್ಲದೆ ಮತ್ತೆ ಯಾವುದು ಎಷ್ಟು – ಬೇಕೆಂಬುದೂ ಅವನಿಗೆ ಗೊತ್ತಾಗದು. ಆದರೂ ಈ ವಿಷಯ ಅವನ ಮನಸಿಗೆ ಹತ್ತಿಯೇ ಬಿಟ್ಟಿದ್ದಿತೇನೋ. ಆ ಕತ್ತಲೆಯಲ್ಲಿ ನಿಂತುಕೊಂಡು ಲೆಕ್ಕಹಾಕಿ ನೋಡತೊಡಗಿದ. ಈ ವೆಚ್ಚವು ತನಗೆ ಸೀಗೀತೋ ಹೇಗೆ?

ಹಾದಿಯ ಆಚೆ ಕಡೆ ಯಾರೋ ಓಡಿಹೋದಂತಾಯಿತು. ನಾಯಿಯೋ ನರಿಯೋ ಇರಬಹುದು. ಆದರೆ ಅದರಿಂದ ಅವನ ಧ್ಯಾನವು ಭಗ್ನವಾಯಿತು. ಎರಡನೆಯವರ ದುಃಖವನ್ನು ಮನಸಿಗೆ ಹಚ್ಚಿಕೊಂಡು ಯೋಚಿಸುವ ಅಭ್ಯಾಸವೇ ಇಲ್ಲ ಅವನಿಗೆ. ಮೈಮೇಲೆ ಎಚ್ಚರು ಬಂದೊಡನೆ ಈ ತಮಾಷೆಯ ಮುಕ್ತಸ್ವರೂಪವು ಗೋಚರಿಸಲು, ಅವನದು ಅವನಿಗೇ ನಗೆ ಬಂದಿತು.

ಅವನು ಮತ್ತೆ ಹಾದಿಗೆ ಬಂದು ಸೇರಿದ. ಛಲೆ, ಇದೇನಿದು ಹುಚ್ಚು! ಯಾರಾದರೂ ಕಂಡರೆ ಏನೆಂದಾರು!

ಇಂದು ಜೀವಾನಂದನು ಮದ್ಯವನ್ನು ಸೇವಿಸದೆ ಹೊರಬಿದ್ದಿದ್ದ. ಮನಸಿನ ದೌರ್ಬಲ್ಯದ ಕಾರಣವು ಈಗ ಅವನ ಲಕ್ಷ್ಯಕ್ಕೆ ಬಂದಿತು. ಗೊಂದಲಗೆಟ್ಟ ಅಂತಃಕರಣದಲ್ಲಿ ಇಂದು ನಿಷ್ಕಾರಣವಾಗಿ ಅಳುವಿನ ದನಿ ಮತ್ತೆ ಮತ್ತೆ ಏಕೆ ಏಳುತ್ತಿದೆಯೆಂಬುದನ್ನು ಅನುಮಾನಿಸಿಕೊಳ್ಳುವುದಕ್ಕೂ ಹೆಚ್ಚು ಸಮಯ ಹಿಡಿಯಲಿಲ್ಲ.

ಎಂದೂ ಇಲ್ಲದ ಒಂದು ಶಂಕೆ ಈಗವನಲ್ಲಿ ಉತ್ಪನ್ನವಾಯಿತು– ಅನೇಕ ದಿನಗಳ ಅಭ್ಯಾಸದಿಂದ ಈ ಶಂಕೆ ಅವನ ಸರ್ವಾಂಗವನ್ನೂ ವ್ಯಾಪಿಸಿಕೊಂಡಿದ್ದು ಈಗದು ಮೂಲಸ್ಥಾನಕ್ಕೆ ಬರುತ್ತಲಿತ್ತು. ತನ್ನ ತನ್ನತನವನ್ನು ಸಿದ್ಧಪಡಿಸುವ ಪಕ್ಕು ಈವರೆಗೆ ಅವನ ಕೈಯಿಂದ ಚಿರವಾಗಿ ಕಳೆದುಹೋಗಿತ್ತು.

ತಾನೀ ದಿವಸ ಏಕೆ ಹೊರಬಿದ್ದಿದ್ದನೆಂಬುದೂ ಅವನಿಗೆ ಸರಿಯಾಗಿ ನೆನಪಾಗಲೊಲ್ಲದು. ಮನಸಿನೊಳಗೆ ಹುಟ್ಟಿತು, ತಲೆಯೊಳಗೆ ತುಂಬಿತು, ಅವನು ಮನೆಯಿಂದ ಹೊರಬಿದ್ದ. ಆಗವನು ಏನನ್ನೂ ಗೊತ್ತುಮಾಡಿ ಕೊಂಡಿರಲಿಲ್ಲ. ಅಸ್ಪಷ್ಟವಾದ ಅಗೋಚರವಾದ ಯಾವುಯಾವುವೋ ಕಲ್ಪನೆಗಳು ಎದ್ದಿದ್ದವು. ಆದರೆ ಅವೆಲ್ಲವೂ ಒಂದರೊಳಗೊಂದು ಬೆರೆತು ಹೋಗಿ ಅವನನ್ನು ಗೊಂದಲಕ್ಕೀಡು ಮಾಡಿದ್ದವು.

ಮನೆಯಿಂದ ಏಕೆ ಹೊರಟಿದ್ದೇನೆಂಬುದೂ ಅವನ ಧ್ಯಾಸಕ್ಕೆ ಬರ ಲಿಲ್ಲ; ಮನೆಗೆ ಮರಳಬೇಕೆಂದೂ ಅವನಿಗೆನಿಸಲಿಲ್ಲ.

ಅವನು ಕೊಂಚ ಮುಂದೆ ನಡೆದ. ದೊಡ್ಡ ಹಾದಿಗೆ ಪಕ್ಕದ ಹೊಲ ದಲ್ಲೊಂದು ಕಾಲು ದಾರಿಯಿದ್ದಿತು. ಅದು ಚಂಡೀಗಡದ ಬಲಬದಿಗೆ ತಿರುಗಿತ್ತು. ಅವನ ಕಾಲುಗಳು ಕತ್ತಲೆಯಲ್ಲಿ ಆ ಹಾದಿಯನ್ನೇ ಹಿಡಿ ದವು. ಆ ಸೀಳುದಾರಿ ಬಲು ದೀರ್ಘವಾದುದು; ತಗ್ಗುಮಿಟ್ಟೆ ಉಳ್ಳದು, ಹೆಜ್ಜೆ ಹೆಜ್ಜೆಗೆ ಮುಗ್ಗರಿಕೆ. ಆದರೂ ಅವನು ಎಡವುತ್ತ ಮುಗ್ಗರಿಸುತ್ತ ಸಾಗಿರುವಾಗ, ಅವನ ಉದ್ವಿಗ್ನವಾದ ಮನಸಿನ ಆಳದಲ್ಲೆಲ್ಲಿಯೋ ಇಟ್ಟಿಗೆ–

ಕಲ್ಲು–ಸುಣ್ಣ–ಉಸುಕುಗಳ ಯೋಜನೆ ಎಡೆಬಿಡದೆ ಸುಳಿಯುತ್ತಲಿತ್ತು. ಆದವನಿಗೆ ಗೊತ್ತಾಗುತ್ತಿತ್ತೋ ಇಲ್ಲವೋ ಯಾರಿಗೆ ಗೊತ್ತು!

ಬೇಡಿಕೆ ಅಷ್ಟೇನೂ ದೊಡ್ಡದಲ್ಲ: ಚಿಕ್ಕದೊಂದು ಸಂಕ. ಬೀಜಗಾವದ ಜಮೀನುದಾರರ ಲೆಕ್ಕದಲ್ಲಿ ಆ ಕೆಲಸವು ತೀರ ಕ್ಷುದ್ರ. ಶಿಲ್ಪಕಲೆಯುದಾಗಲಿ, ಸೌಂದರ್ಯದ್ದಾಗಲಿ ಮಾತೇ ಇರಲಿಲ್ಲ ಅದರೊಳಗೆ. ಆದರೆ ಶಿಲ್ಪಸೌಂದರ್ಯ ವರ್ಜಿತವಾದ ಒಂದು ಸಾಮಾನ್ಯ ವಸ್ತುವಿನ ದೆಸೆಯಿಂದ ಅದೆಷ್ಟು ದೀನ ಜೀವಿಗಳ ಸುಖ ಸೌಲಭ್ಯಗಳಿಗೆ ಅಡ್ಡಿಯಾಗಿದೆ! ಈ ಕಲ್ಪನೆ ಮನಸಿನೊಳಗೆ ಬಂದುದರಿಂದ ಒಂದು ನವೀನ ಭಾವನೆಯು ಉದಯವಾಗಿ ಆ ಸಾಮಾನ್ಯ ವಸ್ತುವೂ ಅವನಿಗೆ ಅಸಾಮಾನ್ಯವಾಗಿ ಕಾಣತೊಡಗಿತು. ಎಷ್ಟು ಸಲ ಮುರಿದು ಎಷ್ಟು ತೆರದಿಂದ ಹೊಂದಿಸಿದರೂ ಅದು ಮುಗಿಯದಂತಾಯಿತು.

ಇದೆಲ್ಲ ಅವನ ದಣಿದ ಮನಸಿನ ಕ್ಷಣಿಕವಾದ ಆಟವಷ್ಟೆ; ಸತ್ಯವಸ್ತುವಾಗಿರಲಿಲ್ಲ. ನಾಳೆ ಬೆಳಗಾಯಿತೆಂದರೆ ಈ ವಿಚಾರದ ಗಂಧವೂ ಉಳಿಯಲಾರದೆಂಬುದನ್ನು ಅವನು ಮರೆತಿರಲಿಲ್ಲ. ಹಬ್ಬದ ಹೊತ್ತಿನಲ್ಲಿ ಅಂತರಂಗದೊಳಗೆ ಅದುಮಿಟ್ಟ ದುಃಖದಂತೆ, ಈ ಎಲ್ಲ ಪ್ರಸಂಗಗಳಲ್ಲಿ ಅವನನ್ನು ಚುಚ್ಚುತ್ತಿದ್ದುದು ಅದೇ.

ಆದರೆ ಆ ರಾತ್ರಿಯ ಮಟ್ಟಿಗಂತೂ ಈ ಮಕ್ಕಳಾಟವನ್ನು ಬಿಡಬೇಕೆಂದು ಅವನಿಗೆನಿಸಲೊಲ್ಲದು. ತಿರುತಿರುಗಿ ನೆನಪು ಮಾಡಿಕೊಂಡು ಕಲ್ಪನೆಯ ಮೇಲೆ ಕಲ್ಪನೆಯ ಗೋಪುರ ಕಟ್ಟುತ್ತ, ಅವನ ಮನಸು ಆ ಆಟವನ್ನು ಅಖಂಡವಾಗಿ ನಡೆಸಿಯೇ ಇತ್ತು.

ಕರಿ ಮುಗಿಲಿನ ಹಿನ್ನೆಲೆಯ ಮೇಲೆ ಚಂಡೀ ದೇವಸ್ಥಾನದ ಕಳಸವು ಒಮ್ಮೆಲೆ ಅವನ ಕಣ್ಣಿಗೆ ಬಿದ್ದಿತು. ತಾನಿಷ್ಟು ದೂರ ಬಂದಿರುವನೆಂಬ ಅರಿವೇ ಅವನಿಗಿರಲಿಲ್ಲ.

ಅವನು ಇನ್ನೂ ಸ್ವಲ್ಪ ಸಮೀಪಕ್ಕೆ ತಲುಪಿದಾಗ ಗುಡಿಯ ಸಣ್ಣ ಬಾಗಿಲು ಇನ್ನೂ ತೆರೆದಿರುವಂತೆ ಕಂಡಿತು. ಅವನೇನೂ ಮಾತನಾಡದೆ ಒಳಗೆ ಪ್ರವೇಶಿಸಿದ. ದೇವಿಯ ಆರತಿ ಮುಗಿದು ಬಹಳ ಹೊತ್ತಾಗಿತ್ತು ಗರ್ಭಗುಡಿಯ ಬಾಗಿಲು ಇಕ್ಕಿತ್ತು. ಅಂಗಳದಲ್ಲೆಲ್ಲ ಕತ್ತಲೆ. ಸಭಾ

ಮಂಡಪದ ಒಂದು ಮೂಲೆಯಲ್ಲಿ ಮಾತ್ರ ಸಣ್ಣದೊಂದು ದೀವಿಗೆ ಮಿಣಿ ಮಿಣಿ ಉರಿಯುತ್ತಿದ್ದಿತು.

ಜೀವಾನಂದನು ಸನಿಯಕ್ಕೆ ಹೋಗಿ ನೋಡಿದ. ಸೊಳ್ಳೆಗಳ ಕಾಟಕ್ಕೆ ಮೈತುಂಬ ಹೊದ್ದಿಕೆ ಹೊದ್ದುಕೊಂಡು ಐದಾರು ಜನ ಮಲಗಿದ್ದರು. ಯಾವನೋ ಒಬ್ಬ ಮನುಷ್ಯನು ಕಂಬದ ಮರೆಯಲ್ಲಿ ಕುಳಿತು ಮಾಲೆ ತಿರುವುತ್ತ ಜಪ ನಡೆಸಿದ್ದ.

ಜೀವಾನಂದನು ಇನ್ನಷ್ಟು ಮುಂದುವರಿದು ಆ ಮನುಷ್ಯನನ್ನು ದಿಟ್ಟಿಸಿ ನೋಡಲು ಪ್ರಯತ್ನಿಸುತ್ತ, "ಯಾರು ನೀವು?" ಎಂದು ಪ್ರಶ್ನಿಸಿದ.

ಅವನ ಸ್ವಚ್ಛವಾದ ಬಿಳಿಯುಡುಪು ಕತ್ತಲೆಯಲ್ಲಿ ನಿಚ್ಚಳವಾಗಿ ಕಂಡುದರಿಂದ ಯಾವನೋ ಸದ್ಗೃಹಸ್ಥನಿರಬೇಕೆಂದು ಭಾವಿಸಿ, ಆ ಮನುಷ್ಯನು ಉತ್ತರವಿತ್ತ: "ನಾನೊಬ್ಬ ಯಾತ್ರಿಕ, ಬಾಬೂ."

"ಹೀಗೋ! ಯಾತ್ರಿಕನೆ? ಎಲ್ಲಿಗೆ ಹೊರಟಿದ್ದೀ?"

"ಪುರಿಯ ಜಾತ್ರೆಗೆ"

"ಎಲ್ಲಿಂದ ಬಂದೆ? ಇವರು ನಿನ್ನ ಸಂಗಡಿಗರೇನೋ?" ಎಂದು ಜೀವಾನಂದನು ಮಲಗಿದವರನ್ನು ಬೆರಳಿಂದ ತೋರಿಸಿದ.

"ಅಲ್ಲ ಒಡೆಯಾ. ನಾನು ಒಬ್ಬನೇ ಬಂದಿದ್ದೇನೆ. ಮಾನಭೂಮಿ ಜಿಲ್ಲೆಯಿಂದ ಬಂದಿದ್ದೇನೆ. ಇವರಲ್ಲಿ ಯಾರು ಮೇದಿನೀಪುರದವರಿದ್ದಾರೆ, ಯಾರು ಮತ್ತೆಲ್ಲಿಯವರೋ ಇದ್ದಾರೆ. ಅವರು ಎಲ್ಲಿಗೆ ಹೋಗುವವರೋ ಏನೋ ನನಗೆ ಗೊತ್ತಿಲ್ಲ. ಒಬ್ಬರು ಈಹೊತ್ತೇ ಮಧ್ಯಾಹ್ನ ಬಂದರು."

"ಹೀಗೇನು? ದಿನಾಲು ಇಲ್ಲಿ ಎಷ್ಟು ಜನ ಬಂದು ಇಳಿದುಕೊಳ್ಳುತ್ತಾರೆ? ಅವರಿಗೆ ಎರಡು ಹೊತ್ತೂ ಊಟ ಸಿಕ್ಕುತ್ತದಲ್ಲವೆ?"

ಪಾಪ, ಆ ಮನುಷ್ಯನು ಗೊಂದಲದೊಳಗೆ ಬಿದ್ದಂತೆ ಕಂಡಿತು. ಅವನು ಲಜ್ಜಿತನಾಗಿ ನುಡಿದ: "ಊಟ ಸಿಕ್ಕುತ್ತದೆಂದೇ ಎಲ್ಲರು ಉಳಿದುಕೊಳ್ಳುವರೆಂದಲ್ಲ ಬಾಬೂ. ನನಗೆ ಕಾಲುನಡಿಗೆಯ ರೂಢಿಯಿಲ್ಲದ್ದರಿಂದ ಕಾಲೊಡೆದು ಗಾಯಗಳಾಗಿವೆ. ಅವ್ವ ಭೈರವಿ ತಾನೇ ನೋಡಿ ಅಪ್ಪಣೆ ಕೊಟ್ಟಳು – ಕಾಲು ನೆಟ್ಟಗಾಗುವ ತನಕ ಇಲ್ಲಿಯೇ ಇರಲು ಹೇಳಿದಳು."

"ಸರಿ! ಇದ್ರಿ ಅಲ್ಲ ಇಲ್ಲಿ. ಇಲ್ಲೇನು ಸ್ಥಳದ ಕೊರತೆಯಿಲ್ಲ!"

"ಆದರೆ ಈಗ ಅವ್ವ ಭೈರವಿ ಇಲ್ಲವಂತೆ."

ಜೀವಾನಂದನು ನಕ್ಕು ನುಡಿದ : "ಈಗಾಗಲೇ ನಿನ್ನ ಕಿವಿಯ ತನಕವೂ ಬಂದಿತೇ ಸುದ್ದಿ? ಇರದಿದ್ದರಿಲ್ಲ ಆಕೆ. ಆಕೆಯ ಅಪ್ಪಣೆ ಯಂತೂ ಇದೆಯಲ್ಲವೆ? ಯಾರು ನಿನಗೆ ಹೋಗೆಂಬವರು? ಕಾಲು ಗುಣವಾಗುವವರೆಗೆ ಬೇಕಾದ ಹಾಗೆ ಇರು" ಎಂದು ಅವನ ಹತ್ತಿರ ಹೋಗಿ ಕುಳಿತ. ಆ ಮನುಷ್ಯನಿಗೆ ಮೊದಲು ಸ್ವಲ್ಪ ಭೀತಿಯೆನಿಸಿತು, ಸಂಕೋಚವೆನಿಸಿತು. ಆದರೆ ಕೊಂಚ ಸಮಯದೊಳಗೆ ಸಂಕೋಚವು ದೂರವಾಯಿತು.

ಆ ಕತ್ತಲೆಯ ಏಕಾಂತದಲ್ಲಿ, ನಿಃಸ್ತಬ್ಧವಾದ ದೇವಾಲಯದ ಮೂಲೆ ಯಲ್ಲಿ ಒಬ್ಬ ಪರಾಕ್ರಮಿಯಾದ ಜಮೀದಾರ, ಒಬ್ಬ ಮನೆಮಾರಿಲ್ಲದ ತಿರಕ. ಇಬ್ಬರೊಳಗೂ ಯೋಗಕ್ಷೇಮದ ಮಾತುಕತೆಗಳಾಗಿ ಅಲ್ಪಾವಧಿ ಯಲ್ಲಿ ಗೆಳೆತನ ಕೂಡಿತು.

ಉಮಾಚರಣ ಆ ಮನುಷ್ಯನ ಹೆಸರು. ಜಾತಿಯಿಂದ ಅವನು ಕೈವರ್ತ. ಅವನ ಮನೆ ಮೊದಲು ಮಾನಭೂಮಿ ಜಿಲ್ಲೆಯ ವಂಶೀತಟ ಗ್ರಾಮ ದಲ್ಲಿತ್ತು. ಊರಲ್ಲಿ ಕೂಳಿನ ಬರ, ನೀರಿನ ಅರಬು; ವೈದ್ಯ ಡಾಕ್ಟರರು ಯಾರೂ ಇಲ್ಲ. ಊರಿನ ಯಜಮಾನನಾದ ಜಮೀದಾರನು ಪಶ್ಚಿಮ ಬಂಗಾಲದ ಯಾವ ನಗರದಲ್ಲಿಯೋ ವಕೀಲನಾಗಿದ್ದ. ರಾಜ ಪ್ರಜೆಗಳಲ್ಲಿ ವಿಶೇಷ ಸಂಬಂಧವಿರಲಿಲ್ಲ. ಇದ್ದುದು ಒಂದೇ, ಪ್ರಜೆಗಳನ್ನು ಪೀಡಿಸುವ ವಂಶಪರಂಪರೆಯ ಅಧಿಕಾರ.

ಕಳೆದ ಫಾಲ್ಗುಣದಲ್ಲಿ ಆ ಬಡವನ ಹೆಂಡತಿ ಗುದ್ದವ್ವನ ಬೇನೆ ಯಿಂದ ಸತ್ತಿದ್ದಳು. ಇಬ್ಬರು ಮಕ್ಕಳೂ ಔಷಧೋಪಚಾರಗಳ ಅಭಾವ ದಿಂದ ಕೈಲಾಸವಾಸಿಗಳಾಗಿದ್ದರು. ಏನಾದರೂ ಉಪಾಯ ಮಾಡ ಬೇಕೆಂದರೆ ಅವನಿಗೆ ಸಾಮರ್ಥ್ಯವಿರಲಿಲ್ಲ. ಕೊನೆಗೆ ತನ್ನ ಹಳೆಯ ಮನೆ ಯನ್ನು ವಿಧವೆಯಾದ ಕಕ್ಕನ ಮಗಳಿಗೆ ದಾನಮಾಡಿ, ಮನೆಗೆ ಕೊನೆಯ ನಮಸ್ಕಾರ ಹಾಕಿ ಅವನು ಹೊರಬಿದ್ದಿದ್ದ. ತಿರುಗಿ ಊರಿಗೆ ಹೋಗುವ ಆಸೆ ಅವನಿಗಿರಲಿಲ್ಲ, ಇಚ್ಛೆಯೂ ಇರಲಿಲ್ಲ.

ತನ್ನ ಕತೆಯನ್ನೆಲ್ಲ ಹೇಳಿ ಉಮಾಚರಣನು ಹುಡುಗರಂತೆ

ಬೋರಾಡಿ ಅತ್ತ. ಜೀವಾನಂದನ ಕಣ್ಣುಗಳಿಂದ ಕಂಬನಿ ಟಪಟಪ ಉದಿರತೊಡಗಿದವು. ಅಳುವ ಮುಖವನ್ನು ನೋಡುವ ಪ್ರಸಂಗವು ಅವನಿಗೆ ಇದೇ ಮೊದಲನೆಯದಲ್ಲ. ಬಹಳ ಸಾರೆ, ಬಹಳ ಜನ ಬಂದು ಅವನೆದುರಿಗೆ ಅಳುತ್ತಿದ್ದರು. ಆದರೆ ಅದರಿಂದ ಅವನ ಕಣ್ಣುಗಳು ಎಂದೆಂದೂ ಒದ್ದೆಯಾಗಿರಲಿಲ್ಲ. ಇಂದು ಅವನ ಕಣ್ಣಲ್ಲಿ ನೀರು ಬಂದುದನ್ನು ಅವನ ಹೊರತು ಯಾರೂ ಭಾವಿಸಲರಿಯರು.

ಅವನು ಅಂಗಿಯ ತೋಳಿನಿಂದ ಮತ್ತೆ ಮತ್ತೆ ಕಣ್ಣೊರಸಿಕೊಳ್ಳುತ್ತಿದ್ದ. ಎಲ್ಲಿಯಾದರೂ ಹೊರಟುಹೋಗಬೇಕು, ಹೆಂಡತಿ ನಾಯಿದ ಮಕ್ಕಳಾಗದ ಗೃಹ ತ್ಯಾಗಮಾಡಿ ಹೋಗದ ಯಾರ ಸಲುವಾಗಿಯಾದರೂ ಈ ಮನುಷ್ಯನಂತೆ ಹೊಟ್ಟೆತುಂಬ ಅಳಬೇಕು ಎಂದವನಿಗೆ ಎನಿಸುತ್ತಿತ್ತು.

ಸ್ವಲ್ಪ ಹೊತ್ತಿನ ತರುವಾಯ ಉಮಾಚರಣನು ಕಣ್ಣೊರಸಿಕೊಂಡು ನುಡಿದ : "ಬಾಬೂ, ನನ್ನಂಥ ದುಃಖಿ ಈ ಜಗತ್ತಿನೊಳಗೇ ಇಲ್ಲ."

"ಅಯ್ಯೋ ಮಹಾರಾಯ, ಜಗತ್ತು ಬಹಳ ದೊಡ್ಡದಿದೆ. ಅಲ್ಲಿ ಎಲ್ಲಿ ಏನಿದೆ ಎಂಬುದನ್ನು ಹೇಳುವುದು ಯಾರಿಗೂ ಸಾಧ್ಯವಿಲ್ಲ.

ಜೀವಾನಂದನ ಮಾತಿನ ತಾತ್ಪರ್ಯವನ್ನು ಅರಿತುಕೊಳ್ಳುವಷ್ಟು ಶಕ್ತಿಯಾಗಲಿ ಶಿಕ್ಷಣವಾಗಲಿ ಆ ಸಾಮಾನ್ಯ ಮನುಷ್ಯನಿಗಿರಲಿಲ್ಲ. ಅದನ್ನು ಜೀವಾನಂದನು ಅಪೇಕ್ಷಿಸಿಯೂ ಇರಲಿಲ್ಲ. ಆದರೂ ಅವನಿಗೆ ತಡೆಯುವುದಾಗಲಿಲ್ಲ. ದುಃಖದ ಆವೇಗದಿಂದ ಒತ್ತರಿಸುವ ಕಂಬನಿಗಳಲ್ಲಿ ತೊಯ್ದ ಆ ಯಾತ್ರಿಕನ ಮಾತು ಅವನಿಗೆ ಒಳ್ಳೇ ಅಪೂರ್ವವೆಂದೆನಿಸಿದವು. ಆ ಅಮೃತಸೇಚನವನ್ನು ಮತ್ತೆ ಮತ್ತೆ ಅನುಭವಿಸಬೇಕೆಂಬ ಆಶೆ ಅವನಿಗೆ ಅನಿವಾರ್ಯವಾಯಿತು.

ಜೀವಾನಂದನು ಹೇಳತೊಡಗಿದ : "ದುಃಖಿತ ಜನರದೊಂದು ಪ್ರತ್ಯೇಕ ಜಾತಿಯಿಲ್ಲವಯ್ಯಾ. ದುಃಖದ ದಾರಿಯೆಂದರೆ ರಾಜಮಾರ್ಗವಲ್ಲ. ಹಾಗಿದ್ದಿದ್ದರೆ ಎಲ್ಲರೂ ಅದನ್ನು ಬಿಟ್ಟು ಬದಿಗೆ ಸರಿಯುತ್ತಿದ್ದರು. ಎಲ್ಲಿಂದಲೋ ದುಃಖದ ಬೆಟ್ಟವು ತಲೆಯ ಮೇಲೆ ಕಪ್ಪರಿಸಿಕೊಂಡು ಬಿದ್ದಾಗಲೇ ಮನುಷ್ಯನಿಗೆ ಗೊತ್ತಾಗುವುದು! ಆ ಬೆಟ್ಟವು ಎಲ್ಲಿಂದ ಯಾವಾಗ ಬೀಳುವುದೆಂಬುದು ಈವರೆಗೆ ಯಾರಿಗೂ ಸರಿಯಾಗಿ ತಿಳಿದಿಲ್ಲ. ನಾನು

ಮಾತನಾಡುತ್ತಿರುವುದು ನಿನಗೆ ತಿಳಿದಿರಲಿಕ್ಕಿಲ್ಲ. ಆದರೆ ಈ ಜಗತ್ತಿನೊಳಗೆ ನೀನೊಬ್ಬನೇ ಇಲ್ಲ. ಕೊನೆಯ ಪಕ್ಷಕ್ಕೆ ಒಬ್ಬನಾದರೂ ಜೊತೆಗಾರ ನಿನಗೆ ತೀರ ಹತ್ತಿರದಲ್ಲಿಯೇ ಇದ್ದಾನೆ. ಆದರೆ ನೀನವನನ್ನು ಇನ್ನೂ ಗುರುತಿಸಿಲ್ಲ."

ಪಾಪ, ಉಮಾಚರಣನು ಸ್ತಬ್ಧವಾಗಿ ಕೇಳುತ್ತಲಿದ್ದ. ಅವನಿಗೆ ಈ ಮಾತು ತಿಳಿಯಲಿಲ್ಲ. ತನ್ನ ಜೊತೆಗಾರನು ಯಾರೆಂಬುದೂ ಗೊತ್ತಾಗಲಿಲ್ಲ.

ಜೀವಾನಂದನು ಎದ್ದು ನಿಂತು ನುಡಿದ: "ನೀನು ನಾಮಸ್ಮರಣೆ ಮಾಡುತ್ತಿದ್ದೆ, ನಾನು ಬಂದು ಅಡ್ಡಿ ಮಾಡಿದಂತಾಯಿತು. ಸಾಗಲಿ ನಿನ್ನ ಜಪ. ನಾನೀಗ ಹೋಗುತ್ತೇನೆ. ನಾಳೆ ಬಹುಶಃ ಇದೇ ಹೊತ್ತಿಗೆ ಬರುತ್ತೇನೆ."

"ಇನ್ನು ಭೆಟ್ಟಿಯಾಗುವುದಿಲ್ಲ ಬಾಬೂ. ನಾನು ಇಲ್ಲಿಗೆ ಬಂದು ಐದು ದಿನ ಆಯಿತು. ನಾಳೆ ಮುಂಜಾನೆ ಹೊರಡಲಿಕ್ಕೇ ಬೇಕು."

"ಹೊರಡಲಿಕ್ಕೇ ಬೇಕೆ? ಕಾಲು ಒಡೆದಿವೆ, ನಡೆಯಲಿಕ್ಕೆ ಆಗುವುದಿಲ್ಲ, ಎಂದು ಇದೇ ಈಗ ನೀನೇ ಹೇಳಿದೆಯಲ್ಲವೆ?"

"ದೇವಿಯ ಸಂಸ್ಥಾನ ಈಗ ರಾಜಬಾಬುಗಳ ಕಡೆ ಹೋಗಿದೆ. ಮೂರು ದಿವಸಕ್ಕಿಂತ ಹೆಚ್ಚು ಯಾರೂ ಇರಬಾರದೆಂದು ಒಡೆಯರ ಅಪ್ಪಣೆ ಹೊರಟಿದೆ."

ಜೀವಾನಂದನು ನಕ್ಕು ನುಡಿದ: "ಭೈರವಿ ಇನ್ನೂ ಹೋಗಿಲ್ಲ. ಇಷ್ಟರೊಳಗೇ ಒಡೆಯರ ಅಪ್ಪಣೆ ನಡೆದುಬಿಟ್ಟಿತೇನೋ! ಆ ಚಂಡೀದೇವಿಯ ಹಣೇಬರಹ—" ಮಾತನಾಡುವಾಗ ತಟ್ಟನೆ ಏನೋ ನೆನಪಾಗಿ ಅವನು ಅಸ್ವಸ್ಥನಾಗಿ ಕೇಳಿದ: "ಒಳ್ಳೇದು. ಈ ದಿವಸ ಅತಿಥಿ ಸತ್ಕಾರ ಹೇಗಾಯಿತು? ಈವೊತ್ತು ಊಟಕ್ಕೆ ಏನೇನಿತ್ತು?"

"ಮೂರು ದಿವಸದ ಒಳಗಿನ ಜನಕ್ಕೆಲ್ಲ ದೇವಿಯ ಪ್ರಸಾದ ಸಿಕ್ಕಿತು."

"ಮತ್ತೆ ನಿನಗೆ? ನೀನು ಬಂದು ಮೂರು ದಿವಸಕ್ಕಿಂತ ಹೆಚ್ಚು ಆಗಿದೆಯಲ್ಲವೆ?"

ಆ ಬಡಪಾಯಿ ಸಂಭಾವಿತ ಮನುಷ್ಯ. ಸಹಸಾ ಯಾರಸ್ನ್ನು

ದೂರುವ ಚಟ ಅವನಿಗಿರಲಿಲ್ಲ. ಅವನೆಂದ: "ಭಟ್ಟರಾದರೂ ಏನು ಮಾಡಿಯಾರು? ರಾಜಬಾಬುಗಳ ಅಪ್ಪಣೆಯೇ ಹಾಗೆ ಆಗಿದೆಯಲ್ಲವೆ?"

"ಅದೇನೋ ನಿಜ!" ಎಂದು ನಿಟ್ಟುಸಿರು ಬಿಟ್ಟು ಜೀವಾನಂದನು ಸ್ತಬ್ಧನಾದ.

ಅಕಸ್ಮಾತ್ತಾಗಿ ಬರುವ ಯಾತ್ರಿಕರ ಸಲುವಾಗಿ ಮೊದಲಿನಿಂದಲೂ ಹೀಗೆ ನಿಯಮವು ಇರಬಹುದಾಗಿದೆ. ಆದರೆ ಷೋಡಶಿ ಆ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರಲಿಲ್ಲ. ಈಗ ತಾರಾದಾಸ ಏಕಕೌಡಿ ಇಬ್ಬರೂ ಕೂಡಿ ಅದನ್ನು ಅಕ್ಷರಶಃ ರೂಢಿಗೆ ತಂದಿರಬೇಕು.

ವಾಸ್ತವವಾಗಿ ಈ ಬಗ್ಗೆ ಪ್ರತಿಪಾದಿಸುವುದರಲ್ಲಿ ಅರ್ಥವಿರಲಿಲ್ಲ. ಆದರೂ ಈ ಸಂಗತಿ ಜೀವಾನಂದನ ಮನಸಿಗೆ ಸರಿದೋರಲಿಲ್ಲ. ಅವನು ಮನಸಿನೊಳಗೆ ಪುನಃ ಪುನಃ ಎಂದುಕೊಳ್ಳತೊಡಗಿದ: 'ಹೀಗೆ ಆಗ ಕೂಡದು, ಹೀಗೆ ನಡೆಯಲಾಗದು! ಹಸಿದವರಿಗೆ ಅನ್ನ ಹಾಕಲಿಕ್ಕೆ ವಿಧಿ ನಿಷೇಧ ಏಕೆ? ಹಸಿದು ಉಪವಾಸ ಕುಳಿತಿರುವ ಈ ಅತಿಥಿ ಯಾವ ಕಾಯದೆಯ ಬಲದಿಂದ ತನ್ನ ಹಸಿವನ್ನು ಅಡಗಿಸಿಕೊಳ್ಳಬೇಕು?'

"ಏನಣ್ಣಾ, ನಾನು ನಾಳೆ ಮತ್ತೆ ಬರುತ್ತೇನೆ. ನಿನ್ನನ್ನು ಹೀಗೆ ಸುಮ್ಮನೆ ಹೋಗಗೊಡುವುದಿಲ್ಲ, ಹೇಳಿರುತ್ತೇನೆ" ಎಂದ ಜೀವಾನಂದ.

"ಆದರೆ ಭಟ್ಟರು ಏನಾದರೂ ಎಂದರೆ?"

"ಎನಲೊಲ್ಲರೇಕೆ! ಇಷ್ಟು ದುಃಖ ತಾಳಿಕೊಂಡಿದ್ದೀ; ಭಟ್ಟರ ನಾಲ್ಕು ಮಾತು ತಾಳಿಕೊಳ್ಳಲಿಕ್ಕೆ ಆಗುವುದಿಲ್ಲವೇ ನಿನಗೆ?"

ಹೇಗೋ ಕಾಲೆಳೆಯುತ್ತ ಜೀವಾನಂದನು ಹೊರಗೆ ಹೊರಟಿದ್ದ ಗುಡಿಯ ಪಕ್ಕದ ಕಟ್ಟೆಯ ಮೇಲೆ ಯಾರದೋ ಕಳ್ಳದನಿ ಕೇಳಿಸಿತು. ಅವನಿಗೆ ಅಚ್ಚರಿಯಾಯಿತು. ಯಾರೋ ಏಕಾಂತದಲ್ಲಿ ಆರಾಧನೆ ನಡೆಸಿರಬಹುದೆಂದು ಮೊದಲವನಿಗೆ ಭಾಸವಾಯಿತು. ಅಷ್ಟರೊಳಗೆ ಆ ಮನುಷ್ಯನ ಮಾತೇ ಅವನ ಕಿವಿಗೆ ಬಿದ್ದಿತು. ಯಾವನೋ ಒಬ್ಬನು ಹೇಳುತ್ತಿದ್ದ: "ನಮ್ಮ ಅಪ್ಪನ ಸರ್ವನಾಶ ಮಾಡಿದ ಮನುಷ್ಯನನ್ನು ಗೊತ್ತಿಗೆ ಹಚ್ಚದೆ ನಾವೇನೂ ಸುಮ್ಮನೆ ಕೂಡುವುದಿಲ್ಲ."

ಅದಕ್ಕೆ ಇನ್ನೊಬ್ಬನು ಹೇಳಿದ: "ತಾಯಿಯ ಹೊಸತಿಲ ಮುಟ್ಟಿ ಆಣೆ ಮಾಡುತ್ತೇನೆ ಕಕ್ಕ—ಗಲ್ಲಿಗೇರಿಸಿದರೂ ನಾನು ಸಿದ್ಧ—"

"ಹ್ಹ! ನಮಗೆ ಜೇಲೇನು ಗಲ್ಲೇನು! ಅವ್ವನಂತೂ ಹೊರಟಿದ್ದಾಳೆ. ನಿಜವಾಗಿಯೂ ಹೋಗಿಯಂತೂ ಹೋಗಲಿ—"

ಆ ಕತ್ತಲೆಯಲ್ಲಿ ಆ ಜನರ ಮೋರೆಯ ಗುರುತು ಹತ್ತಲಿಲ್ಲ; ಅವರ ಸ್ವರವೂ ಸರಿಯಾಗಿ ಗೊತ್ತಾಗಲಿಲ್ಲ. ಆದರೂ ಅವರಲ್ಲೊಬ್ಬನ ದನಿಯನ್ನು ಎಲ್ಲಿಯೋ ಕೇಳಿದಂತಿದೆ, ಅದು ತೀರ ಹೊಸದೇನೂ ಅಲ್ಲ ಎಂದು ಜೀವಾನಂದನಿಗೆ ಎನಿಸಿತು.

ನೆನಪು ಮಾಡಿಕೊಳ್ಳಲು ಪ್ರಯತ್ನಿಸಿದ್ದರೆ ಆ ಸ್ವರವು ಯಾರದೆಂಬುದನ್ನು ಅವನು ಗುರುತಿಸಬಹುದಾಗಿತ್ತು. ಆದರೆ ಇಂದು ಅವನ ಮನಃಸ್ಥಿತಿಯೇ ಬೇರೆಯಾಗಿತ್ತು. ಅವನು ಎಷ್ಟೋ ಜನರ ಜೀವನವನ್ನು ಹಾಳು ಮಾಡಿದ್ದ ಈ ಮಾತು ತನ್ನ ಬಗ್ಗೆಯೇ ಇರಬೇಕೆಂದು ಅವನಿಗೆನಿಸುವುದು ಸ್ವಾಭಾವಿಕ. ಆದರೂ ಪ್ರಸಂಗವೇನೆಂಬುದನ್ನು ನಿರ್ಧರಿಸುವ ಪ್ರವೃತ್ತಿ ಅವನಿಗಿಂದು ಉಂಟಾಗಲಿಲ್ಲ.

ಮನಸಿನೊಳಗೇ ನಕ್ಕು ಅವನೆಂದುಕೊಂಡ: "ಸತ್ಯವಾದ ಮಾತು. ದೇವ ದೇವತೆಗಳಂಥ ಸಹೃದಯ ಶ್ರೋತೃ ಮತ್ತೊಬ್ಬರಿಲ್ಲ. ಪೊಳ್ಳು ಜಂಬವೇ ಇರಲೊಲ್ಲದೇಕೆ, ಅದಕ್ಕೆ ಬೆಲೆಯಿದೆ. ದುರ್ಬಲ ಜೀವದ ಜೊಳ್ಳು ಪೌರುಷಕ್ಕೆ ಇದರಿಂದಲೇ ಗೌರವದ ಸುಗಂಧ ಹುಟ್ಟುವುದು."

ಯಾರಿಗೂ ಗೊತ್ತಾಗದಂತೆ ಅವನು ಮೆಲ್ಲಗೆ ಹೊರಬಿದ್ದಾಗ ರಾತ್ರಿ ಎರಡು ಪ್ರಹರಕ್ಕೆ ಮಿಕ್ಕಿತ್ತು. ಜಳ ಜಳವಾದ ಕಪ್ಪುಮುಗಿಲು ಚಿಕ್ಕೆಗಳಿಂದ ಗಜಬಜಿಸಿತ್ತು. ಆ ಲೆಕ್ಕವಿಲ್ಲದ ಚಿಕ್ಕೆಗಳ ಅದೃಶ್ಯಪ್ರಕಾಶದ ಮೂಲಕ ಕತ್ತಲೆಯೊಳಗಿನ ದಾರಿ ಅಸ್ಪಷ್ಟವಾಗಿ ಕಾಣುತ್ತಿತ್ತು. ದಾರಿಯಲ್ಲಿ ನಡು ನಡುವೆ ಬಿದ್ದಿದ್ದ ಮಣ್ಣಿನ ರಾಶಿಗಳು ದಣಿದ ದಾರಿಕಾರರಂತೆ ಎಂದಿನಿಂದ ಸ್ತಬ್ಧವಾಗಿ ಕುಳಿತಿದ್ದವೋ ಏನೋ ಅಂತಹುದೊಂದು ರಾಶಿಯ ಹತ್ತಿರ ಹೋಗಿ ಅವನು ಹಾಗೆಯೆ ಧೂಳಿಯಲ್ಲಿ ಕುಳಿತುಕೊಂಡ.

ಇದಿರಿನ ಬಯಲಿನಲ್ಲಿಯೇ ಒಂದು ಕಡೆ ಷೋಡಶಿಯ ಮನೆ. ಎಷ್ಟು [illegible] [illegible]ಂದ ಹೊರಬಿದ್ದು ಅವನ ಮುಂದೆ ಹಾಯ್ದು

ಹೋದರು. ಅವರು ಆಡುತ್ತಿದ್ದ ಮಾತುಗಳಿಂದ, ಷೋಡಶಿಯನ್ನು ಕಳಿಸು ವುದಕ್ಕಾಗಿ ಚಕ್ಕಡಿಯನ್ನು ಅಣಿಮಾಡಲಾಗಿದೆಯೆಂದು ಗೊತ್ತಾಯಿತು. ಬೆಳಗ್ಗೇ ಅವಳು ಚಂಡೀಗಡವನ್ನು ಬಿಟ್ಟು ಹೊರಡುವವಳು. ಆದುದರಿಂದ ಅವಳ ಭಕ್ತರಾದ ಒಕ್ಕಲಿಗರು ಅವಳಿಗೆ ನಮಸ್ಕಾರ ಮಾಡಿ ತಮ್ಮ ತಮ್ಮ ಮನೆಗೆ ಹೋಗುತ್ತಲಿದ್ದರು.

ಅವಳಿಗೆ ಹೋಗಬೇಡವೆಂದು ಹೇಳುವುದಕ್ಕೆ ಜೀವಾನಂದನಿಗೆ ಯಾವ ಆಧಾರವೂ ಇರಲಿಲ್ಲ. ಬೇಡವೆಂದರೂ ಅವಳು ಕೇಳುವವಳಲ್ಲ ವೆಂದು ಇಷ್ಟು ದಿನಗಳ ಪರಿಚಯದಿಂದ ಅವನಿಗೆ ಮನವರಿಕೆಯಾಗಿತ್ತು. ಆದರೆ ಅವನ ಮನಸು ಒಮ್ಮಿಗಿಲೆ ಉದ್ವಿಗ್ನವಾಯಿತು. ತಿಳಿದೋ ತಿಳಿ ಯದೆಯೋ ಅವಳಿಗೆ ಅವನು ಅನ್ಯಾಯ ಮಾಡಿದ್ದ. ಅವುಗಳನ್ನು ಒಂದೊಂದಾಗಿ ಉಲ್ಲೇಖಿಸಿ, ಲೆಕ್ಕದ ಪಟ್ಟಿಯನ್ನು ಸಿದ್ಧಪಡಿಸುವುದು ಇಷ್ಟು ಅವಧಿಯ ಅನಂತರ ಅವನಿಗೆ ಆಗದ ಕೆಲಸ. ಆ ಎಣಿಕೆಯಿಲ್ಲದ ಅತ್ಯಾ ಚಾರಗಳ ರಾಸಿ ಅವನ ಕಣ್ಣೆದುರಿಗೆ ಬೆಟ್ಟದಂತೆ ನಿಂತುಕೊಂಡಿತು. ಆ ಬೆಟ್ಟವನ್ನು ಉರುಳಿಸುವುದಕ್ಕೆ ಇಡೀ ಪ್ರಪಂಚದಲ್ಲಿ ಅವನಿಗೆಲ್ಲಿಯೂ ಇಂಬು ಕಾಣಿಸಲಿಲ್ಲ. ಅವಳನ್ನು ಹೆಂಡತಿಯೆಂದು ಸ್ವೀಕರಿಸುವುದು ಅವನಿ ಗಾಗ ಲಾಂಛನಾಸ್ಪದವೆಂದೆನಿಸಿತ್ತು. ಅವಳನ್ನೀಗ ಸೂಳೆಯೆಂದು ತನ್ನವ ಳನ್ನಾಗಿ ಮಾಡಿಕೊಳ್ಳುವ ರಾಕ್ಷಸವೃತ್ತಿ ತನ್ನ ಹೃದಯದಲ್ಲಿ ಹೇಗೆ ಉಂಟಾ ಯಿತೆಂಬುದು ಅವನಿಗೇ ತಿಳಿಯದಾಯಿತು.

ಇಂದು ಅವನ ಅಖಂಡ ಹೃದಯವು ಷೋಡಶಿಯನ್ನು ಬಯಸು ತ್ತಿತ್ತು. ಅದು ಅವಳ ಹಕ್ಕಿನ ಅಧಿಕಾರ. ಆದರೆ ಈವರೆಗೂ ಅವನು ಅವಳನ್ನು ಉಪೇಕ್ಷಿಸುತ್ತ ಬಂದಿದ್ದ, ಅವಮಾನಕ್ಕೆ ಗುರಿಮಾಡಿದ್ದ. ಸುಳ್ಳಿನ ಮೇಲೆ ಸುಳ್ಳನ್ನೇರಿಸಿ ಇಬ್ಬರ ನಡುವೆ ಗೋಡೆಯನ್ನು ಕಟ್ಟಿದ್ದ. ಅದನ್ನು ದಾಟಿ ಹೋಗುವುದಕ್ಕೆ ದಾರಿ ಎಲ್ಲಿತ್ತು ?

ಇದಿರುಗಡೆ ಯಾರೋ ಅವಸರವಸರದಿಂದ ಹೊರಟಿದ್ದರು. ಆ ವ್ಯಕ್ತಿಯ ಗುರುತು ಕತ್ತಲೆಯಲ್ಲಿಯೂ ಅವನಿಗೆ ಸಿಕ್ಕಿತು. ಅವನು ಕೂಗಿದ.

“ ಅಲಕಾ ! ”

ಷೋಡಶಿ ಚಕಿತೆಯಾಗಿ ನಿಂತುಕೊಂಡಳು. ಕರೆಯಿಂದಲೇ ಅವನು ಜೀವಾನಂದನೆಂದು ಅರಿತುಕೊಂಡಳು. ಪಕ್ಕಕ್ಕೆ ಬಂದು ಅವಳು ಮೆಲ್ಲನೆ ಕೇಳಿದಳು: " ನೀವು ಈ ಕಡೆ ಎಲ್ಲಿಗೆ ? "

ಜೀವಾನಂದನು ಎದ್ದು ನಿಂತು ಹೇಳಿದ: "ಯಾರಿಗೆ ಗೊತ್ತು! ಹೀಗೇ ಬಂದೆ, ಇಲ್ಲಿ ಕೂತುಕೊಂಡೆ. ಹೋಗುವ ಮೊದಲು ದೇವಿಗೆ ನಮಸ್ಕಾರಮಾಡಿ ಬರಲು ಹೊರಟಿದ್ದೀಯೇನು ? ನಡೆ, ನಾನೂ ಬರುತ್ತೇನೆ ನಿನ್ನ ಕೂಡ."

ಇಷ್ಟು ಅಲ್ಪಾವಧಿಯಲ್ಲಿಯೇ ಅವನ ಸ್ವರದಲ್ಲಿ ಎಷ್ಟು ವಿಲಕ್ಷಣ ವ್ಯತ್ಯಾಸ! ಷೋಡಶಿ ಆಶ್ಚರ್ಯದಿಂದ ಸ್ತಂಭಿತಳಾದಳು. ಕೊಂಚ ಹೊತ್ತಿನ ಮೇಲೆ ಅವಳೆಂದಳು: "ನನ್ನ ಕೂಡ ಬಂದರೆ ಅಪಾಯ ವುಂಟೆಂಬುದು ಗೊತ್ತಿದೆಯಷ್ಟೆ ? "

" ಗೊತ್ತಿದೆ. ಆದರೆ ನನ್ನಿಂದಂತೂ ಅಪಾಯವಿಲ್ಲ! ಇಂದು ಒಬ್ಬನೇ ಬಂದಿದ್ದೇನೆ. ಹತ್ತಿರ ಒಂದು ಆಯುಧವಿಲ್ಲ—ಒಂದು ಬಡಿಗೆಯೂ ಇಲ್ಲ."

" ನಾನು ಅದನ್ನು ಕೇಳಿದ್ದೇನೆ. ಪ್ರಫುಲ್ಲಬಾಬು ನಿಮ್ಮನ್ನು ಹುಡುಕಲಿಕ್ಕೆ ಹೊರಟಿದ್ದರು. ಅವರಿಂದ ತಿಳಿಯಿತು – ನೀವು ಈ ದಿನ ಬರಿಗೈಯಿಂದ ಹೊರಟಿದ್ದೀರೆಂದು. ಅಲ್ಲದೆ—"

"ಅಲ್ಲದೆ, ವಿಶೇಷವೆಂದರೆ ಹೆಂಡ ಕುಡಿಯದೆ ಮನೆಯಿಂದ ಹೊರಬಿದ್ದಿದ್ದೇನೆ. ಹೌದಲ್ಲವೊ ? "

" ಹೌದು. ಆದರೆ ಈ ಚಂಡೀಗಡದಲ್ಲಿ ಹೀಗೆಂದೂ ಅಡ್ಡಾಡಬೇಡಿರಿ ನೀವು."

"ಇನ್ನು ಮೇಲೆ ದಿನಾಲು ಹೀಗೆಯೇ ಮಾಡುತ್ತೇನೆ. ಸಾಯುವವರೆಗೂ ಹೀಗೆಯೆ! ಪ್ರಫುಲ್ಲಬಾಬು ನಿನಗೆ ಎಷ್ಟೋ ಮಾತು ಹೇಳಿದ್ದಾನಾದೀತು. ಆದರೆ ಮುಖ್ಯ ಮಾತನ್ನೇ ಹೇಳಿರಲಿಕ್ಕಿಲ್ಲ. ಮಂದಿ ನಂಬಲಿ ಬೇಕಾದರೆ ಬಿಡಲಿ, ಈ ಪ್ರಪಂಚದಲ್ಲಿ ನನ್ನ ಶತ್ರುಗಳಿದ್ದಾರೆಂಬುದನ್ನೇ ನಾನು ಒಪ್ಪುವುದಿಲ್ಲ."

ಷೋಡಶಿ ಸ್ತಬ್ಧವಾಗಿ ನಿಂತುಬಿಟ್ಟಳು. ಅವನ ಮಾತಿನ ಬಗ್ಗೆ

ಅವಳು ಚರ್ಚಿಸಲಿಲ್ಲ, ಅದರ ದೃಢತೆಯ ಬಗ್ಗೆ ಪ್ರಶ್ನಿಸಲೂ ಇಲ್ಲ. ಜೀವಾನಂದನ ಮುಖಮುದ್ರೆ ಅವಳಿಗೆ ಕಂಡುಬರದಿದ್ದರೂ ಅವನ ಶಬ್ದಗಳು ಆ ರಾತ್ರಿಯ ನಿರ್ಜನ ಪ್ರದೇಶದಲ್ಲಿ ಅವಳ ಕಿವಿಯನ್ನು ತುಂಬಿಕೊಂಡೇ ಇದ್ದವು. ಆ ಧ್ವನಿ ಅವಳ ಹೃದಯದಲ್ಲಿ ವಿಲಕ್ಷಣವಾಗಿ ನೆಲೆಯೂರಿದವು.

ಕೆಲ ಹೊತ್ತಿನ ಮೇಲೆ ಅವಳೆಂದಳು: "ನನ್ನ ಕೂಡ ಗುಡ್ಡಿಗೆ ಬರುವುದರಿಂದ ನಿಮಗೇನು ಲಾಭ?"

"ಏನೂ ಇಲ್ಲ. ನೀನಿಲ್ಲಿ ಇರುವ ತನಕ ನಿನ್ನೊಂದಿಗಿದ್ದು, ನೀನು ಹೊರಡುವಾಗ ನಿನ್ನನ್ನು ಬಂಡಿ ಹತ್ತಿಸಿ, ಆಮೇಲೆ ಮನೆಗೆ ಹೋಗುತ್ತೇನೆ."

ಇದಕ್ಕೆ ಉತ್ತರ ಕೊಡುವುದು ಷೋಡಶಿಗೆ ತತ್‌ಕ್ಷಣದಲ್ಲಿ ಸಾಧ್ಯವಾಗಲಿಲ್ಲ. ಜೀವಾನಂದನೆಂದ: "ಅಲಕಾ! ಇಂದು ಹೊರಡುವ ದಿವಸವಾದರೂ ನನ್ನ ಬಗ್ಗೆ ಅವಿಶ್ವಾಸ ಪಡಬೇಡ – ನನ್ನ ಜೀವದ ಬೆಲೆ ನಿನಗೆ ಗೊತ್ತಿದೆ – ಬಹುಶಃ ತಿರುಗಿ ನಿನ್ನ ಭೆಟ್ಟಿ ಕೂಡ ಆಗಲಿಕ್ಕಿಲ್ಲ – ನನಗೆ ನೀನು ಪರಿಪರಿಯಿಂದ ಮಾಡಿದ ಉಪಕಾರವನ್ನು ಕೊನೆಯವರೆಗೂ ಮರೆಯಲಾರೆ––"

"ಒಳ್ಳೇದು, ಬರ್‍ರಿ ಹಾಗಾದರೆ!" ಎಂದು ಷೋಡಶಿ ಮುಂದೆ ನಡೆದಳು.

ಒಂದೆರಡು ನಿಮಿಷ ಮೌನವಾಗಿಯೆ ನಡೆದ ಬಳಿಕ ಜೀವಾನಂದನು ಮಾತನಾಡಿದ: "ಅಲಕಾ, ಇಂಥ ಇಂಥ ಮನುಷ್ಯರು ದಯೆಗೆ ಪಾತ್ರರಲ್ಲ ಎಂದು ಜನ ಎನ್ನುತ್ತಾರೆ. ನೀನೇ ಹೇಳು ಅಲಕಾ, ದಯೆಗೆ ಪಾತ್ರ ಅಪಾತ್ರ ಎಲ್ಲಿಯದು? ಯಾರು ಯಾರ ಬಗ್ಗೆಯೂ ದಯೆ ತೋರಿಸುವುದು ತಮ್ಮ ಅಗತ್ಯಕ್ಕಾಗಿ! ಇಲ್ಲದಿದ್ದರೆ, ನಾನು ದಯೆಗೆ ಪಾತ್ರನೆಂಬ ದೊಡ್ಡ ಆರೋಪವನ್ನು ನನ್ನ ಕಡು ಹಗೆ ಕೂಡ – ಅದೇಕೆ, ನೀನು ಕೂಡ – ಮಾಡಲಾರ."

ಷೋಡಶಿ ಶಾಂತವಾಗಿ ಪ್ರಶ್ನಿಸಿದಳು: "ಪ್ರಪಂಚದೊಳಗೆ ನನಗಿಂತಲೂ ಕಡು ಹಗೆ ಇನ್ನೊಬ್ಬರಿರಲಾರರಲ್ಲವೇ ನಿಮಗೆ?"

"ಇಲ್ಲ."

ಗುಡಿಯಲ್ಲಿ ಪ್ರವೇಶಿಸಿದ ಬಳಿಕ ಜೀವಾನಂದನು ಒಮ್ಮೆಲೆ ನುಡಿದ : "ಏನು ಮೋಜೋ ಏನೋ, ಅಲಕಾ – ಜಗತ್ತಿನಲ್ಲಿ ಯಾರಿಗೆ ಅನ್ನವಿಲ್ಲವೋ ಅವರೇ ಎರಡನೆಯವರ ಅನ್ನದ ಮೇಲೆ ಏರಿಹೋಗುತ್ತಾರೆ—" ಶೋಧಕ ದೃಷ್ಟಿಯಿಂದ ಷೋಡಶಿ ಹಿಂದಿರುಗಿ ನೋಡಿದಳು. ಆಗ ಅವನೆಂದ : "ನಾನು ಇಷ್ಟೊತ್ತನಕ ಗುಡಿಯೊಳಗೇ ಕುಳಿತಿದ್ದೆ. ಈಗ ಭೈರವಿಯಿಲ್ಲ. ಜಮೀನ್ದಾರನೇ ಇಲ್ಲಿಯ ಯಜಮಾನ. ಇಷ್ಟರೊಳಗಾಗಲೇ ಮೂರು ದಿನಗಳ ನಿಯಮವನ್ನು ಯಾತ್ರಿಕರಿಗೆ ವಿಧಿಸಲಾಗಿದೆ. ನಿನ್ನ ಆ ಕುಂಟ ಅತಿಥಿ – ಕಾಲಿನ ನೋವು ವಾಸಿಯಾಗುವ ತನಕ ಇಲ್ಲಿರುವುದಕ್ಕೆ ಅವನಿಗೆ ಸಮ್ಮತಿ ಕೊಟ್ಟಿರಲಿಲ್ಲವೇ ನೀನು ? – ಅವನೇ ನನಗೆ ಹೇಳಿದ. ಧನಿಯರ ಕಟ್ಟಪ್ಪಣೆಯಿಂದ ಅವನಿಗೆ ಈವೊತ್ತು ಊಟವೇ ಇಲ್ಲ. ಆ ಬಡಪಾಯಿ ಹಸಿದ ಹೊಟ್ಟೆಯಲ್ಲಿ ಕೂತುಕೊಂಡು ಚಂಡಿಯ ಜಪ ನಡೆಸಿದ್ದ – 'ಈ ಧನಿಯರಿಗೆ ಕಲ್ಯಾಣವಾಗಲಿ !' ಎಂದು. ನಾಳೆ ಮುಂಜಾನೆಯೇ ಅವನು ಇಲ್ಲಿಂದ ಹೊರಡಬೇಕು – ನಡೆಯಲಿಕ್ಕೆ ಅವನಿಗೆ ಕಾಲಿರಲಿ ಅಥವಾ ಬಿಡಲಿ !"

"ಈ ಅಪ್ಪಣೆಯನ್ನು ನಮ್ಮಪ್ಪ ಕೊಟ್ಟರೇನೊ ?"

"ನಿಮ್ಮಪ್ಪ ಒಬ್ಬರೇ ಏಕೆ? ದೀನ ದುಃಖಿಗಳ ಬಗ್ಗೆ ದಯೆ ತೋರಿಸುವ ಎಷ್ಟೋ ಅಪ್ಪಗಳು ಈ ಊರಲ್ಲಿದ್ದಾರೆ. ಧನಿಯರ ಹೆಸರಿನ ಬೆಂಬಲದಿಂದ ಅವರು ಮುಗಿಲಿಗೇ ಮುಸುಕು ಹಾಕುವರು. ಆ ಮನುಷ್ಯನ ಬದಿಯಲ್ಲಿಯೇ ಕುಳಿತು ನಾನು ಯೋಚಿಸುತ್ತಿದ್ದೆ ಅಲಕಾ – ನೀನು ಹೋದ ಬಳಿಕ ಸಂನ್ಯಾಸಿನಿಯ ಆಸನದ ಮೇಲೆ ಕುಳಿತು ಈ ಎಲ್ಲ ಅಪ್ಪಗಳ ತಂಡದ ತಾಂಡವ ನೃತ್ಯಕ್ಕೆ ಯಾವ ಉಪಾಯದಿಂದ ತಡೆ ಹಾಕಬೇಕೆಂದು."

ಷೋಡಶಿ ಸುಮ್ಮನಿದ್ದಳು. ಜೀವಾನಂದನೂ ಏನೂ ಮಾತನಾಡದೆ ಮನಸಿನೊಳಗೇ ಅನೇಕ ವಿಷಯಗಳನ್ನು ಯೋಚಿಸುತ್ತಲಿದ್ದ.

"ಈ ಸಮಯದಲ್ಲಿ ನಿನ್ನ ಅಗತ್ಯ ಬಹಳವಿದೆ, ಅಲಕಾ ನನಗೆ! ಇನ್ನೆರಡು ದಿವಸ ನಿಲ್ಲಬಲ್ಲೆಯಾ ?" ಜೀವಾನಂದನು ಒಮ್ಮಿಗಿಲೆ ನುಡಿದ.

"ಇಲ್ಲ." ಷೋಡಶಿ ಶಾಂತವಾಗಿ ಉತ್ತರವಿತ್ತಳು. ಬಳಿಕ ಅವಳೆದ್ದು

ಗರ್ಭಗುಡಿಯ ಇಕ್ಕಿದ ಬಾಗಿಲ ಕಡೆ ಹೋದಳು. ದೇವಿಗೆ ಮತ್ತೆ ಮತ್ತೆ ವಂದಿಸಿದಳು.

"ಒಂದು ದಿನವಾದರೂ?" ಅವಳು ತಿರುಗಿ ಬಂದಬಳಿಕ ಜೀವಾನಂದನು ಪ್ರಶ್ನಿಸಿದ.

"ಇಲ್ಲ."

"ಹಾಗಾದರೆ ಇಲ್ಲಿಯೇ ನಿಂತುಕೊಂಡು ನನ್ನ ತಪ್ಪುಗಳನ್ನೆಲ್ಲ ಕ್ಷಮಿಸಿ ಹೋಗು!"

"ಅದೇಕೆ? ನಿಮಗೆ ಅದರ ಅಗತ್ಯ ಅಷ್ಟೇನು?"

ಕ್ಷಣಹೊತ್ತು ಯೋಚಿಸಿ ಜೀವಾನಂದನೆಂದ: "ಈ ಪ್ರಶ್ನೆಗೆ ಉತ್ತರ ಕೊಡುವ ಸಾಮರ್ಥ್ಯ ಇಂದು ನನಗಿಲ್ಲ. ಈಗ ಒಂದೇ ವಿಚಾರ ನನ್ನ ಮನಸನ್ನು ಹಿಡಿದು ಬಿಟ್ಟಿದೆ ಅಲಕಾ – ಯಾವ ಉಪಾಯದಿಂದ ನಿನ್ನನ್ನು ಇಲ್ಲಿ ಹಿಡಿದು ಹಾಕಲಿ ಎಂದು. ಯಾರ ಮನಸು ಅನ್ಯರ ಅಧೀನವಾಗುವುದೋ ಅವನಷ್ಟು ದುರ್ಬಲ ಈ ಜಗತ್ತಿನಲ್ಲಿ ಮತ್ತೊಬ್ಬನಿಲ್ಲ. ನನಗೆ ಎಲ್ಲಕ್ಕೂ ಹೆಚ್ಚಿನ ನೋವೆಂದರೆ, ನಿನ್ನನ್ನು ಶಿಕ್ಷಿಸಿದವನು ನಾನೇ, ನೀನು ಎಲ್ಲವನ್ನೂ ಸಹಿಸಿಕೊಂಡೆ, ನೀರವವಾಗಿ ಹೊರಟುಹೋದೆ, ಎಂದು ಜನರು ಆಡಿಕೊಳ್ಳುತ್ತಾರೆ! ಹೋಗುವ ಮೊದಲು ಚಂಡೀ ಮಾತೆಗೆ ಹೇಳಿ ಹೋಗು, ಇದೆಲ್ಲವೂ ಸುಳ್ಳೆಂದು."

ಏನೊಂದೂ ಉತ್ತರ ಕೊಡದೆ ಷೋಡಶಿ ಮೌನವಾಗಿ ಹೊರಗೆ ಬಂದಳು. ಜೀವಾನಂದನು ಅವಳ ಎದುರಿಗೆ ಬಂದು, ಎರಡೂ ಕೈಗಳನ್ನು ಪಸರಿಸಿಕೊಂಡು ನಿಂತು ನುಡಿದ: "ನಿನ್ನ ಈ ದೇವಿಯ ಮುಂದೆ ನಿಂತು ನೀನು ನನಗೆ ಒಂದೇ ಒಂದು ಮಾತು ಹೇಳು. ಏನು ಮಾಡಿದರೆ ನಿನ್ನನ್ನು ಕನಿಷ್ಠ ಒಂದು ದಿವಸ ಇಲ್ಲಿ ನಿಲ್ಲಿಸಿಕೊಳ್ಳಲಿಕ್ಕಾದೀತು? ಬಳಿಕ ನೀನು—"

"ಚೌಧರಿ ಮಹಾಶಯ, ಎಷ್ಟು ದೈನಾಸ ಬಡುತ್ತೀರಿ? ನಿಮ್ಮ ಹತ್ತಿರ ಯಾರೂ ಆಳು–ಹೋಳು ಇಲ್ಲವೇ ಇಲ್ಲವೇ? ನಾನು ಯಾರೆದುರೂ ಯಾವ ದೂರನ್ನೂ ಒಯ್ಯುವುದಿಲ್ಲವೆಂದು ನಿಮಗೆ ಗೊತ್ತಿದೆ."

ಜೀವಾನಂದನು ಅವಳಿಗೆ ದಾರಿಯನ್ನು ಬಿಟ್ಟು ಬದಿಗೆ ನಿಂತುಕೊಂಡ. ಅವನು ಸಿಟ್ಟುಗೊಳ್ಳಲಿಲ್ಲ, ತಿರುಗಿ ಹೋಗಲಿಲ್ಲ. ವಿನಯಪೂರ್ವಕವಾಗಿ

ನುಡಿದ : “ ಹಾಗಾದರೆ ಹೋಗು ನೀನು. ಆಗದ ದೆಸೆಯಿಂದ ನಾನು ನಿನ್ನನ್ನು ಪೀಡಿಸುವುದಿಲ್ಲ. ಆಳುಹೋಳು ಬೇಕಾದಷ್ಟಿದ್ದಾರೆ ಅಲಕಾ. ಆದರೆ ತಾನಾಗಿ ಹಿಡಿತಕ್ಕೆ ಸಿಕ್ಕದವಳನ್ನು ಬಲವಂತದಿಂದ ಹಿಡಿದಿಟ್ಟು ಆ ಭಾರವನ್ನು ಹೊರುವ ಬಲ ಈಗ ನನ್ನಲ್ಲಿ ಉಳಿದಿಲ್ಲ.”

ಹಾದಿಗೆ ತಡೆಯಿಲ್ಲದಾದರೂ ಷೋಡಶಿ ಮುಂದಡಿಯಿಡಲಿಲ್ಲ. “ ನಾನು ಎಲ್ಲಿಗೆ ಹೋಗುತ್ತೇನೆಂಬುದನ್ನು ಅರಿತುಕೊಳ್ಳಬೇಕೆಂದೂ ನಿಮಗೆನಿಸುವುದಿಲ್ಲವೇ ? ” ಎಂದು ಕೇಳಿದಳು.

“ ಬೇಕಾದಷ್ಟು ಎನಿಸುತ್ತದೆ. ಎಷ್ಟು ಎನಿಸುತ್ತದೆಂದು ಹೇಳಲಿಕ್ಕೆ ಬಾರದು. ಆದರೀಗ ನನ್ನನ್ನು ಕೆರಳಿಸಬೇಡ ಅಲಕಾ. ನೀನು ಎಲ್ಲಿಗೇ ಹೋಗು, ಅಲ್ಲಿ ನಿನಗೆ ಕಷ್ಟವಾಗಬಾರದೆಂದೇ ನನ್ನಿಚ್ಛೆ. ಈಗ ನಿನ್ನ ಮೇಲೆ ಹಗೆ ಸಾಧಿಸುತ್ತಿರುವವರು ನಿನ್ನನ್ನು ಸಂಪೂರ್ಣ ಮರೆತುಬಿಟ್ಟರೆ ಸಾಕು—”

ಮಾತನಾಡುವಾಗ ಅವನ ಕೊರಳುಬ್ಬಿತು. ತನ್ನ ದೌರ್ಬಲ್ಯವನ್ನು ಅವನು ಹೆಚ್ಚಾಗಗೊಡಲಿಲ್ಲ. ಒಂದು ಕ್ಷಣದಲ್ಲಿ ಸಾವರಿಸಿಕೊಂಡು ಅವನೆಂದ : “ ಸ್ವೇಚ್ಛೆಯಿಂದ ತ್ಯಾಗಕ್ಕೆ ಸಿದ್ಧರಾದವರೊಡನೆ ಜಗಳಾಡಲಿಕ್ಕಾಗುವುದಿಲ್ಲವೆಂಬುದು ನನಗೆ ತಿಳಿಯುತ್ತದೆ. ನೀನು ನನ್ನ ಕೈಯೊಳಗೆ ಕೀಲಿಕೈ ಕೊಟ್ಟ ದಿನವೇ ನಾನು ನಿನಗೆ ಪೂರಾ ಸೋತಿದ್ದೇನೆ. ನಿನ್ನ ಮನಸಿನ ಬಲ ಅದ್ಭುತವಾದದ್ದು. ಆದರೂ ಮನುಷ್ಯನ ಮನಸು ತಿಳಿದೂ ತಿಳಿಯದಂಥದು. ಈಗ ಉಂಟಾದ ಈ ಸಂದೇಹ ಸಾಯುವವರೆಗೂ ಹೋಗದು.”

ನಿಂತಿದ್ದಲ್ಲಿಯೇ ಷೋಡಶಿ ಜೀವಾನಂದನ ಅಡಿಗಳ ಮೇಲೆ ತಲೆಯಿಟ್ಟಳು. ಮೇಲೆ ನೋಡಿ ಅವಳೆಂದಳು : “ ನಿಮ್ಮಲ್ಲಿ ನನ್ನದೊಂದೇ ಪ್ರಾರ್ಥನೆ—”

“ ಅದೇನು ಅಲಕಾ ? ”

ಕ್ಷಣ ಸುಮ್ಮನಿದ್ದು ಷೋಡಶಿ “ ಅದು ನಿಮಗೆ ಗೊತ್ತಿದೆ ” ಎಂದಳು.

ಕೊಂಚ ಯೋಚಿಸಿ ಜೀವಾನಂದನೆಂದ : “ ಗೊತ್ತಿರಬಹುದು. ಸ್ವಲ್ಪ ನೆನಪು ಮಾಡಿಕೊಳ್ಳಲು ಪ್ರಯತ್ನಿಸಿದರೆ ನೆನಪೂ ಆಗಬಹುದು – ಆದರೆ, ನೀನೊಂದು ದಿವಸ ನನಗೆ ಜೋಕೆಯಿಂದಿರುವಂತೆ ಹೇಳಿದ್ದೆ – ಏಕೋ

ಯಾರು ಬಲ್ಲರು? ಈಗದು ಶಕ್ಯವಿಲ್ಲವೆಂದು ನನಗೆನಿಸುತ್ತದೆ. ಈಗ ಕೆಲ ಹೊತ್ತಿನ ಮುಂಚೆ, ಯಾರೋ ಇಬ್ಬರು ಗುಡಿಯ ಮುಂದೆ ನಿಂತು ಹೊಸತಿಲು ಮುಟ್ಟಿ ಪ್ರತಿಜ್ಞೆ ಮಾಡುತ್ತಿದ್ದರು – ಅವರ ತಾಯಿಯ ಸರ್ವ ನಾಶ ಮಾಡಿದವರ ಸರ್ವನಾಶ ಮಾಡದೆ ಬಿಡುವುದಿಲ್ಲ ಎಂಬುದೇ ಅವರ ಪ್ರತಿಜ್ಞೆ. ಬದಿಯಲ್ಲಿ ನಿಂತು ನಾನಿದನ್ನು ಕಿವಿಯಾರೆ ಕೇಳಿದ್ದೇನೆ. ಎರಡು ದಿನಗಳ ಮುಂಚೆ ಇದು ನನ್ನ ಕಿವಿಗೆ ಬಿದ್ದಿದ್ದರೆ ಈ ಪ್ರತಿಜ್ಞೆ ನನ್ನ ಬಗ್ಗೆಯೇ ಎಂದು ನಾನು ಭಾವಿಸುತ್ತಿದ್ದೆ. ನನ್ನ ಮೈ ಗದಗದ ನಡುಗುತ್ತಿತ್ತು! ಆದರೆ ಈಗ ಆ ಬಗ್ಗೆ ನನಗೇನೂ ಎನಿಸುವುದಿಲ್ಲ! ಏನೆಂದೆ ಅಲಕಾ?"

"ಇಲ್ಲ, ಏನೂ ಇಲ್ಲ" ಎಂದು ಷೋಡಶಿ ಅತ್ಯಂತ ಬಲಪೂರ್ವಕ ವಾಗಿ ನಿಂತುಕೊಂಡಳು. ಅವಳ ಮುಖವು ಅತ್ಯಂತ ವಿವರ್ಣವಾಗಿತ್ತೆಂ ಬುದು ಕತ್ತಲೆಯಲ್ಲಿ ಜೀವಾನಂದನಿಗೆ ಕಂಡುಬರಲಿಲ್ಲ.

ಅವಳೆಂದಳು: "ನಡೆಯಿರಿ ನಮ್ಮ ಮನೆಗೆ: ಈಪೊತ್ತು ಸ್ವಲ್ಪ ಹೊತ್ತು ಅಲ್ಲಿ ಕೂತುಕೊಳ್ಳಬೇಕು. ನನ್ನನ್ನು ಬಂಡಿಯಲ್ಲಿ ಕೂಡಿಸಿ ಕಳಿ ಸುವ ತನಕ ನಿಮ್ಮನ್ನು ಮನೆಗೆ ಬಿಡುವುದಿಲ್ಲ. ಬರ್ರಿ."

## ೨೫

ಚಕ್ಕಡಿಯ ಬುಡದಲ್ಲಿ ಕಂಬಳಿಯನ್ನು ಚೆಲ್ಲಿಕೊಂಡು ಬಂಡಿಯವನು ಮಲಗಿದ್ದ. ಷೋಡಶಿಯ ಸದ್ದನ್ನು ಕೇಳಿ ಎದ್ದು ಕುಳಿತ.

"ಅವ್ವಾ, ಶೈವಾಲದಿಘಿ ಎಂದರೆ ಹತ್ತು ಹನ್ನೆರಡು ಹರದಾರಿಯ ದಾರಿ. ರಾತ್ರಿ ಇರುವಾಗಲೇ ಇಲ್ಲಿಂದ ಹೊರಡದಿದ್ದರೆ ಅಲ್ಲಿಗೆ ಮುಟ್ಟಲಿಕ್ಕೆ ಮಧ್ಯಾಹ್ನವೇ ಆದೀತು."

"ಆಗಲಿ. ಲಗೂ ಹೊರಡುವಾ" ಎಂದು ಷೋಡಶಿ ಮೂರು ನಾಲ್ಕು ಹೆಜ್ಜೆ ಸಾಗಿದ ಬಳಿಕ ಜೀವಾನಂದನಿಗೆಂದಳು: "ನಾನು ಹೋಗುವು ದೆಲ್ಲಿಗೆ ಎಂಬುದನ್ನು ನೀವು ಕಡೆಗೆ ಕೇಳಿಯೇ ಬಿಟ್ಟಿರಿ."

"ಹೌದು ಕೇಳಿದೆ."

"ಬಹಳ ದೂರವಿಲ್ಲ. ನಿಮ್ಮ ಹಟವೇ ಇದ್ದರೆ ನನ್ನನ್ನು ಹಿಡಿತರಿಸು ವುದು ಹೆಚ್ಚು ತೊಂದರೆಯದಲ್ಲ."

"ಆದರೆ ನಿನ್ನ ವಿಷಯದಲ್ಲಿ ನನಗೆ ಯಾವ ಹಟವೂ ಇಲ್ಲ."

ಬಾಗಿಲನ್ನು ತೆರೆದು ಒಳಗೆ ಹೋಗಿ ಷೋಡಶಿ ನುಡಿದಳು: "ಇದ್ದ ಒಂದೇ ಒಂದು ಕಂಬಳಿಯನ್ನು ಚಕ್ಕಡಿಯೊಳಗೆ ಹಾಸಿದೆ. ನಿಮಗೆ ಹಾಸ ಲಿಕ್ಕೆ ಏನೂ ಇಲ್ಲ. ನಿರ್ಮಲಬಾಬು ಆಗಿದ್ದರೆ ಸೀರೆ ಹಾಸುತ್ತಿದ್ದೆ. ನಿಮಗೆ ಅದು ಆಗುವುದಿಲ್ಲ" ಎಂದು ಅವಳು ಮೆಲ್ಲನೆ ನಕ್ಕಳು.

ಮೂಲೆಯಲ್ಲಿದ್ದ ಚಾಪೆಯನ್ನು ತಂದು ಹಾಕಿ ಅವಳೆಂದಳು: "ನಿಮ್ಮ ದೇನೂ ಅಡ್ಡಿಯಿಲ್ಲದಿದ್ದರೆ—"

ಜೀವಾನಂದನು ಮಾತನಾಡದೆ ಚಾಪೆಯ ಮೇಲೆ ಕುಳಿತುಕೊಂಡ. ಇಷ್ಟು ದೊಡ್ಡ ಶ್ಲೇಷೆಗೂ ಉತ್ತರ ಬಾರದಿದ್ದುದಕ್ಕೆ ಷೋಡಶಿ ಆಶ್ಚರ್ಯ ಚಕಿತೆಯಾದಳು.

ದೀಪದ ಬೆಳಕು ತೀರ ಮಂದವಾಗಿತ್ತು. ಅದರ ಬತ್ತಿಯನ್ನು ಚಾಚಿ, ದೀಪವನ್ನು ಕೈಯೊಳಗೆ ತೆಗೆದುಕೊಂಡು ಅವಳು ಕ್ಷಣಹೊತ್ತು ಜೀವಾ ನಂದನ ಎದುರಿಗೆ ನಿಂತುಕೊಂಡಳು. ಅವನನ್ನು ದಿಟ್ಟಿಸಿ ನೋಡಿ ಪ್ರಶ್ನಿಸಿ ದಳು: "ಏನು ಯೋಚನೆ ನಡೆಸಿದ್ದೀರಿ?"

"ನನ್ನ ಯೋಚನೆಗೇನು ಅಂತವುಂಟೆ?"

"ಅಂತವಿಲ್ಲದಿದ್ದರೆ ಆದಿಯಾದರೂ ಉಂಟಲ್ಲವೆ?"

"ಇಲ್ಲ, ಅದೂ ಇಲ್ಲ. 'ಅಂತ'ವಿಲ್ಲದ ವಸ್ತುವಿಗೆ ಆದಿಯೂ ಇರುವುದಿಲ್ಲ."

"ಇದೆಲ್ಲ ಬಡಾಯಿ,—ಈ ದರ್ಶನಶಾಸ್ತ್ರದ ಮಾತು—ಬರೀ ಶಬ್ದಾ ಡಂಬರ. ಈ ಶಬ್ದದ ಬಲದಿಂದ ಜಗತ್ತು ನಡೆಯಲಾರದು' ಎಂದು ಹೇಳ ಬೇಕೆಂದು ಷೋಡಶಿಯ ಬಾಯಿತನಕ ಬಂದಿತ್ತು. ಆದರೆ ಜೀವಾನಂದನ ಮುಖವನ್ನು ನೋಡಿದೊಡನೆ ಅವಳ ಮುಖದಿಂದ ಮಾತು ಹೊರಹೊರಡ ಲಿಲ್ಲ. ಅವಳಿಗೆ ಮನಸಿನೊಳಗೇ ಬಲು ಅಚ್ಚರಿಯಾಯಿತು. ಏನಾದ ರೊಂದು ಚಮತ್ಕಾರದ ಮಾತನಾಡಬೇಕೆಂದು ಅವನು ಈ ಉದ್ಗಾರವನ್ನು ತೆಗೆದಿರಲಾರ. ವಾದಿಸುತ್ತ ಕುಳಿತುಕೊಳ್ಳುವ ಇಚ್ಛೆಯೂ ಅವನಿಗಾಗ

ಇದ್ದಿರಲಾರದು. ನಿಷ್ಫಲವೆಂಬುದು ನಿಶ್ಚಿತವಿರುವಾಗ, ಗೊತ್ತಿದ್ದ ಮಾತೇ ಆಗಿರುವಾಗ ಏತಕ್ಕೆ ವಾದ ಮಾಡುವುದು? ಅವಳು ಕೆಲಹೊತ್ತು ಮೌನ ವಾಗಿ ಕುಳಿತಿದ್ದಳು. ದೀಪವನ್ನೆತ್ತಿ ಬದಿಗಿಟ್ಟು ಕೈಯನ್ನು ತೊಳೆದು ಕೊಂಡು ಅವಳೆಂದಳು: "ನನ್ನದೊಂದು ಬಿನ್ನಹವಿದೆ."

"ಏನು?"

"ಹಿಂದಕ್ಕೆ ನೀವು ಇದೇ ಸ್ಥಳದಲ್ಲಿ ನೀವಾಗಿ ಬೇಡಿ ಊಟ ಮಾಡಿ ದ್ದಿರಿ. ಈ ದಿನ ನಾನು ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ– ನೀವು ಉಣ್ಣ ಲಿಕ್ಕೆ ಬೇಕು."

"ಹಾಕು! ಹಸಿವೆಯಾಗಿದೆ!"

"ಅದು ನನಗೆ ಗೊತ್ತಿದೆ! ಗಂಡುಸರ ಮೋರೆಯನ್ನು ನೋಡಿದರೆ ಸಾಕು, ಅದು ನಮಗೆ ತಿಳಿಯುತ್ತದೆ" ಎಂದು ಅವಳು ಕೈಯಲ್ಲಿ ನೀರು ತೆಗೆದುಕೊಂಡು ನೆಲವನ್ನು ಸ್ವಚ್ಛಮಾಡಿ ಎಲೆ ಹಾಕಿದಳು.

ಇಂದು ದೇವಿಯ ಪ್ರಸಾದವಿರಲಿಲ್ಲ. ರೈತರು ಏನೇನೋ ಬಹಳ ಬಹಳ ತಂದು ಕೊಟ್ಟಿದ್ದರು. ಅದನ್ನು ತರುವುದಕ್ಕಾಗಿ ಅವಳು ಅಡಿಗೆ ಮನೆಗೆ ಹೋದಳು.

ಜೀವಾನಂದನು ಅಲ್ಲಿ ಒಬ್ಬನೇ ಆದ. ಅವನು ನಾಲ್ಕೂ ಕಡೆಗೆ ನೋಡಿದ. ಅಂದಿನ ಅವೇ ದೌತಿ ಲೆಕ್ಕಣಿಕೆಗಳು ನಾಗೊಂದಿಗೆಯ ಮೇಲಿದ್ದವು. ಒಂದೆರಡು ನಿಮಿಷ ವಿಚಾರಮಗ್ನನಾಗಿದ್ದು ಅವನು ಅವು ಗಳನ್ನು ತೆಗೆದು, ಅದರ ಬಿಳಿದಾದ ಭಾಗವನ್ನು ಹರಿದುಕೊಂಡು, ದೀಪದ ಹತ್ತಿರ ಪತ್ರ ಬರೆಯಲು ಕುಳಿತ.

ವಿಷಯವು ನಾಲ್ಕೈದು ಸಾಲುಗಳಿಗಿಂತ ಹೆಚ್ಚಿನದಿರಲಿಲ್ಲ. ಅವನು ಅದನ್ನು ಬರೆದು ಮುಗಿಸಿ ಕಾಗದವನ್ನು ಮಡಿಚಿದ. ಮೇಲೆ ಷೋಡಶಿಯ ಹೆಸರನ್ನು ಬರೆದು ಜೇಬಿನಲ್ಲಿಟ್ಟುಕೊಂಡ.

ಕೆಲ ಹೊತ್ತಿನಲ್ಲಿ ಷೋಡಶಿ ಬಡಿಸಿದ ತಟ್ಟೆಯೊಂದಿಗೆ ಬಂದಳು. ನನೆದ ಅವಲಕ್ಕಿಯನ್ನು ಹಾಕಿ, ದೊನ್ನೆಯೊಳಗೆ ಮೊಸರಿಟ್ಟು, ಒಂದು ಎಲೆ ಯಲ್ಲಿ ಸಕ್ಕರೆಯನ್ನಿರಿಸಿದಳು.

ಅತ್ಯಂತ ನಮ್ರತೆಯಿಂದ ನಗುತ್ತ ಅವಳೆಂದಳು: "ಶ್ರೀಮಂತರಿಗೆ

ಕೊಡುವುದಕ್ಕೆ ಆ ದಿನ ದೇವಿಯ ಪ್ರಸಾಹವಿತ್ತು. ಈ ದಿನ ಬಡವರ ಮನೆಯ ಮೊಸರವಲಕ್ಕಿ, ಒಂದು ಚಿಮುಟಗೆ ಸಕ್ಕರೆ ಮಾತ್ರ. ನಿಮಗೆ ಸೇರಬಹುದಲ್ಲವೆ?"

ಜೀವಾನಂದನು ಕೈಕಾಲು ತೊಳೆದುಕೊಂಡು ತಿನ್ನಲು ಕುಳಿತ. ಅವನೆಂದ: "ನೀನು ಬಡಿಸಿದ ಬಳಿಕ ಸೇರುವ ಪ್ರಶ್ನೆಯೇ ಇಲ್ಲ ಅಲಕಾ. ಆದರೆ ಹೊಟ್ಟೆಗೆ ತಡೆಯಬೇಕು ಮಾತ್ರ. ಹೊಟ್ಟೆನೋವೊಂದಿದೆಯಲ್ಲ ನನಗೆ—"

ಅವನ ಮಾತು ಮುಗಿಯುವುದರೊಳಗೇ ಷೋಡಶಿ ಬಡಿಸಿದ ತಟ್ಟೆಯನ್ನು ಈಚೆಗೆ ಎಳೆದುಕೊಂಡಳು. ನಾಚಿಕೆಪಟ್ಟುಕೊಂಡು, ವಿಹ್ವಲೆಯಾಗಿ ಗಲ್ಲ ಬಡಿದುಕೊಂಡು ಅವಳೆಂದಳು: "ಸುಟ್ಟಿತು ನನ್ನ ಬುದ್ಧಿ! ಅದು ಹೇಗೆ ಮರೆಯಿತೊ! ಛೆ ಛೆ, ಸತ್ತರೂ ನಿಮಗಿದನ್ನು ತಿನ್ನಗೊಡುವುದಿಲ್ಲ."

ತಾನಾಡಿದ ಮಾತಿಗಾಗಿ ಜೀವಾನಂದನಿಗೂ ನಾಚಿಕೆಯಾಯಿತು. ಅವನೆಂದ: "ಹೆಚ್ಚು ತಿನ್ನದಿದ್ದರೆ ಬಾಧಿಸಲಿಕ್ಕಿಲ್ಲವೆಂದು ನನಗೆನಿಸುತ್ತದೆ."

"ಎನಿಸುತ್ತದೆ! ನಿಮಗೆನಿಸುತ್ತವೆಯೆಂದು ನಿಮಗೆ ನಡೆದೀತು – ನನಗೆ ನಡೆಯುವುದಿಲ್ಲ."

"ಅದರೆ ನಾನು ಏನೂ ತೆಗೆದುಕೊಳ್ಳದಿದ್ದರೆ ನಿನಗೆ ಕೆಟ್ಟೆನಿಸಲಿಕ್ಕಿಲ್ಲವೆ?"

ಕಣ್ಣುಗಳನ್ನು ಇಷ್ಟಗಲ ಹಿಗ್ಗಿಸಿ ಅವನ ಕಡೆ ನೋಡುತ್ತ ಷೋಡಶಿ ನುಡಿದಳು: "ಕೆಟ್ಟೆನಿಸುವುದಷ್ಟೇನೇ? ಹೋಗುವ ಹೊತ್ತಿನಲ್ಲಿ ನಿಮ್ಮ ಬಾಯೊಳಗಿನ ತುತ್ತನ್ನು ಕಸಿದುಕೊಂಡದ್ದಕ್ಕೆ ಏನೇನೂ ಕೊಡದಿದ್ದಕ್ಕೆ ಅಳುತ್ತಳುತ್ತಲೇ ನನ್ನ ಜೀವ ಸಣ್ಣಾಗಲಿಕ್ಕಿಲ್ಲವೆ?"

ಅವಳು ಕೆಲಹೊತ್ತು ಸುಮ್ಮನಿದ್ದಳು. ಹಠಾತ್ ಏನೋ ನೆನಪಾದವಳಂತೆ - ಮಾತನಾಡಿದಳು: "ಆ ದಿವಸ ಸಾವಿರ ಜೊಂಜಾಟಗಳಲ್ಲಿ ಅಡಿಗೆ ಮಾಡಲಿಕ್ಕೆ ಪುರಸತ್ತಾಗಿರಲಿಲ್ಲ. ಈವೊತ್ತು ಒಲೆಯ ಮುಂದೆ ಕೂತಿದ್ದೆ. ಅನ್ನ ಮೀನದ ಪಲ್ಯ—"

"ಮೀನ ನಿನಗೆ ಆಗುತ್ತದೆಯೆ?"

ಷೋಡಶಿ ನಕ್ಕು ಉತ್ತರವಿತ್ತಳು : "ಅದೇಕೆ ಆಗುವುದಿಲ್ಲ? ನಾನೇನು ವಿಧವೆಯೆ? ನಾನು ಎಲ್ಲವನ್ನೂ ತಿನ್ನುತ್ತೇನೆ."

ಇಷ್ಟು ಹೊತ್ತಿನ ತರುವಾಯ ಜೀವಾನಂದನು ಈಗ ನಕ್ಕ. "ಹೀಗೋ? ಅದನ್ನೆಲ್ಲ ನಿನಗೇ ಇಟ್ಟುಕೊಂಡು ನನಗೆ ಬರೀ ಫರಾಳದ ಕೃಪೆ ಮಾಡಿದೆಯಲ್ಲವೇ?" ಎಂದ.

ಷೋಡಶಿ ತಟ್ಟನೆ ನುಡಿದಳು: "ನನ್ನಿಂದ ತಪ್ಪಾಯಿತು, ಅಪರಾಧ ವಾಯಿತು. ನೂರು ಸಾರೆ ಕ್ಷಮೆ ಬೇಡುತ್ತೇನೆ. ಬೇಕಾದರೆ ನಿಮ್ಮೆದುರಿಗೆ ಹತ್ತು ಸಲ ನೆಲಕ್ಕೆ ಮೂಗು ತಿಕ್ಕುತ್ತೇನೆ–" ಎಂದು ಅವಳು ಮೊಸರವಲಕ್ಕಿಯ ಎಲೆಯನ್ನೆತ್ತಿಕೊಂಡು, ಅಡಿಗೆಯನ್ನು ತರುವುದಕ್ಕಾಗಿ ನಗುನಗುತ್ತ ಒಳಗೆ ಹೊರಟು ಹೋದಳು.

ತನ್ನ ವಿಚಾರಕ್ಕೆ ಆದಿ ಅಂತ ಇಲ್ಲವೆಂದು ಜೀವಾನಂದನು ಹೇಳಿದ್ದ. ಅದು ಪೂರ್ಣ ಸತ್ಯ; ಅತಿಶಯೋಕ್ತಿ ಅದರಲ್ಲಿ ಕೊಂಚವೂ ಇಲ್ಲ. ತನ್ನ ಜೀವನದ ಸಿಂಹಾವಲೋಕನ ಮಾಡುವುದು ಅವನಿಗೆ ಎಂದೂ ಆಗಿರಲಿಲ್ಲ. ಅಂತಹ ಸಂದರ್ಭವೇ ಬಂದಾಗ ಬೇರೆ ಏನಾದರೂ ಮಾಡಿ ಕಾಲ ನೂಕುವುದು ಅವನ ರೂಢಿ. ಎಂತಲೇ ಕ್ಷಣಿಕ ಉಪಯೋಗಕ್ಕಾಗಿ ಹುಟ್ಟಿವ ಕಿರಿಯ ಕರವಸ್ತ್ರದ ಪ್ರಯೋಜನವು ಡಾಕಾದ ಉಪ್ಪರಣೆಗಿಂತಲೂ ಹೆಚ್ಚಿನದೆಂದು ಎನಿಸುತ್ತಿತ್ತು ಅವನಿಗೆ. ಅದಕ್ಕೇ ಮಗ್ಗಲು ಹಾಸಿಗೆ ಇಲ್ಲದುದಕ್ಕೆ ಬೆಲೆ ಬಾಳುವ ಶಲ್ಯವನ್ನು ಹಾಸಿಕೊಂಡಿದ್ದ. ಅದಕ್ಕೇ, ಬಳಿಯಲ್ಲಿ ಆ್ಯಶ್‌ಟ್ರೇ ಇಲ್ಲದುದಕ್ಕೆ ಬಂಗಾರದ ವಾಚಿನ ಮೇಲೆ ಉರಿಯುವ ಚಿರೂಟನ್ನು ಇಡುವುದಕ್ಕೆ ಅವನಿಗೇನೂ ಎನಿಸುತ್ತಿರಲಿಲ್ಲ.

ಭವಿಷ್ಯತ್ಕಾಲಕ್ಕೆ ಅವನ ಯೋಚನೆಯಲ್ಲಿ ಇಂಬೇ ಇರಲಿಲ್ಲ. ಮುಂದೇನಾಗುವುದೆಂಬುದನ್ನು–ಪ್ರತಕ್ಷ್ಯವಾಗಿ ಘಟಿಸದೆ ಇದ್ದುದನ್ನು–ತಿಳಿದುಕೊಳ್ಳುವ ಪ್ರವೃತ್ತಿಯೇ ಅವನಿಗಾಗುತ್ತಿರಲಿಲ್ಲ. ಕಣ್ಣಿಗೆ ಕಾಣುವ ಸ್ತ್ರೀ ದೇಹದಲ್ಲಿಯೇ ಅವನ ಆಸಕ್ತಿ. ಹೊರಗಣ್ಣಿಗೆ ಕಾಣದ, ದೇಹದ ವ... ಹೆಣ್ಣುತನದ ಲೆಕ್ಕವೇ ಇದ್ದಿಲ್ಲ.

ಯೌವನದ ಕೊನೆಯನ್ನು ತಲುಪಿದಾಗ, ಗ್ರಹಗತಿ ತಿರ... ಈ ದಟ್ಟಡವಿಯಲ್ಲಿ ಅವನು ಬಂದು ಬಿದ್ದಿದ್ದ. ಇದು ಅವನಿಗೆ ...

ದಲ್ಲ. ಸಾವಿರ ವ್ರತ ಉಪವಾಸಗಳನ್ನು ಮಾಡಿ ಅವಳ ಯೌವನವು ರುಕ್ಷ ವಾಗಿದೆ, ಕುಗ್ಗಿ ಹೋಗಿದೆ, ರೂಪವೂ ಕಠಿನವೂ ಕಾಂತಿಹೀನವೂ ಆಗಿದೆ; ಇಂತಹ ಅಲಕೆಯ ಸುತ್ತಲೂ ತನ್ನ ಮನಸು ಏಕೆ ಸುತ್ತಾಡುತ್ತಿದೆ? ಮತ್ತೆ ಮತ್ತೆ ಅವಳ ಅಭಿಲಾಷೆಯುಂಟಾಗಿ ಜಗತ್ತೇ ಏಕೆ ಬೇಸರವಾಗುತ್ತಿದೆ? ಈ ಅಕಾರಣವಾದ ಮೋಹದ ಪರಿಷ್ಕಾರವೇ ಅವನಿಗೆ ಆಗದಾಗಿತ್ತು.

ಈ ನಾರಿ ತನ್ನ ಕೊರತೆಯನ್ನು ಪೂರಯಿಸಬಲ್ಲಳು, ಯಾರಿಗೂ ಗೊತ್ತಾಗದಂತೆ. ಹೀಗೇಕೆ ಆಗಬೇಕೆಂಬ ಅಪರಿಮಿತ ಆಲೋಚನೆಯ ದಡವು ಅವನಿಗೆ ಸಿಕ್ಕದಾಗಿತ್ತು.

ಊಟಕ್ಕೆ ಕುಳಿತಾಗ ಅವನ ಮನಸು ಎಲ್ಲಿಯೋ ಇತ್ತು. ಎದುರಿಗೆ ತೆರೆದ ಬಾಗಿಲ ಕಡೆ ಬೆನ್ನು ಮಾಡಿಕೊಂಡು ಕುಳಿತಿದ್ದಳು ಷೋಡಶಿ. ಒಂದೆರೆಡು ಪ್ರಶ್ನೆಗಳಿಗೆ [illegible]ಯಾಗಿ ಉತ್ತರ ಬಂದುದನ್ನು ಕಂಡು ಅವಳು ಕೇಳಿದಳು: "ಏನು ವಿಚಾರ ಮಾಡುತ್ತಿದ್ದೀರಿ? ನನ್ನ ಮಾತಿಗೆ ಉತ್ತರ ಕೊಡುವುದಿಲ್ಲವೆ?"

"ಏತಕ್ಕೆ ಉತ್ತರ?"

"ಇನ್ನು ಮೇಲೆ ಇಲ್ಲಿ ನಿಮ್ಮ ಕೆಲಸವೇನೂ ಇಲ್ಲ. ಚಂಡೀಗಡವನ್ನು ಬಿಟ್ಟು ನಿಮ್ಮೂರಿಗೆ ಹೋಗುವುದು ಯೋಗ್ಯವಲ್ಲವೆ?"

ಜೀವಾನಂದನ ಚಿತ್ತವಿನ್ನೂ ಸ್ವಸ್ಥಾನಕ್ಕೆ ಬಂದಿರಲಿಲ್ಲ. ಷೋಡಶಿಯ ಪ್ರಶ್ನೆ ಅವನಿಗೆ ಸರಿಯಾಗಿ ಅರ್ಥವಾಗಲಿಲ್ಲ. "ಏಕೆ? ಕೆಲಸವಿಲ್ಲವೆ?" ಎಂದು ಕೇಳಿದ.

"ನಿಮಗಿಲ್ಲಿ ಕೆಲಸವಿದ್ದಂತೆ ನನಗಂತೂ ಕಾಣುವುದಿಲ್ಲ. ಈ ಊರು ನಿಮ್ಮದು. ಅದಕ್ಕೆ ಇಲ್ಲಿಯ ಪಾಪವನ್ನು ತೊಳೆಯುವುದಕ್ಕೆಂದು ನೀವು ಬಂದಿದ್ದಿರಿ. ಈ ಪಾಪಿಷ್ಠೆಯನ್ನು ಗಡಿ ದಾಟಿಸಿದ ಬಳಿಕ ನೀವಿಲ್ಲಿ ಏತಕ್ಕೆ ಇರುತ್ತೀರಿ?"

"ಆದರೆ ನೀನು ಪಾಪಿಷ್ಠೆಯಲ್ಲ!" ಎಂದು ನುಡಿದು ಜೀವಾನಂದನು ಅವಳನ್ನೇ ದಿಟ್ಟಿಸತೊಡಗಿದ.

ನಿಮಿಷ ಮಾತ್ರ ನೋಟಕ್ಕೆ ನೋಟ ಕೂಡಿದವು. ಕ್ಷಿಪ್ರದಲ್ಲಿಯೇ ಷೋಡಶಿ ಮುಖ ತಿರುಗಿಸಿಕೊಂಡಳು. ಇಷ್ಟು ಹೊತ್ತು ಇಷ್ಟು ಮಾತು

ಕತೆ ನಡೆದರೂ ತಿಳಿಯದಿದ್ದುದು, ಈ ಪ್ರಥಮ ದೃಷ್ಟಿ ಸಂಗಮದಿಂದ ತಿಳಿಯಿತು. ಜೀವಾನಂದನಿಗೆ ಆಶ್ಚರ್ಯವಾಯಿತು.

ಬುದ್ಧಿಯ ತೀವ್ರತೆ ಜೀವಾನಂದನ ದೃಷ್ಟಿಯಲ್ಲಿ ಗೋಚರಿಸುತ್ತಿದ್ದಿಲ್ಲ. ಅವನ ನೋಟವು ಕೂಡ ಅವನ ಮಾತಿನಂತೆ ಸ್ಪಷ್ಟ, ಸರಳ, ಸ್ಥೂಲ.

ಇಷ್ಟು ಕೆರಳಿಸಿದರೂ, ಇಷ್ಟು ಚುಚ್ಚಿದರೂ ಈ ಹೆಂಗುಸಿನ ಮೇಲೆ ಏನೂ ಪರಿಣಾಮವಾಗುವುದಿಲ್ಲವೆಂಬುದನ್ನು ಅವನು ಪ್ರತ್ಯಕ್ಷವಾಗಿ ಕಂಡ. ಕಿಂಚಿತ್ ಕಾಲ ಅವನು ಸುಮ್ಮನೆ ಇದ್ದ.

"ಹಾಗೆ ನೋಡಿದರೆ, ನನಗಿಂತ ಮುಂಚೆ ನೀವೇ ಇದನ್ನು ಚೆನ್ನಾಗಿ ಬಲ್ಲಿರಿ." ಷೋಡಶಿಯೆಂದಳು.

"ಆದರೆ ನಿನ್ನಲ್ಲಿ ನಿರ್ಮಲನ ಪ್ರೇಮವಿದ್ದದ್ದಂತೂ ಸತ್ಯವೆ?"

ಉತ್ತರ ಕೊಡುವಾಗ ಷೋಡಶಿಯ ಮುಖವು ಕೆಂಪಾಗಿತ್ತು. ಪಕ್ಕಕ್ಕೆ ನೋಡುತ್ತ ಅವಳು ಹೇಳಿದಳು: "ಮತ್ತೆ ಯಾರದೋ ಪ್ರೇಮದ ಸಲ್ಲದ ಜೀವನದ ದೆಸೆಯಿಂದ ನನ್ನ ಜೀವನವು ಅಸಹ್ಯವಾದರೆ ಅದೂ ನನ್ನ ತಪ್ಪೆ? —"

ಅವಳು ಮಾತನ್ನೇನೋ ಆಡಿದಳು. ಮಾತು ತುಟಿ ಮೀರಿದ ಬಳಿಕ, ಅವನ ಮೋರೆಯಲ್ಲಿ ಪಶ್ಚಾತ್ತಾಪದ ಛಾಯೆ ಅವಳಿಗೆ ನಿಚ್ಚಳವಾಗಿ ಕಂಡು ಬಂದಿತು. ಒಡನೆಯೆ ಆಡಿದ ಮಾತನ್ನು ತಿದ್ದಿಕೊಳ್ಳುವುದಕ್ಕಾಗಿ ಅವಳೆಂದಳು: "ಆದರೆ ನನ್ನ ತಪ್ಪಿಗೆ ಅವರು ಹೊಣೆಯಲ್ಲ!"

"ಏಕೆ, ಊಟ ನಿಂತುಬಿಟ್ಟಿತು? ಎಲ್ಲವೂ ಹಾಗೆಯೇ ಇದೆಯಲ್ಲ" ಬಡಿಸಿಟ್ಟಿದ್ದ ತಟ್ಟೆಯ ಕಡೆ ನೋಡಿ ಷೋಡಶಿಯೆಂದಳು.

"ಇಲ್ಲ, ಉಣ್ಣುತ್ತೇನಲ್ಲ" ಎಂದು ಜೀವಾನಂದನು ಉಣ್ಣಲಾರಂಭಿಸಿದ.

"ಇನ್ನೂ ಬಹಳ ತಡವೇನು ಅವ್ವಾ?" ಬಂಡಿಯವನು ಹೊರಗಿನಿಂದ ಕೂಗಿ ಕೇಳಿದ.

"ಇಲ್ಲಪ್ಪ, ಬೇಗನೆ ಹೊರಡೋಣ" ಎಂದು ಷೋಡಶಿ ಜೀವಾನಂದನನ್ನು ಕುರಿತು "ಈ ಚಂಡೀಗಡ ಬಿಟ್ಟು ಹೋಗಲಿಕ್ಕೇ ಬೇಕು ನೀವು, ಹೇಳಿರುತ್ತೇನೆ" ಎಂದಳು.

"ಎಲ್ಲಿ ಹೋಗಲಿ, ಹೇಳಿಲ್ಲ!"

"ಏಕೆ? ನಿಮ್ಮೂರಿಗೆ – ಬೀಜಗಾವಿಗೆ!"

"ಆಗಲಿ, ಹೋಗುತ್ತೇನೆ!"

"ನಾಳೆಯೇ ಹೋಗಬೇಕು."

ಅವಳ ಕಡೆ ನೋಡುತ್ತ ಜೀವಾನಂದನು ಉತ್ತರಿಸಿದ: "ನಾಳೆಯೆ? ಕೆಲಸ ಇದೆಯಲ್ಲವೆ? ಕಾಲುವೆ ಕಡಿಸಬೇಕು, ಸಂಕ ಕಟ್ಟಿಸಬೇಕು, ಆ ಜನರ ಹೊಲಗದ್ದೆ ಅವರಿಗೆ ಕೊಡಿಸಬೇಕು. ನಿನ್ನ ಅಪ್ಪಣೆಯೇ ಅಲ್ಲವೆ ಇದೆಲ್ಲ? ಅಲ್ಲದೆ ದೇವಸ್ಥಾನದ ವ್ಯವಸ್ಥೆಯನ್ನೂ ನಡೆಸಬೇಕು: ಅತಿಥಿ ಅಭ್ಯಾಗತರಿಗೆ ಅನ್ಯಾಯವಾಗದ ಹಾಗೆ ಏನಾದರೂ ಮಾಡಬೇಕು. ಇವನ್ನೆಲ್ಲ ಬಿಟ್ಟೇ ಹೋಗೆನ್ನುವೆಯಾ?"

ಷೋಡಶಿಗೆ ತೊಂದರೆಗಿಟ್ಟುಕೊಂಡಿತು. ಆದರೂ ಅವಳು ನಗು ನಗುತ್ತ ಕೇಳಿದಳು: "ಈ ಸಂಕಲ್ಪಗಳೆಲ್ಲ ನಾಳೆ ಬೆಳಗಿನವರೆಗೂ ಉಳಿದಿರುವವೇನು?"

ಅವನು ಅವಳ ಚೇಷ್ಟೆಗೆ ಪ್ರತಿಚೇಷ್ಟೆ ಮಾಡಲಿಲ್ಲ. ಸುಮ್ಮನೆ ಇದ್ದ.

"ಹಾಗಾದರೆ, ಅಗತ್ಯಕ್ಕಿಂತ ಹೆಚ್ಚು ದಿನ ಇರುವುದಿಲ್ಲವೆಂದು ವಚನ ಕೊಡಿರಿ. ಮತ್ತೆ ನೀವು ಜೋಕೆಯಿಂದಲೇ ಇರಬೇಕು, ಎಂಬುದನ್ನು ನಾನು ಆಗಲೇ ಹೇಳಿದ್ದೇನೆ. ಹಾಗೆ ಮಾಡುವಿರಿ ತಾನೆ?"

ಈ ಮಾತಿಗೂ ಅವನು ಉತ್ತರ ಕೊಡಲಿಲ್ಲ. ನೀರವನಾಗಿ ಉಣ್ಣುತ್ತಲಿದ್ದ. ಉತ್ತರ ಪಡೆಯಬೇಕೆಂಬ ಆಗ್ರಹವೂ ಷೋಡಶಿಗಿರಲಿಲ್ಲ. ಅವನ ಬಾಯಿ ಆಡಬಹುದಾದುದಕ್ಕಿಂತ ಆ ಮೌನವೇ ಹೆಚ್ಚು ಮಾತನಾಡಿತು. ಜೀವಾನಂದನ ಅಂತರ್ಯದಲ್ಲಿ ಆದ ಪರಿವರ್ತನೆಗೆ ಸಾಕ್ಷಿಯಾಗಿತ್ತು ಅದು.

ಅವನ ಊಟ ಮುಗಿಯಿತು. ಅವಳು ಹೊರತನಕ ಹೋಗಿ ಅವನ ಕೈಗೆ ನೀರು ಹನಿಸಿದಳು. ಇದ್ದ ಒಂದೇ ಮಂಚದಲ್ಲಿ ಬಟ್ಟೆಬರೆಗಳನ್ನು ಕಟ್ಟಲಾಗಿತ್ತು. ಆ ಮೂಟೆ ಆಗಲೇ ಒಂದೆಡೆಯನ್ನು ಕಾದಿತ್ತು. ಷೋಡಶಿ ತನ್ನ ಸೀರೆಯ ಸೆರಗನ್ನೇ ಮುಂದೆ ಮಾಡಿ "ಇಗೋ, ತಕ್ಕೊಳ್ಳಿರಿ" ಎಂದಳು.

ಸೆರಗಿನಿಂದ ಕೈಬಾಯಿ ಒರಸಿಕೊಂಡು ಜೀವಾನಂದನು ನುಡಿದ: "ಹೀಗೆ ಮತ್ತಾರಿಗೂ ಈ ಸೆರಗು ಕೊಡುತ್ತಿರಲಿಕ್ಕಿಲ್ಲ ಅಲ್ಲವಾ!"

ಅವನ ಕೈಯಿಂದ ಸೆರಗನ್ನು ಕೊಸರಿಕೊಂಡು ಸೋದರಿ ಹೇಳಿದಳು: "ಇನ್ನು ಸ್ವಲ್ಪ ಒಳಗೆ ಬಂದು ಕೂತುಕೊಳ್ಳಿರಿ. ಸಾವರಿಸಿಕೊಳ್ಳುವುದಕ್ಕೆ ತಡವೇನಾಗುವುದಿಲ್ಲ. ನನ್ನನ್ನು ಬಂಧನದಲ್ಲಿ ಕೂಡ್ರಿಸಿದಿರಿ ನೀವು—"

"ಅರ್ಥಾತ್. ನಿನ್ನನ್ನು ಗತಿ ದಾಟಿಸುವ ಕೆಲಸವನ್ನೊಮ್ಮೆ ತೀರಿಸಿ ಬಿಡುತ್ತೇನೆ. ಇಷ್ಟೇ ಹೇಳಲಿಕ್ಕೆ? ಒಳ್ಳೇದು. ಹಾಗಾದರೆ ಆಗಿ ಹೋಗಲಿ. ಆದರೆ ನಿನ್ನದೊಂದು ಕೆಲಸ ಉಳಿದಿದೆ. ನನ್ನ ಕೃತಕರ್ಮದ ಫಲವನ್ನು ನಾನಲ್ಲದೆ ಯಾರು ಉಣ್ಣಬೇಕು? ಆ ಭಾರವನ್ನು ಎರಡನೆಯವರ ಮೇಲೆ ನಾನೆಂದಿಗೂ ಹಾಕಲಾರೆ. ಆದರೆ ಹೋಗುವ ಮೊದಲು ನಿನ್ನಲ್ಲಿ ನನ್ನದೊಂದು ಬೇಡಿಕೆ. ಇನ್ನು ನೋಡಿ ಸತ್ತ [illegible] ಆಗಬಾರದು." ಎಂದು ನುಡಿದು ಜೀವಾನಂದನು ಒಳಗೆ ಬಂದು ಜೇಬಿನಲ್ಲಿಂದ ಪತ್ರವನ್ನು ತೆಗೆದು ಸೋದರಿಯ ಕೈಗೆ ಕೊಡುತ್ತ "ಇಡೀ ದಿನ ನೀನು ಉಪವಾಸ ಇದ್ದೀ. ಈಗ ಒಂದು ತುತ್ತು ಊಟ ಮಾಡು. ಅಷ್ಟರೊಳಗೆ ಕತ್ತಲೆ ಮೊಳಗನ್ನು ತಿರುಗಾಡಿ ಬರುತ್ತೇನೆ" ಎಂದ

ಅವನು ಹೊರಗೆ ಹೊರಡುತ್ತಿರುವುದನ್ನು ಕಂಡು ಸೋದರಿ ಒಮ್ಮೆಲೆ ಬಾಗಿಲು ಕಟ್ಟಿಕೊಂಡು ನಿಂತಳು. ಇಷ್ಟೆಲ್ಲ ಆದಮೇಲೆಯೂ, ಈವರೆಗೆಂದೂ ಅನ್ಯರ ದುಃಖವನ್ನರಿಯದ ಮನುಷ್ಯನು ಅವಳು ಉಪವಾಸವಿರುವಳೆಂಬ ಕ್ಷುದ್ರ ಸಂಗತಿಯನ್ನೂ ಗಮನಿಸಿದ್ದಾನೆಂಬುದು ಅವಳ ಮನಸಿಗೆ ಚೆನ್ನಾಗಿಯೇ ಬಿಂಬಿಸಿತು. ತನ್ನ ಕೈಯೊಳಗಿನ ಕಾಗದದ ಕಡೆಗೆ ಗಮನ ಹೋಗಲು ಅವಳು ಪ್ರಶ್ನಿಸಿದಳು: "ನನಗೇ ಬರೆದದ್ದು ಈ ಪತ್ರ. ನಿಮ್ಮೆದುರಿಗೇ ಓದಿಕೊಂಡರೆ ಆಗದೇ?"

"ಆಗಬಹುದು. ಅಂಥ ಅವಸರವೇನು? ನನಗೇನೂ ಅದರ ಉತ್ತರ ಬೇಕಾಗಿಲ್ಲ. ನನ್ನನ್ನು ಉಳಿಸುವುದಕ್ಕಾಗಿ ನೀನು ಎಷ್ಟೋ ಸಂಕಟಗಳನ್ನು ಮೈಮೇಲೆ ಹಾಕಿಕೊಂಡಿದ್ದೀ. ಇಲ್ಲದಿದ್ದರೆ ನೀನೆಲ್ಲಿ ಹೀಗೆ ಹೋಗಬೇಕಾಗುತ್ತಿತ್ತು? ನನ್ನ ಕೊನೆಯ ಹಾರಯಿಕೆ ಇದರಲ್ಲಿದೆ. ನೀನದನ್ನು ಮನ್ನಿಸಿದೆಯಾದರೆ ನನ್ನ ಆನಂದಕ್ಕೆ ಎಲ್ಲೆಕಟ್ಟು ಇಲ್ಲ."

ಅವಳೆಂದಳು: “ಸಂಸಾರದ ಆಶೆಯನ್ನೇ ಬಿಟ್ಟಿದ್ದೀರೋ ಏನು ನೀವು? ತಗೋ ತಗೋ ಎಂದು ಎಲ್ಲವನ್ನೂ ಕೊಟ್ಟುಬಿಟ್ಟು, ಕಡೆಗೆ ಸಂನ್ಯಾಸಿಯಾಗಿ ಊರೂರು ಅಲೆಯಬೇಕೆಂದು ಮಾಡಿದ್ದೀರೇನು?”

ಈ ಪ್ರಶ್ನೆ ಇಬ್ಬರಿಗೂ ವಿಲಕ್ಷಣವಾಗಿ ತೋರಿತು. ತಟ್ಟನೆ ಏನು ಹೇಳಬೇಕೆಂಬುದು ಜೀವಾನಂದನಿಗೆ ತೋಚಲಿಲ್ಲ. ನೋಡು ನೋಡುತ್ತಿದ್ದಂತೆ ಉತ್ತೇಜಿತನಾಗಿ ಮಾತನಾಡಿದ: “ನಾನು ಸಂನ್ಯಾಸಿಯೆ? ಸುಳ್ಳು ಸುಳ್ಳು. ಈ ಪ್ರಪಂಚದಲ್ಲಿಯ ಯಾವುದನ್ನೂ ಮುರಿದುಹಾಕಲು ನನ್ನ ಮನಸಿಲ್ಲ. ನನಗಿಲ್ಲಿ ಬಾಳುವುದಿದೆ. ಮನುಷ್ಯರೊಡನೆ ಮನುಷ್ಯನಂತೆ ಬಾಳುವುದಿದೆ. ನನಗೆ ಮನೆ ಬೇಕು, ಮಾರು ಬೇಕು, ಹೆಂಡತಿ ಬೇಕು. ಮಕ್ಕಳು ಬೇಕು—ಸಾವು ತಪ್ಪಿಸುವುದು ಯಾರಿಗೂ ಸಾಧ್ಯವಿಲ್ಲ. ಆದರೆ ಆ ಕರೆ ಬಂದಾಗ ಇವರೆಲ್ಲರ ಎದುರಿನಲ್ಲಿ ಸುಖ ಸಮಾಧಾನಗಳಿಂದ ಹೋಗಬೇಕೆಂದಿದ್ದೇನೆ. ಈವರೆಗೆ ನಾನೆಷ್ಟೋ ಹಾಳಾಗಿದ್ದೇನೆ. ಅದರ ಲೆಕ್ಕವನ್ನು ಹೇಳಿದರೆ ನೀನು ಹೌಹಾರಬಹುದು. ಇನ್ನು ಮೇಲೆ ಹಾಗೆ ಹಾಳಾಗುವುದು ನನಗೆ ಬೇಡವಾಗಿದೆ.”

ಷೋಡಶಿ ಬೆಚ್ಚಿದಳು. ಮೆಲ್ಲಮೆಲ್ಲನೆ ಅವಳೆಂದಳು: “ನಾನೊಬ್ಬ ಸಂನ್ಯಾಸಿನಿ. ಭೂಮಿಯ ಮೇಲೆ ಹೆಂಗುಸರ ಕೊರತೆಯಿಲ್ಲ. ಸುಮ್ಮನೆ ನನ್ನನ್ನು ಈ ತೊಡಕಿನಲ್ಲಿ ತೊಡಕಿಸಬೇಕೆನ್ನುತ್ತೀರಿ.”

ಜೀವಾನಂದನು ನಿಃಶಬ್ದನಾಗಿದ್ದ.

ಜಗತ್ತಿನಲ್ಲಿ ಹೆಂಗುಸರ ಬರವಿಲ್ಲವೆಂದು ಅವನಂಥವನಿಗೆ ತಿಳಿಸಬೇಕೆನ್ನುವ ಸಾಹಸಿಗೆ ಹೇಳುವುದಾದರೂ ಏನು?

“ಬೆಳಗು ಹರಿಯಲಿಕ್ಕೆ ಬಂತಲ್ಲವೇ ತಾಯಿ?” ಅಂಗಳದಲ್ಲಿ ಬಂಡಿಯವನು ಕೂಗಿಕೊಂಡ.

“ಬಂದೆನಪ್ಪಾ. ಬಂದೆ.”

ಇದ್ದಷ್ಟು ಎಣ್ಣೆಯನ್ನು ಅವಳು ದೀಪಕ್ಕೆ ಸುರಿದಳು. ಬತ್ತಿಯ ಮುಕ್ಕನ್ನು ಕಡಿದು ಹಾಕಿದಳು. ದೀಪವನ್ನು ಅಲ್ಲಿಯೆ ಬಿಟ್ಟು ಹೊರ ಹೊರಟಳು.

ಬಾಗಿಲಿಗೆ ಕೀಲಿಯನ್ನು ಹಾಕಬೇಕಾದ ಅಗತ್ಯವಿರಲಿಲ್ಲ. ಚಿಲಕವನ್ನು

ಮಾತ್ರ ತೊಡಕಿಸಿದಳು. ಒಂದಕ್ಕೆ ತಿರುಗಿ ಜೀವಾನಂದನ ಕಾಲ ಮೇಲೆ ಹಣೆಯಿಟ್ಟು ನಮಸ್ಕರಿಸಿ ಪಾದಧೂಳಿ ತೆಗೆದುಕೊಂಡಳು

"ಹೋಗಿ ಬರುತ್ತೇನೆ" ಅವಳೆಂದಳು.

"ಊಟ ಕೂಡ ಆಗಲಿಲ್ಲ" ಜೀವಾನಂದನೆಂದ

"ಇಲ್ಲ. ನಾನು ಬೆಳಗ್ಗೆ ಹೋಗುವೆನೆಂದು ಕೈತರಿಗೆಲ್ಲ ತಿಳಿಸಿದೆ. ಅವರು ಬರುವ ಮೊದಲೇ ನಾನಿಲ್ಲಿಂದ ಹೊರಟು ಹೋಗಬೇಕು" ಎಂದು ಕೊಂಚ ನಕ್ಕು ಅವಳೆಂದಳು: "ಒಂದೆರಡು ದಿನ ಉಣ್ಣದಿದ್ದರೆ ನನಗೇನೂ ಘಾಡಿಯಾಗುವುದಿಲ್ಲ!"

ಜೀವಾನಂದನು ಅವಳೊಂದಿಗೆ ಹೋಗಿ ಅವಳನ್ನು ಬಂಡಿಯಲ್ಲಿ ಕುಳ್ಳಿರಿಸಿದ ಬಂಡಿ ಮುಂದೆ ಸಾಗಿತು. ಅವಳ ಕಿವಿಯ ಹತ್ತಿರ ಮುಖವನ್ನು ನೀಡಿ ಅವನೆಂದ: "ಅಕ್ಕಾ, ಒಂದಿನ ನಿಮ್ಮಪ್ಪ ನಿನ್ನನ್ನು ನನಗೆ ಒಪ್ಪಿಸಿದ್ದನು. ಆದರೆ ನೀನು ನನ್ನವಳಾಗಲಿಲ್ಲ. ಆಗ ನನ್ನನ್ನೇ ಯಾರಾದರೂ ನಿನ್ನ ಕೈಯಲ್ಲಿ ಕೊಟ್ಟಿದ್ದರೆ, ನೀನು ಈಪೊತ್ತು ಹೀಗೆ ನನ್ನನ್ನು ಕತ್ತಲೆಯೊಳಗೆ ಬಿಟ್ಟು ಹೊರಟು ಹೋಗುತ್ತಿರಲಿಲ್ಲ."

ಇದಕ್ಕೆ ಉತ್ತರವೇನೆಂದು ಷೋಡಶಿ ಅರಸಿದಳು: ಸಿಕ್ಕಲಿಲ್ಲ. ಅವನ ಮಾತಿನೊಳಗಿನ ಅನಿರ್ವಚನೀಯವಾದ ಅವ್ಯಕ್ತ ದೈನ್ಯದ ಧ್ವನಿ ಅವಳ ಎರಡು ಕಿವಿಗಳಲ್ಲಿಯೂ ನಿನದಿಸುತ್ತಲಿತ್ತು.

ಬಂಡಿ ಬೀದಿಯ ತಿರುವಿನಲ್ಲಿ ತಿರುಗುವ ಮುಂಚೆ ಒಮ್ಮೆ ಷೋಡಶಿ ಹೊರಕ್ಕೆ ಬಗ್ಗಿ ನೋಡಿದಳು ಇರುಳಿನ ಕೊನೆಯ ದಟ್ಟವಾದ ಕತ್ತಲೆಯಲ್ಲಿ ಜೀವಾನಂದನು ನಿಂತಲ್ಲಿಯೇ ನಿಂತುಕೊಂಡಿದ್ದ.

ಬೆಳಗಾಗುವುದಕ್ಕೆ ಇನ್ನು ಹೆಚ್ಚು ಹೊತ್ತಿರಲಿಲ್ಲ. ಹೊಲಗಳೊಳಗಿನ ದಾರಿಯನ್ನು ಹಿಡಿದು ಜೀವಾನಂದನು ಮನೆಗೆ ಹೊರಟ. ಅಸ್ಪಷ್ಟವಾದ ಚೀರಾಟ ಕೂಗಾಟ ಅವನಿಗೆ ಎಷ್ಟೋ ಹೊತ್ತಿನಿಂದ ಕೇಳಿಸುತ್ತಲಿತ್ತು. ಸ್ವಲ್ಪ ಮುಂದುವರಿದೊಡನೆ ಮುಗಿಲಿನಲ್ಲಿ ಅರುಣೋದಯವಾದಂತೆ ಕೆಂಪು ಬಣ್ಣ ಹರಡಿದುದು ಕಾಣಿಸಿತು. ಹೋದಹೋದಂತೆ ಆ ಕೂಗಾಟ ಆ ಕೆಂಪು ಹೆಚ್ಚತೊಡಗಿತು. ಜೀವಾನಂದನು ತೀರ ಸಮೀಪಕ್ಕೆ ಹೋದಾಗ

ಅದೆಷ್ಟೋ ಜನರು ಒದರಾಡುತ್ತ ಆ ಕಡೆಯಿಂದ ಈ ಕಡೆಗೆ ಈ ಕಡೆಯಿಂದ ಆ ಕಡೆಗೆ ಸುಮ್ಮನೆ ಓಡಾಡುತ್ತಿರುವುದನ್ನು ಕಂಡ.

ಬೀಜಗಾವದ ಜಮೀದಾರ ಮನೆತನದ ಪ್ರಮೋದ ಭವನ, ಅವನ ಅಜ್ಜನ ಮೆಚ್ಚಿನ ಶಾಂತಿಕುಂಜ ಉರಿಯುತ್ತಲಿತ್ತು: ಬೂದಿಯಾಗಲು ಹೆಚ್ಚು ಸಮಯವಿರಲಿಲ್ಲ.

## ೩೨

ಬೆಳಗಾಯಿತು. ಚಂಡೀಗಡದ ಚಿಕ್ಕವರು ದೊಡ್ಡವರು ಎಲ್ಲಿರಲ್ಲಿಯೂ ಹಾಹಾಕಾರವೆದ್ದಿತು. ಶಿರೋಮಣಿ ಬಂದ. ರಾಯ ಬಂದ, ತಾರಾದಾಸ ಬಂದ, ಇನ್ನೂ ಎಷ್ಟೆಷ್ಟೋ ಸಭ್ಯಗೃಹಸ್ಥರು ಬಂದರು! ಶಾಂತಿಕುಂಜವು ಎಲ್ಲವೂ ಸುಟ್ಟು ಬೂದಿಯಾಯಿತೇ, ಸುದೈವದಿಂದ ಏನಾದರೂ ಉಳಿದಿದೆಯೋ? ಸುಟ್ಟುದರ ಬೆಲೆ ಎಷ್ಟಾದೀತು, ಉಳಿದುದು ಎಣಿಸುವಷ್ಟು ಇದೆಯೋ ಹೇಗೆ? ಈ ಮೊದಲಾದ ವಿಷಯಗಳನ್ನು ವಿಸ್ತಾರವಾಗಿ ಚರ್ಚಿಸುತ್ತ ಎಲ್ಲರೂ ಅತ್ತಿತ್ತ ಓಡಾಡುತ್ತಿದ್ದರು.

ಇನ್ನೊಂದು ದೊಡ್ಡ ಪ್ರಶ್ನೆ: ಇದು ಹೇಗಾಯಿತು? ಯಾರು ಮಾಡಿದರು? ಎಲ್ಲರ ಮಧ್ಯಭಾಗದಲ್ಲಿ ನಿಂತುಕೊಂಡು ಏಕಕೌಡಿ ನಂದಿ ಗಟ್ಟಿ ಗಟ್ಟಿಯಾಗಿ ಒದರಾಡುತ್ತಿದ್ದ -- ನಷ್ಟವಾದುದು ಸ್ವಂತ ತನ್ನದೇ ಏನೋ ಎಂಬ ಹಾಗೆ.

ಸರ್ವರ ಸಮಕ್ಷದಲ್ಲಿ ಅವನು ಸಾರಿದ: ಈ ಕೆಲಸ ಸಾಗರ ಸರದಾರನದು; ತನ್ನ ಒಬ್ಬಿಬ್ಬರು ಜನರನ್ನು ಕಟ್ಟಿಕೊಂಡು ಅವನು ಅಪರಾತ್ರಿಯಲ್ಲಿ ತಿರುಗುತ್ತಿದ್ದುದನ್ನು ಯಾರೋ ನೋಡಿದ್ದರು; ಠಾಣ್ಯಾಕ್ಕೆ ವರದಿ ಕಳಿಸಲಾಗಿದೆ. ಇನ್ನು ಪೋಲಿಸರು ಬರುತ್ತಾರೆ; ಈಗ ಈ ಒಕ್ಕಲಿಗರನ್ನೆಲ್ಲ ಅಂದಮಾನಕ್ಕೆ ಕಳಿಸದಿದ್ದರೆ ತಾನು ಏಕಕೌಡಿ ನಂದಿಯೇ ಅಲ್ಲ! -- ಇಷ್ಟು ದಿನ ಧನಿಯರ ಸೇವೆ ಮಾಡಿದ್ದೂ ವ್ಯರ್ಥ!

ಆರುತ್ತ ಬಂದಿದ್ದ ಉರಿಯಿಂದ ಬಹಳ ದೂರದಲ್ಲಿ, ಆಲದ ಮರದ ಕೆಳಗೆ ಸಭೆ ಸೇರಿತ್ತು. ಜೀವಾನಂದನೂ ಇದ್ದ. ಅವನ ಮುದ್ರೆ ಅತ್ಯಂತ

ಶಾಂತವಾಗಿತ್ತು. ಅಲ್ಲಿ ಉದ್ವೇಗದ ಚಿಹ್ನವು ಕೊಂಚವೂ ಕಾಣುತ್ತಿರಲಿಲ್ಲ. ಮುಗುಳುನಗೆ ನಕ್ಕು ಅವನೆಂದ: "ಹಾಗಾದರೆ ಏಕಕೌಡೀ, ಅವರೊಡನೆ ನೀನೂ ಹೋಗಬೇಕು ಅಂದಮಾನಕ್ಕೆ! ಜಮೀನ್ದಾರನ ಗುಮಾಸ್ತಿಕೆ ಮಾಡುವಾಗ ನೀನು ಯಾರ ಯಾರ ಮನೆಗೆ ಕೊಳ್ಳಿಕೊಟ್ಟಿದ್ದೀ ಎಂಬುದು ನನಗೆ ಗೊತ್ತಿದೆ. ಅವರು ಬೆಂಕಿ ಹಚ್ಚುವುದನ್ನು ಕಣ್ಣಾರೆ ಯಾರೂ ನೋಡಿಲ್ಲ. ಸುಳ್ಳು ಸಂಶಯದ ಆಧಾರದಿಂದ ಪೋಲೀಸರು ಅವರಿಗೆ ತೊಂದರೆ ಕೊಟ್ಟರೆ, ಸತ್ಯವಾದ ಪ್ರಮಾಣಗಳ ಆಧಾರದಿಂದ ನಿನಗೂ ಅದರಲ್ಲಿ ಪಾಲು ಕೊಡಿಸುತ್ತೇನೆ!"

ಅವನ ಮಾತನ್ನು ಕೇಳಿ ಎಲ್ಲರ ಮುಖಗಳೂ ಬಿಗಿ ಸಂಹಿಗೆಯಾದವು. ಏಕಕೌಡಿಗಂತೂ ಸಿಡಿಲೇ ಬಡಿದಂತಾಯಿತು. ಆ ಮಾತನ್ನು ನಗೆ ಚಾಟಿಕೆಗೆ ತಿರುಗಿಸುವ ಉದ್ದೇಶದಿಂದ ಅವನು ಒಣನಗೆ ನಕ್ಕು ಹೇಳಿದ: "ಧಣಿಯರೇ, ನಮ್ಮ ತಂದೆ ತಾಯಿ ಹಲವು ತಲೆಗಳಿಂದ ಧಣಿಯರ ಸೇವೆ ಮಾಡುತ್ತ ಬಂದಿದ್ದೇನೆ. ಧಣಿಯರ ಅಪ್ಪಣೆಯಾದರೆ ಅಂದಮಾನಕ್ಕೇ ಏಕೆ, ವಧಾಸ್ತಂಭಕ್ಕೆ ಹೋಗಲಿಕ್ಕೂ ನನಗೆ ಹೆಮ್ಮೆಯೆನಿಸುತ್ತದೆ."

ಜೀವಾನಂದನಿಗೆ ರೇಗಿತು. "ನನಗೆ ತಿಳಿಸದೆ ಪೋಲೀಸರ ಕಡೆ ದೂರು ಕೊಂಡದ್ದೇನೂ ಸರಿಯಾಗಲಿಲ್ಲ. ಸುಟ್ಟದ್ದು ಸುಟ್ಟುಹೋಗಿದೆ. ಅದೇನು ತಿರುಗಿ ಬರುವಂತಿಲ್ಲ. ಆದರೆ ಪೋಲೀಸರ ಕೂಡ ಸಂಧಾನ ನಡೆಸಿ ಹೊಸ ಸಂಚು ರಚಿಸಿ, ನಾಲ್ಕು ದುಡ್ಡ ಜೇಬಿಗೆ ಹಾಕಲು ಪ್ರಯತ್ನಿಸಿದೆಯಾದರೆ, ನಿನ್ನದೆ ಪ್ರಮಾಣ ಮಾತ್ರವನ್ನು ಹೆಚ್ಚೇತಾಂ!" ಎಂದು ಅವನೆಂದ.

ಕೂಡಿದ ಜನರೆಲ್ಲ ಮೋರೆ ತಿರುಗಿಸಿ ನಕ್ಕರು. ಏಕಕೌಡಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಸಿಟ್ಟಿನಿಂದ ಅವನ ಮೋರೆ ಕಪ್ಪಿಟ್ಟು ಹೋಗಿತ್ತು. ಅವನು ಜೀವಾನಂದನನ್ನು ಮನಸಿನೊಳಗೇ ಉದ್ಧರಿಸ ತೊಡಗಿದ.

ಹೊಕ್ಕೆಯ ಕಡೆಯ ಅಳುಮಕ್ಕಳ ಕೂಗುಗಳು ಉಳಿದುಕೊಂಡಿದ್ದವು. ಅವುಗಳ ಅಟ್ಟದ ಮೇಲಿನ ಮೂರು ನಾಲ್ಕು ಕೂಗುಗಳಲ್ಲಿ ತಾನಿರುವದಾ

ಜೀವಾನಂದನು ಹೇಳಿದ. ಸೇರಿದ ಎಲ್ಲ ಹಿತಚಿಂತಕರಿಗೂ ಅಪ್ಪಣೆ ಕೊಟ್ಟು, ತಾರಾದಾಸ ಠಾಕೂರನಿಗೆ ಮರುದಿನ ಮುಂಜಾನೆ ಬರುವಂತೆ ತಿಳಿಸಿದ.

"ಷೋಡಶಿ ನಿನ್ನೆ ರಾತ್ರಿ ಹೊರಟುಹೋದಳು" ತಾರಾದಾಸನು ಹೇಳಿದ.

"ನನಗೆ ಗೊತ್ತಿದೆ."

"ಕೆಲವು ಪಾತ್ರೆ ಪಡಗ ಕಾಣುವುದಿಲ್ಲ--"

"ಹಾಗಾದರೆ ಅಷ್ಟು ಹೊಸವು ಕೊಳ್ಳಬೇಕು"

ಮನೆ ಸುಟ್ಟ ವಿಷಯದಲ್ಲಿ ತೆರತೆರದ ಸುದ್ದಿಗಳು ಹುಟ್ಟಿ ಬಾಯಿಂದ ಬಾಯಿಗೆ ಹರಡತೊಡಗಿದವು. ಜಮೀನಾದಾರನು ರಾತ್ರಿ ಮನೆಯಲ್ಲಿರಲಿಲ್ಲವೆಂಬುದನ್ನು ಲೆಕ್ಕಿಸುವ ಆಗತ್ಯವು ಯಾರಿಗೂ ಕಾಣಲಿಲ್ಲ. ಆದರೆ ಷೋಡಶಿ ಹೋದುದಕ್ಕೂ ಮನೆ ಸುಟ್ಟುದಕ್ಕೂ ಬಹುಜನರು ಸಂಬಂಧವನ್ನು ಜೋಡಿಸುತ್ತಿದ್ದರು ಈ ಕೆಲಸವನ್ನು ಮಾಡಿದವರು ಯಾರೆಂಬುದನ್ನು ತಿಳಿದೂ ತಿಳಿದೂ ಜಮೀನಾದಾರನು ಸುಮ್ಮನೆ ಬಿಡುತ್ತಿದ್ದಾನಲ್ಲ ಎಂದು ಜನರು ಬಗೆಬಗೆಯಿಂದ ತರ್ಕವಿತರ್ಕ ಮಾಡುತ್ತಲಿದ್ದರು.

ರಾಯಮಹಾಶಯನು ಒಳ್ಳೇ ವ್ಯವಹಾರಿ. ಏಕಕೌಡಿಯ ಬಲೆಯಲ್ಲಿ ಜೀವಾನಂದನು ಬೀಳದಿದ್ದುದನ್ನು ಕಂಡನು. ಅವನ ವ್ಯವಹಾರಬುದ್ಧಿಯ ಬಗ್ಗೆ ರಾಯನ ಆದರ ಹೆಚ್ಚಿತು

ತನ್ನ ಬಗ್ಗೆಯೇ ರಾಯನು ಉದ್ವಿಗ್ನನಾಗಿದ್ದ ಷೋಡಶಿಯನ್ನು ಊರಿಂದ ಅಟ್ಟುವುದರಲ್ಲಿ ಅವನು ಮುಂದಾಳು. ಜಮೀನಾದಾರನ ಮನೆಗೆ ಕಿಚ್ಚಿಕ್ಕಿದವರು ಅಲ್ಲಿಯೇ ನೆರೆಹೊರೆಯಲ್ಲಲ್ಲಿಯೇ ಹೊಂಚುಹಾಕಿದ್ದಾರೆಂಬ ಭಾವನೆ ಅವನನ್ನು ಅಂಜಿಸಿತು ಹಾಸಿಗೆಯ ಮೇಲೆ ಮಲಗಿಕೊಂಡಾಗಲೂ ಅವನ ಮೈಯೆಲ್ಲವೂ ಬೆವರುತ್ತಿತ್ತು. ಮನೆಯ ಸುತ್ತಲೂ ಬಿಗಿಯಾದ ಕಾವಲಿಟ್ಟಿದ್ದ. ಆದರೂ ಅವನಿಗೆ ನಿದ್ದೆ ಹತ್ತದಾಗಿತ್ತು. ರಾತ್ರಿಯೆಲ್ಲ ವರಾಂಡದಲ್ಲಿ ಎಡೆಯಾಡುತ್ತಲಿದ್ದ.

ಬರೀ ಮನೆಯ ಸಮಸ್ಯೆಯೊಂದೇ ಇರಲಿಲ್ಲ ಕಾಳುಕಡ್ಡಿಗಳ ಉಗ್ರಾಣವಿತ್ತು, ಹುಲ್ಲು ಮೇವಿನ ಬಣವೆಗಳಿದ್ದವು. ಅವುಗಳ ಕಡೆಗೂ ಕಣ್ಣಿಡುವಂತೆ ಎಲ್ಲ ಏರ್ಪಾಡನ್ನೂ ಅವನು ಮಾಡಿದ. ಆದರೂ

ಭಯದಿಂದ ಅವನ ಅರ್ಧ ಜೀವನೇ ತಣ್ಣಗಾಗಿತ್ತು. ದಿವಸಗಳು ಹೇಗೋ ಸಾಗಿದ್ದವು. ಇಷ್ಟರಲ್ಲಿಯೇ ಒಂದು ಘಟನೆ ಜರುಗಿತು. ರಾಯನಿಗೆ ಮುಂದಿನ ಹಾದಿಯೇ ತೋರದಂತಾಯಿತು.

ಕೋರ್ಟಿನ ಸಮನ್ಸು ಬಂದಿತು. ಒಕ್ಕಲಿಗರೂ ಇತರರೂ ಸೇರಿ ಜಹಗೀರದಾರನ ಮೇಲೂ ರಾಯನ ಮೇಲೂ ಮೊಕದ್ದಮೆ ಹೂಡಿದ್ದರು. ಕಬ್ಬನ್ನು ಬೆಳೆಸುವುದಕ್ಕಾಗಿಯೂ ಬೆಲ್ಲದ ಕಾರಖಾನೆ ತೆರೆಯುವುದಕ್ಕಾಗಿಯೂ ಅವರು ಮದ್ರಾಸೀ ಸಾಹೇಬನಿಗೆ ಭೂಮಿಯನ್ನು ಮಾರಿದುದು ಅಕ್ರಮವೆಂದು ಆ ಜನರ ವಾದ.

ಕೋರ್ಟಿನ ಅಪ್ಪಣೆಯ ಮೇರೆಗೆ ಕಲೆಕ್ಟರನು ಪರಿಶೀಲನೆಗಾಗಿ ಊರಿಗೆ ಬರುವವನಿದ್ದ.

ಇವರಿಬ್ಬರೂ ಬಹಳ ಧನಸಂಪತ್ತಿಯನ್ನು ಅಸ್ತವ್ಯಸ್ತ ಮಾಡಿದ್ದರು. ಏಕಕೌಡಿಯನ್ನು ಒಲಿಸಿಕೊಂಡು ರಾಯನು ಅನೇಕ ಉಪದ್ವ್ಯಾಪಗಳನ್ನು ಮಾಡಿದ್ದ. ಕೃತಕವಾದ ಒತ್ತೆ ಕಾಗದಗಳನ್ನೂ ಋಣ ಪತ್ರಗಳನ್ನೂ ಹುಟ್ಟಿಸಿದ್ದ. ಒಬ್ಬರ ಸೊತ್ತನ್ನು ಮತ್ತೊಬ್ಬರಿಗೆ ಮಾರುವುದಕ್ಕೆ ಯಾವ ಯಾವ ಕೃಚಕ ಮಾಡಬೇಕೋ ಅವನ್ನೆಲ್ಲ ಮಾಡಿದ್ದ. ಅವೆಲ್ಲವೂ ನೆನಪಿಗೆ ಬಂದು ರಾಯನು ಹತಾಶಯನು ಕಲ್ಲಿನಂತೆ ಅಚೇತನನಾಗಿ ಕುಳಿತುಬಿಟ್ಟ.

ಈ ದರಿದ್ರ, ಮೂರ್ಖ, ನಿರ್ಜೀವ ಒಕ್ಕಲಿಗರಿಗೆ ಇಷ್ಟು ಎದೆಗಾರಿಕೆ ಹೇಗೆ ಬಂದಿತು? ಇದೇ ಊರೊಳಗಿದ್ದುಕೊಂಡು ಜನಾರ್ದನರಾಯ ಮತ್ತು ಜೀನಾನಂದ ಚೌಧರಿಯವರಂತಹ ಬಲಾಢ್ಯ ವ್ಯಕ್ತಿಗಳ ವಿರುದ್ಧ ಜಗಳ ಮಾಡುವ ಧೈರ್ಯ ಅವರಿಗೆಲ್ಲಿಂದ ಬಂದಿತು? ಎಂಬುದೇ ಅವನಿಗೆ ಅತ್ಯಂತ ಆಶ್ಚರ್ಯದ ಪ್ರಶ್ನೆ. ಆಯುಷ್ಯದ ಅರೆವಾಸಿ ಭಾಗದಲ್ಲಿ ಅವರಿಗೆ ಹೊಟ್ಟೆ ತುಂಬ ಕೂಳು ಸಿಕ್ಕುವುದಿಲ್ಲ. ಚಳಿಗಾಲದ ರಾತ್ರಿಗಳನ್ನು ಅವರು ಮುದ್ದೆಯಾಗಿ ಕುಳಿತೇ ಕಳೆಯುತ್ತಾರೆ. ಪಿಡುಗುಗಳ ಸಮಯದಲ್ಲಿ ನಾಯಿಗಳಂತೆ ಬೀದಿಯೊಳಗೆ ಬಿದ್ದು ಸಾಯುತ್ತಾರೆ. ಬಿತ್ತುವ ಹಂಗಾಮಿನಲ್ಲಿ ಒಂದು ಹಿಡಿ ಬೀಜಕ್ಕಾಗಿ ಮನೆ ಮನೆ ಅಲೆದು ಅಂಗಲಾಚುತ್ತಾರೆ–ಇವರಿಗೆ ಕೋರ್ಟಿನ ಕಟ್ಟೆಯನ್ನು ಹತ್ತುವುದಕ್ಕೆ ದುಡ್ಡು ಬಂದಿತೆಲ್ಲಿಂದ? ಅವರಲ್ಲಿ ಈ ದುರ್ವಿಚಾರವನ್ನು ತುಂಬಿದುದು ಯಾರು? ಇದು ಅಷ್ಟೊಂದು

ಸುಲಭವಾದ ಮಾತೇ? ಜಿಲ್ಲಾ ಕೋರ್ಟಿನಲ್ಲಿಯೇ ಕೊನೆಗೊಳ್ಳುವಂತಹದಲ್ಲ; ಹೈಕೋರ್ಟಿದೆ. ಅಲ್ಲಿಯವರೆಗೂ ಹೋಗಿ ಜೀವಾನಂದ–ಜನಾರ್ದನರನ್ನು ಮಣ್ಣುಮುಕ್ಕಿಸುವುದು ಸಾಗರ ಸರದಾರನಿಗೆ ಸಾಧ್ಯವೆ?

ಇಂಗ್ಲಿಷರ ನ್ಯಾಯಾಸ್ಥಾನಗಳು ಇರುವುದು ಶ್ರೀಮಂತರಿಗಾಗಿ, ಬಡವರಿಗಾಗಿ ಅಲ್ಲ. ತಮ್ಮ ಕಡೆ ದುಡ್ಡಿದೆ, ಬಲವಿದೆ, ತಮ್ಮ ಅಳಿಯ ಬ್ಯಾರಿಸ್ಟರ್ ಇದ್ದಾನೆ, ನಂಬುಗೆಯ ವಕೀಲರಿದ್ದಾರೆ, ಇನ್ನೂ ಅನೇಕ ಪ್ರಕಾರದ ಅನುಕೂಲತೆಗಳಿವೆ. ಈ ಎಲ್ಲ 'ತಮ್ಮವರು' ಕೂಡಿ ಆತ್ಮೀಯತೆಯಿಂದ ಸಹಾಯ ಮಾಡುವರೆಂಬ ಭರವಸೆಯಿಂದ ಜನಾರ್ದನರಾಯನು ಮನಸನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಲಿದ್ದ.

ಆದರನು ಹುರುಳಿಲ್ಲದ ಭರವಸೆ. ಇದು ಬರೀ ದುಡ್ಡಿನ ವಿಷಯವಲ್ಲ. ಹೊಲ ಮನೆಗಳನ್ನು ಮಾರುವ ಕೊಳ್ಳುವ ವಿಷಯವಲ್ಲ. ಈ ಕಾರ್ಯಸಾಧನೆಗಾಗಿ ಏನೇನು ಕಾರಸ್ಥಾನ ಮಾಡಿದ್ದರೋ ಅದರ ಪರಿಣಾಮವನ್ನು ಭೋಗಿಸಬೇಕಾಗಿತ್ತು. ಪಿನಲ್ ಕೋಡಿನ ಪ್ರತಿಯೊಂದು ಪುಟದಲ್ಲಿಯ ಭೀಕರ ಶಬ್ದಗಳೆಲ್ಲವೂ ಒಟ್ಟಿಗೆ ಸೇರಿ ಅವನ ಕಣ್ಣಮುಂದೆ ಬಂದು ನಿಂತು ಅವುಕ್ ಎನ್ನುತ್ತಿದ್ದವು.

ಈ ಸಂಗತಿ ಎಲ್ಲರಿಗೂ ತಿಳಿದುದಾಗಿತ್ತು. ಆದುದರಿಂದ ಹಗಲನ್ನು ಹೇಗೆ ಹೇಗೋ ಕಳೆದು ರಾತ್ರಿಯ ಕತ್ತಲಲ್ಲಿ ರಾಯನು ಏಕಕೌಡಿಯನ್ನು ಕರೆಯಿಸಿಕೊಂಡು, ಧನಿಯರು ಇದಕ್ಕೆ ಏನು ಹಂಚಿಕೆ ಮಾಡುವವರಿದ್ದಾರೆಂಬುದನ್ನು ವಿಚಾರಿಸಿದ.

"ಇನ್ನೂ ಈ ಪ್ರಕರಣವನ್ನು ಧನಿಯರ ಕಡೆ ಒಯ್ದಿಲ್ಲ" ಎಂದು ಏಕಕೌಡಿ ಹೇಳಿದ.

ಜನಾರ್ದನನಿಗೆ ರೇಗಿತು. "ಒಯ್ಯುದಿದ್ದರೆ ಒಯ್ಯಿ. ಈ ಇಳಿ ವಯಸಿನಲ್ಲಿ ಸೆರೆಮನೆಗೆ ಹೋಗುವುದೆ?" ಎಂದ.

ಅವನ ಈ ಭಯವನ್ನು ಕಂಡು ಏಕಕೌಡಿ ನಕ್ಕು ನುಡಿದ: "ಇಷ್ಟೇಕೆ ಅಂಜುವಿರಿ, ರಾಯಮಹಾಶಯ? ಸೆರೆಮನೆಗೆ ಹೋಗುವ ಪ್ರಸಂಗ ಬಂದರೆ ನಾನು ಹೋಗುತ್ತೇನೆ, ನಿಮ್ಮನ್ನು ಕಳಿಸುವುದಿಲ್ಲ. ಆದರೆ ಬೂಡವರ ಕಡೆ ಲಕ್ಷ್ಯವಿರಲಿ, ಆಯಿತು."

ಧನಿಯರನ್ನು ಸಾಕ್ಷಿಯಾಗಿ ಕರೆದರೆ ಇವರು ಎಲ್ಲವನ್ನೂ ಹೇಳಿಬಿಡುತ್ತಾರೆ, ಕಾಗದ ಪತ್ರ ಹುಟ್ಟಿಸಿದ್ದು ಸಹಿತ ಎಲ್ಲವನ್ನೂ ಹೇಳುತ್ತಾರೆ.

ಜನಾರ್ದನನ ಮುಖವು ಒಮ್ಮೆಲೆ ಬೆಳ್ಳಗಾಯಿತು. ಈ ಮನುಷ್ಯನ ತಲೆ ತಿರುಕತನದ ಭಯಂಕರ ಕಥೆಯನ್ನು ಆ ದಿನ ಅವನು ಕೇಳಿದ್ದ. ಅದೀಗ ನೆನಪಾಯಿತು. "ಎಂದರೆ ಕೊನೆಗೆ ಇವನು ಎಲ್ಲರನ್ನೂ ಕೊಳ್ಳಿಯಿಕ್ಕುವವನಿದ್ದಾನೇನು?" ಎಂದಿಷ್ಟೇ ಮಾತು ಅವನ ಬಾಯಿಂದ ಹೊರಟಿತು.

ತುಂಬಿದ ಹೊಗೆಸೊಪ್ಪು ಸುಟ್ಟು ಹೋಗುತ್ತಲಿತ್ತು. ಜಳಕಕ್ಕೆ ತೋಡಿದ ನೀರು ತಣ್ಣಗಾಗುತ್ತಲಿತ್ತು. ಜನಾರ್ದನರಾಯನು ಒಮ್ಮೆಲೆ ಮನೆಯಿಂದ ಹೊರಬಿದ್ದ.

ಆಗ ಜೀವಾನಂದನು ಗುಡಿಯ ಬಿದ್ದ ಮೂಲೆಯೊಂದನ್ನು ನಿರೀಕ್ಷಿಸುತ್ತಲಿದ್ದ. ತಾರಾನಾಥನು ಬಳಿಯಲ್ಲಿ ನಿಂತುಕೊಂಡು ಅವನು ಕೇಳಿ ಕೇಳಿದುದಕ್ಕೆ ಉತ್ತರ ಕೊಡುತ್ತಲಿದ್ದ. ಜನಾರ್ದನರಾಯನು ಒಮ್ಮಿಗಿಲೆ ಅವರ ಎದುರಿಗೆ ಹೋಗಿ ನಿಂತ. "ಧನಿಯರೇ, ಈ ಎಲ್ಲ ಕಾರಭಾರದ ಬಗ್ಗೆ ಇನ್ನೊಮ್ಮೆ ಯೋಚಿಸಿ ನೋಡಿರಿ" ಎಂದ.

ಇವನು ಏನೆನ್ನುತ್ತಾನೆಂಬುದು ಜೀವಾನಂದನಿಗೆ ಒಮ್ಮೆಲೆ ಹೊಳೆಯಲಿಲ್ಲ. "ಯಾವ ಕಾರಭಾರ?" ಎಂದು ಅವನು ಕೇಳಿದ.

ಆದರೆ ಅವನ ಅಸ್ವಾಭಾವಿಕವಾದ ಧ್ವನಿಯನ್ನು ಕೇಳಿ, ಅದೇ ಕಾಲಕ್ಕೆ ಅಂಗಳದಲ್ಲಿ ಒತ್ತಟ್ಟಿಗೆ ಏಕಕೌಡಿ ನಿಂತಿರುವುದನ್ನು ನೋಡಿ, ಅವನಿಗೆ ಕಳೆದ ರಾತ್ರಿಯ ವಿಷಯದ ನೆನಪಾಯಿತು.

"ಅದಕ್ಕೆ ಉಪಾಯವೇನಿದೆ ರಾಯಮಹಾಶಯರೆ? ಸಾಹೇಬ ಭೂಮಿಯನ್ನು ಬಿಟ್ಟುಕೊಡಲು ಸಿದ್ಧನಿಲ್ಲ. ಅದು ಅವನಿಗೆ ಅಗ್ಗವಾಗಿ ಸಿಕ್ಕಿದೆ. ಅಲ್ಲದೆ ಅವನಿಗೆ ನಷ್ಟವೂ ಬಹಳವಾಗುವುದು. ಅದ್ದರಿಂದ ಕೋರ್ಟಿಗೆ ಹೋದ ಹೊರತು ರೈತರಿಗೆ ಬೇರೆ ಮಾರ್ಗವೇ ಇಲ್ಲ" ಎಂದ ಜೀವಾನಂದ ಚೌಧರಿ.

"ಆದರೆ ನಮ್ಮ ಗತಿ?" ಒಳ್ಳೇ ಕಳವಳದಿಂದ ಜನಾರ್ದನರಾಯನು ಕೇಳಿದ.

ಕ್ಷಣ ಯೋಚಿಸಿ. “ಅದು ನಿಜ. ನನ್ನ ಹಾದಿಯೂ ಬಹಳ ಕಠಿನವಾಗಿದೆ” ಎಂದ ಜೀವಾನಂದ.

ಅವನ ಶಾಂತ ಸ್ವರವನ್ನು ಕೇಳಿ, ವಿಕಾರ ರಹಿತವಾದ ಮುಖ ಭಾವವನ್ನು ಕಂಡು, ಜನಾರ್ದನನಿಗೆ ತನ್ನ ಮನವನ್ನು ಸಂಯಮಿಸಿಕೊಳ್ಳುವುದು ಅಸಾಧ್ಯವಾಯಿತು. “ಘನಿಯರೇ, ಹಾದಿ ಕಠಿನ, ಇಷ್ಟೇ ಅಲ್ಲ, ಸೆರೆಮನೆಗೆ ಹೋಗಬೇಕಾಗುವುದು! ನಾನೊಬ್ಬನೇ ಅಲ್ಲ, ನಿಮಗೂ ಬಿಡುತಗಡೆಯಿಲ್ಲ” ಎಂದ.

“ಅದಕ್ಕೇನು ಮಾಡುವುದು ರಾಯಮಹಾಶಯ? ಒಳ್ಳೇ ಅಕ್ಕರೆಯಿಂದ ಗಿಡ ಹಚ್ಚಿದೆ. ಈಗ ಅದರ ಫಲ ಉಣ್ಣಲೇ ಬೇಕು.” ಜೀವಾನಂದನು ನಗುತ್ತ ನುಡಿದ.

ಜನಾರ್ದನನು ಮರುಮಾತನಾಡಲೇ ಇಲ್ಲ. ಸುಂಟರ ಗಾಳಿಯಂತೆ ಅಲ್ಲಿಂದ ಹೊರಟುಹೋದ. ಎಲ್ಲ ಮಾತು ಬಿಕಕೌಡಿಗೆ ಸರಿಯಾಗಿ ಕೇಳಿಸಿರಲಿಕ್ಕಿಲ್ಲ. ಅವನು ಬಾಗಿಲಿನಿಂದ ಹತ್ತಿರ ಬರುತ್ತಲೇ ರಾಯಮಹಾಶಯನು ಒದರಿ ಹೇಳಿದ: “ಬಿಕಕೌಡಿ, ಇವ ಇನ್ನು ನನ್ನ ಪ್ರಾಣ ಹಾಳು ಮಾಡುತ್ತಾನೆ. ಈಗಿಂದೀಗಲೇ ನಿರ್ಮಲನಿಗೆ ತಂತಿ ಕೊಡು. ಅವನು ಬರಲಿ ಇಲ್ಲಿಗೆ ಮುಂಚೆ!”

## ೨೭

ಚಂಡೀಗಡದಿಂದ ಹೋಗುವಾಗ ನಿರ್ಮಲನು ದೊಡ್ಡ ದುಃಖದ ಹೊರೆಯನ್ನು ಹೊತ್ತುಕೊಂಡು ಹೋಗಿದ್ದ. ಇಲ್ಲಿಯ ಪಾಪ ಪುಣ್ಯಗಳ ಸಂಪರ್ಕವೇ ಇನ್ನು ಬೇಡ ಎಂದು ಹೋಗುವಾಗ ನಿರ್ಧರಿಸಿಕೊಂಡಿದ್ದ. ಆದುದು ಆಗಿ ಹೋಯಿತು. ಇನ್ನು ಮಾತ್ರ ಇಲ್ಲಿಯ ಸಂಬಂಧ ಸೂತ್ರಗಳು ಸಾಯುವವರೆಗೂ ಕತ್ತರಿಸಿ ಹೋಗಲಿ, ಎಂದು ಮನಃಪೂರ್ವಕವಾಗಿ ದೇವರನ್ನು ಬೇಡಿಕೊಳ್ಳುತ್ತ ಊರಿಗೆ ಹೋಗಿದ್ದ.

ಅವನು ಸರಳ ಮನುಷ್ಯ. ವಿಲಾಸಿಯಿದ್ದಿರಬಹುದು, ಸಾಹೇಬೀ ಠೀವಿಯವನಿದ್ದಿರಬಹುದು, ಆದರೂ ವ್ಯವಹಾರದಲ್ಲಿ ಸರಳ ಮಾರ್ಗದಿಂದ

ನಡೆಯುವವ. ಹೈಮವತಿಯೊಬ್ಬಾಕೆಯೇ ಅವನ ಕೈಗೋಲು. ಅವಳು ಅವನ ಪ್ರಿಯತಮೆ, ಅವನ ಮಗುವಿನ ತಾಯಿ—ಸೌಂದರ್ಯದಿಂದ, ಸ್ನೇಹದಿಂದ, ನಿಷ್ಠೆಯಿಂದ, ಬುದ್ಧಿಯಿಂದ ಅವಳ ಹೊರತು ಬೇರೆ ಯಾರ ಸಂಬಂಧವಾದರೂ ಬರಬೇಕೆಂದು ಅವನಿಗೆಂದೂ ಎನಿಸಿರಲಿಲ್ಲ. ಇಂತಹ ದೈವೀ ಸಂಪತ್ತಿಯನ್ನು ಕಡೆಗಣಿಸುವಷ್ಟು ತನ್ನ ಮನಸ್ಸೊಮ್ಮೆ ಮೂಢ ವಾಗಿತ್ತೆಂಬುದು ನೆನಪಾದರೆ ಅವನಿಗೆ ವ್ಯಸನವಾಗುತ್ತಿತ್ತು. ಆ ವಿಡಂಬನೆ ಸ್ಮರಣೆಗೆ ಬಂದಾಗ ಎರಡು ವಿಷಯಗಳು ಅವನನ್ನು ಕಾತರಗೊಳಿಸುತ್ತಿದ್ದವು. ಮೊದಲನೆಯದು ಕ್ಷ್ಮೀನುರ್ಜನನ ಇತಿಹಾಸವನ್ನು ಹೈಮಳಿಂದ ಚಿರವಾಗಿ ಮುಚ್ಚಿಡಬೇಕಾದುದು; ಎರಡನೆಯದು ಷೋಡಶಿಯ ಚರಿತ್ರೆ.

ವಾಸ್ತವವಾಗಿ ಅವಳ ಚರಿತ್ರೆ ಅವನಿಗೆಷ್ಟೂ ಗೊತ್ತಿರಲಿಲ್ಲ. ಆದರೂ ಏಕೋ ಯಾರು ಬಲ್ಲರು, ಅವನ ಮನಸ್ಸೊಮ್ಮೆ ಛಲ ಹಿಡಿದುಬಿಟ್ಟಿತ್ತು. ಅವನು ತನ್ನ ಮನಸ್ಸನ್ನು ಪುನಃ ಪುನಃ ಪ್ರಶ್ನಿಸಿದರೂ ಸಿಕ್ಕುತ್ತಿದ್ದ ನಿಸ್ಸಂದಿಗ್ಧ ವಾದ ಉತ್ತರ ಒಂದೇ.. ಷೋಡಶಿ ಚರಿತ್ರಹೀನೆ.

ಅಸಾಧ್ಯ ವಸ್ತುವಿಗಾಗಿ ಅವನ ಮನಸು ಆಶೆ ಹಿಡಿಯಲಿಲ್ಲ. ಆಶೆ ಹಿಡಿಯುವುದು ಶಕ್ಯವೂ ಇರಲಿಲ್ಲ. ಅವಳನ್ನು ಪಡೆಯುವುದು ಅಶಕ್ಯ ವೆಂದು ಅವನಿಗೆನಿಸುತ್ತಿತ್ತು. ಅಂತೆಯೇ ಅವಳ ಕಡೆ ಅವನ ಮನಸು ಹರಿಯುತ್ತಿತ್ತು.

ಇದನ್ನು ಬಗೆದೇ ಅವನು ಒಂದು ರೀತಿಯಿಂದ ಸಮಾಧಾನ ಹುಚ್ಚಿ ಕೊಳ್ಳುತ್ತಿದ್ದ. 'ಇನ್ನು ಈ ಹಾದಿ ಪೂರಾ ಮುಚ್ಚಿದಂತೆ. ಹೈಮ ಬೇಕಾ ದರೆ ತವರುಮನೆಗೆ ಹೋಗಿಕೊಳ್ಳಲಿ. ನಾನು ಮಾತ್ರ ಇನ್ನು ಮೇಲೆ ಚಂಡೀಗಡದ ಹೆಸರನ್ನೇ ತೆಗೆಯುವುದಿಲ್ಲ' ಎಂದು ತನಗೆ ತಾನೇ ಹೇಳಿ ಕೊಳ್ಳುತ್ತಲಿದ್ದ.

ಒಂದಿನ ಅವನು ಕೋರ್ಟಿನಿಂದ ಮನೆಗೆ ಬಂದ. ತನ್ನ ತಾಯಿಯ ಕಾಗದ ಬಂದಿದೆಯೆಂದು ಹೈಮವತಿ ಹೇಳಿದಳು. ಷೋಡಶಿ ಬೆಳಗಾಗು ವುದರೊಳಗೇ ಮೋರೆ ತಪ್ಪಿಸಿಕೊಂಡು ಎಲ್ಲಿಗೋ ಹೊರಟುಹೋಗಿದ್ದಾಳೆ, ಯಾರಿಗೂ ಪತ್ತೆಯೇ ಇಲ್ಲ ಎಂದು ಅದರಲ್ಲಿ ಬರೆದಿತ್ತು.

ಜುಕ್ಕಜುಲುಮೆಯ ನಗೆ ನಕ್ಕು, ಚೇಷ್ಟೆಮಾಡಲು ಪ್ರಯತ್ನಿಸುತ್ತ

ನಿರ್ಮಲನೆಂದ: "ಅವಳು ಎಲ್ಲಿಗೆ ಹೋದಳೆಂಬುದು ಯಾರಿಗೂ ಗೊತ್ತಿಲ್ಲವೆ? ಸಾಗರ ಸರದಾರನಿಗೂ? ಅದೇಕೆ, ಜಮಿಾದಾರ ಜೀವಾನಂದ ಚೌಧರಿಗೂ ಗೊತ್ತಿಲ್ಲವೆ?"

ಹೈಮವತಿಗೆ ಸಿಟ್ಟು ಬಂತು. "ಸಿಕ್ಕ ಹಾಗೆ ಏನು ಮಾತನಾಡುತ್ತೀರಿ? ಸಾಗರನಿಗೇನೋ ಗೊತ್ತಿರಬಹುದೆನ್ನಿರಿ. ಜಮಿಾದಾರನಿಗೆ ಅದು ಹೇಗೆ ತಿಳಿಯುವುದು? ಹೆಂಗುಸರಿಗೆ ಕೆಟ್ಟ ಹೆಸರಿಡುವುದಕ್ಕೆ ಸಂಧಿ ಸಿಕ್ಕರೆ ನಿಮಗೆಲ್ಲ ಬಲು ಆನಂದ!" ಎಂದಳು.

"ಅದು ನಿಜ!"

ಎಂದು ನುಡಿದು ನಿರ್ಮಲನು ಹೊರಗೆ ಹೊರಟ. ಹೈಮವತಿ ಅವನನ್ನು ತಡೆದು ನುಡಿದಳು: "ಇನ್ನೂ ಒಂದು ಗೊಂದಲವಾಗಿದೆ. ಅಂದೇ ರಾತ್ರಿ ಜಮಿಾದಾರನ ಶಾಂತಿಕುಂಜವನ್ನು ಯಾರೋ ಸುಟ್ಟಿದ್ದಾರಂತೆ."

"ಇದೇನು ಮತ್ತೆ?"

"ಹೌದು. ಸಾಗರನೇ ಸಂತಾಪದಿಂದ ಬೆಂಕಿ ಹಚ್ಚಿದನೆಂದು ಜನರಿಗೆನಿಸುತ್ತದಂತೆ. ಆದರೆ, ಜಮಿಾದಾರನೊಡನೆ ಅವಳ ಸಂಬಂಧ ಜೋಡಿಸಿ ಊರ ಜನ ಮಾಡಿದ ಹರಲಿ ನಿಜವಾಗಿದ್ದರೆ ಅವನ ಬಂಗಲೆ ಎಂದಾದರೂ ಸುಡುತ್ತಿತ್ತೇ? ಹೇಳಿರಲ್ಲ"

ನಿರ್ಮಲನು ಮೌನವಾಗಿದ್ದ.

"ಯಾರು ಏನೇ ಹೇಳಲಿ, ನನಗೆ ಮಾತ್ರ ಖಂಡಿತ ಗೊತ್ತಿದೆ. ಅವಳು ನಿರ್ದೋಷಿ. ಈವರೆಗೆ ಚಂಡೀಗಢದ ಭೈರವಿಯರೊಳಗೆ ಇಂಥವಳೊಬ್ಬಳೂ ಆಗಿಲ್ಲ. ಅವಳ ಹರಕೆಯಿಂದಲೇ ನೀವು ಮಗನನ್ನು ಕಂಡಿರಿ, ಗೊತ್ತಿದೆಯೆ?"

ಈ ಮಾತಿಗೂ ನಿರ್ಮಲನು ಮಾರ್ನುಡಿಯಲಿಲ್ಲ. ಘಟನೆಯನ್ನು ಸಾವ್ಯಂತವಾಗಿ ಅರಿತುಕೊಳ್ಳಲು ಅವನು ಉತ್ಸುಕನಾಗಿದ್ದ. ಪತ್ರವನ್ನು ಬರೆದು ಎಲ್ಲವನ್ನೂ ವಿವರವಾಗಿ ತಿಳಿಯಬೇಕೆಂದು ಅವನಿಗೆನಿಸುತ್ತಿತ್ತು. ಆದರೂ ಆ ಆಸೆಯನ್ನು ಹತ್ತಿಟ್ಟು ಅವನು ಹೊರಗೆ ಹೋದ.

ಷೋಡಶಿಯು ಯಾವ ವಿಷಯದಲ್ಲಿಯೂ ಸಂಬಂಧ ತಂದುಕೊಳ್ಳ

ಹೋಗನೆಂದು ಅವನ ಪ್ರತಿಜ್ಞೆ. ಆದರೆ ಮರುದಿನ ಮುಂಜಾನೆ ಮಾವನ ಅವಸರದ ತಂತಿ ಬಂದಿತು; ಸಂಜೆಗೆ ಅತ್ತೆಯ ಪತ್ರವೂ ಬಂದಿತು. ಆಗ ಅವನ ನಿಶ್ಚಯವು ಹೊಯ್ದಾಡಿತು. ಅತ್ತೆ ಬರೆದಿದ್ದಳು—'ಪತ್ರ ಮುಟ್ಟಿದೊಡನೆ ಅಳಿಯಬಾಬು ಬರದಿದ್ದರೆ, ಈ ಪ್ರಸಂಗದಲ್ಲಿ ಮುದುಕ ಮಾವಂದಿರ ಬಿಡುಗಡೆಯಾಗಲಾರದು. ಅವರು ಕಾರಾಗೃಹದ ಯಾತ್ರೆ ಮಾಡಬೇಕಾಗುವುದು.' ಓದಿ ಹೈಮವತಿ ಅಳತೊಡಗಿದಳು. ನಿರ್ಮಲನು ಪುನಃ ಬ್ಯಾಗ್ ಹಿಡಿದುಕೊಂಡು ಹೊರಡಲೇ ಬೇಕಾಯಿತು.

ಮರುದಿನ ಮುಂಜಾನೆ ನಿರ್ಮಲನು ಹೈಮವತಿಯೊಡನೆ ಚಂಪೀಗಡವನ್ನು ಪ್ರವೇಶಿಸಿದ. ಎಲ್ಲರೂ ಭೀತಿಯ ವಾತಾವರಣದಲ್ಲಿ ಅಂತೂ ಇಂತೂ ದಿನಗಳನ್ನು ತಳ್ಳುತ್ತಿದ್ದಂತೆ ಅವನಿಗೆ ಕಂಡಿತು. ಯಾರು ಯಾವಾಗ ಮನೆಗೆ ಬೆಂಕಿ ಹಚ್ಚುವರೋ ನಿಯಮವಿಲ್ಲ! ನಾಲ್ಕೂ ಕಡೆ ಆಳುಗಳನ್ನಿಟ್ಟಿದ್ದರು. ಮುದುಕನು ಕುಗ್ಗಿ ಅರೆಜೀವವಾಗಿದ್ದ. ಎಲ್ಲಿಯೂ ಹೊರಬೀಳುತ್ತಿರಲಿಲ್ಲ ಕೂಡ. ಅಷ್ಟು ದೊಡ್ಡ ಮುತ್ಸದ್ದಿ, ಬಲಾಢ್ಯ ವ್ಯಕ್ತಿ ತನ್ನೂರೊಳಗೇ ಈ ಅವಸ್ಥೆಗಿಳಿದುದು ನಿರ್ಮಲನಿಗೆ ಆಶ್ಚರ್ಯವನ್ನುಂಟುಮಾಡಿತು.

ಕೆಲವೇ ದಿನಗಳಾಗಿದ್ದವು ಅವನಿಲ್ಲಿಗೆ ಬಂದು ಹೋಗಿ. ಅಷ್ಟರೊಳಗೇ ಎಷ್ಟೊಂದು ಅಂತರ!

ವಿಷಯ ಒಂದೇ. ಆದರೆ ಒಬ್ಬೊಬ್ಬನು ಒಂದೊಂದು ರೀತಿಯಿಂದ ಹೇಳುತ್ತಿದ್ದ. ನಿರ್ಮಲನಿಗೆ ಯಾವುದನ್ನೂ ಸರಿಯಾಗಿ ಗ್ರಹಿಸಿಕೊಳ್ಳಲಾಗಲಿಲ್ಲ. ಒಂದು ವಿಷಯದಲ್ಲಿ ಮಾತ್ರ ಎಲ್ಲರ ಒಮ್ಮತವಿದ್ದಿತು— ಜೀವಾನಂದ ಚೌಧರಿಯ ತಲೆ ಕೆಟ್ಟಿದೆ! ಅವನು ಕುಡಿಯುವುದನ್ನು ಬಿಟ್ಟಿದ್ದಾನೆ, ತನ್ನ ಮೇಲೆಯೇ ವ್ಯಾಜ್ಯ ಹೂಡುವಂತೆ ರೈತರನ್ನು ಪ್ರೋತ್ಸಾಹಿಸಿದ್ದಾನೆ, ಸುಟ್ಟ ಮನೆಯನ್ನು ಕಟ್ಟಿಸುವುದನ್ನು ಬಿಟ್ಟು ಸಂಕ'ಕಟ್ಟಿಸುತ್ತಿದ್ದಾನೆ ಇತ್ಯಾದಿ ಎಷ್ಟೋ ಸಂಗತಿಗಳು ಕೇಳಬರುತ್ತಿದ್ದವು.

ಜೀವಾನಂದನ ವೃತ್ತಿಯಲ್ಲಿ ಈ ಪರಿವರ್ತನೆ ಏಕಾಯಿತೆಂದು ಯಾರೂ ಹೇಳಲರಿಯರು. ನಿರ್ಮಲನಿಗೆ ಈ ಮನುಷ್ಯನ ಬಗ್ಗೆ ಬಹಳ ತಿರಸ್ಕಾರವಿದ್ದಿತು. ಸಭೆಯ ಸಲುವಾಗಿ ಇವನ ಕಡೆ ಹೋಗಬೇಕಲ್ಲ ಎಂದು

ಆವನು ಒಳ್ಳೇ ಸಂಕೋಚಗೊಂಡಿದ್ದ. ಆದರೆ ಪ್ರಕರಣವು ಈ ಮಟ್ಟಕ್ಕೆ ಬಂದುದರಿಂದ ಹೋಗಡೆ ಗತ್ಯಂತರವಿರಲಿಲ್ಲ.

ಒಕ್ಕಲಿಗರಂತೂ ವಿರೋಧಿಗಳಾಗಿದ್ದರು. ಅವರ ಸರ್ವನಾಶವಾಗಿತ್ತು. ಅವರನ್ನು ಹಾಳುಮಾಡುವುದರಲ್ಲಿ ಯಾರು ಏನೂ ಉಳಿಸಿರಲಿಲ್ಲ. ಅವರಿಗೆ ಇದ್ದುದು ಒಂದೇ ಒಂದು ಆಧಾರ, ಭೈರವೀ ಮಾತೆ. ಉಚ್ಚಾಟನೆ ಕೊಟ್ಟು ಅವಳನ್ನೂ ಓಡಿಸಲಾಗಿತ್ತು. ಅದರಿಂದ ಅವರ ಸಂತಾಪವು ಅನಿವಾರ್ಯ ವಾಗಿತ್ತು. ಅವರು ಯಾವ ಮಾತನ್ನೂ ಕೇಳುವ ಹಾಗಿರಲಿಲ್ಲ.

ಅತ್ತ ಮದ್ರಾಸೀ ಸಾಹೇಬನಿಗೂ ವಿಪರೀತ ನಷ್ಟವಾಗುತ್ತಲಿತ್ತು. ಅವನ ಯಂತ್ರ ಸಾಮಗ್ರಿಗಳು ಬಂದು ಬಿದ್ದಿದ್ದವು. ಆ ನಷ್ಟವನ್ನು ತುಂಬಿ ಕೊಡುವುದು ಅಶಕ್ಯವಾಗಿತ್ತು. ಅವನಿಗೆ ಭೂಮಿಯ ಸ್ವಾಧೀನತೆ ಬೇಕಾ ಗಿತ್ತು. ಅವನು ತಾನೇ ಬಂದಿರಲಿಲ್ಲ. ಈ ಕೆಲಸಕ್ಕಾಗಿ ಅಟರ್ನಿಯನ್ನು ನಿಯಮಿಸಿದ್ದ. ಆ ಮನುಷ್ಯನು ಕಠೋರನೂ ಇದ್ದ, ದುಷ್ಟನೂ ಇದ್ದ. ಅವನಿಂದ ಸೌಕರ್ಯವನ್ನು ಪಡೆಯುವುದು ಎಷ್ಟೆಷ್ಟೂ ಸಾಧ್ಯವಿರಲಿಲ್ಲ.

ಒಂದೇ ಒಂದು ಉಪಾಯವಿತ್ತು – ಎಲ್ಲರಲ್ಲಿಯೂ ಐಕ್ಯವನ್ನು ಉಂಟುಮಾಡುವುದು. ಸಿವಲ್ ಕೋರ್ಡಿನ ಆ ನಿಷ್ಠುರ ಕಲಮಿನಿಂದ ರಕ್ಷಣೆ ಮಾಡಿಕೊಳ್ಳಲು ಅದೊಂದೇ ಉಪಾಯ. ಆಪಸಾತಿನಲ್ಲಿ ಒಪ್ಪಂದ ಮಾಡಿ ಕೊಳ್ಳದೆ ಮತ್ತೊಂದು ಮಾರ್ಗವಿಲ್ಲ. ಅಲ್ಲದೆ, ಆ ಹುಚ್ಚು ಮನುಷ್ಯನು ಎಲ್ಲವನ್ನೂ ಕೋರ್ಟಿನಲ್ಲಿ ಹೇಳಿಬಿಡುತ್ತಾನೆ: ಯಾವುದನ್ನೂ ಮರೆಮಾಚಿ ಇಡುವುದಿಲ್ಲ. ಇದನ್ನು ಅವನೇ ಹೇಳುತ್ತ ತಿರುಗುತ್ತಿದ್ದ.

ನಿರ್ಮಲನು ಈ ವಿಷಯವನ್ನು ವಿನೋದದಲ್ಲಿಯೇ ಮುಗಿಸಿಬಿಡ ಬಹುದಿತ್ತು. ಆದರೆ ಅವನು ಬಂದಾಗಿನಿಂದ ಅನೇಕ ಸಂಗತಿಗಳನ್ನು ಕೇಳಿದ್ದ. ವಿಶೇಷವಾಗಿ, ಜೀವಾನಂದನು ಮದ್ಯವನ್ನು ಬಿಟ್ಟುದು, ಹಾರ್ಟ್ ಫೇಲಾದೀತೆಂದು ಡಾಕ್ಟರರು ಬೆದರಿಸಿದರೂ ಒಂದು ಹನಿಯನ್ನೂ ಸೇವಿಸದಿ ದ್ದುದು. ಇಂತಹ ಭಯಂಕರ ಮನುಷ್ಯನ ತಲೆಯೊಳಗೆ ಗಾಳಿ ಯಾವ ಕಡೆ ಬೀಸುತ್ತಿದೆಯೆಂಬುದನ್ನು ಹೇಳುವವರು ಯಾರು? ತಾನು ಬಂದುದು ಈ ದುರಾರಾಧ್ಯ ಮೂರ್ಖನಿಗೆ ಬುದ್ಧಿಗಲಿಸುವುದಕ್ಕೆ! ಇವನಿಗೆ ತಿಳಿಹೇಳ

ಬೇಕೋ, ಅಂಚೆಕೆ ಹಾಕಬೇಕೋ, ಹೇಳಿಕೊಳ್ಳಬೇಕೋ? ಏನು ಮಾಡ ಬೇಕೆಂಬುದು ನಿರ್ಮಲನಿಗೆ ತಿಳಿಯದಾಗಿತ್ತು.

ಅತ್ಯಂತ ಕುತಂತ್ರಮಯವಾದ ಈ ಪ್ರಕರಣವೇ ನಿರ್ಮಲನಿಗೆ ಹೇಸಿಕೆಯಿಟ್ಟಿತ್ತು. ಆದರೆ ಉಪಾಯವೆಲ್ಲಿದೆ? ಆರೋಪಿ ಹೈಮಳ ತಂದೆ. ಅವನನ್ನು ಉಳಿಸಲೇ ಬೇಕು.

ಹೈಮಳು ಅಳುತ್ತಿದ್ದಳು. ಅತ್ತೆ ಕಣ್ಣೀರಿಡುತ್ತಿದ್ದಳು. ಏಕಕೌಡಿ ಕಳ್ಳ ಹೆಜ್ಜೆಯಿಂದ ಎಡತಾಕುತ್ತಿದ್ದ. ಮಾವನು ಅನ್ನ ನೀರು ತೊರೆದು ಹಾಸಿಗೆ ಹಿಡಿದಿದ್ದ —

ಇನ್ನು ಉಳಿದಿರುವುದು ಒಂದೇ ದಿವಸ. ನ್ಯಾಯ್ಯವನ್ನು ನಡೆಸುವುದಕ್ಕೆ ನ್ಯಾಯಾಧೀಶನು ಬರುವುದು ನಾಡದೇ.

ಸುಮಾರು ಮೂರನೆಯ ಪ್ರಹರದಲ್ಲಿ ಜೀವಾನಂದನ ಭೆಟ್ಟಿ ನಿರ್ಮಲ ನಿಗಾಯಿತು. ಅವನು ಸಂಕ ಕಟ್ಟುವ ಕೆಲಸವನ್ನು ನಿರೀಕ್ಷಿಸುತ್ತಲಿದ್ದ. ಕೆಲಸವಾಗಲೇ ಮುಗಿಯಲಿಕ್ಕೆ ಬಂದಿತ್ತು.

ಬಾಯಿ ತುಂಬ ನಗುತ್ತ ಎರಡು ಕೈಗಳನ್ನೂ ಎತ್ತಿ ಜೀವಾನಂದನು ನಿರ್ಮಲನನ್ನು ಸ್ವಾಗತಿಸಿದ. “ನೀವು ಬಂದಿದ್ದೀರೆಂದು ನಿನ್ನೆಯೇ ಕೇಳಿದೆ. ನೆಟ್ಟಗಿದ್ದೀರಾ? ಮನೆಯವರೆಲ್ಲರೂ ಕ್ಷೇಮವೇ?” ಎಂದು ವಿಚಾರಿಸಿದ.

ಅವನ ಮಾತಿನಲ್ಲಿ ಕೊಂಚವೂ ಆಡಂಬರವಿರಲಿಲ್ಲ, ಕೃತ್ರಿಮತೆ ಇರ ಲಿಲ್ಲ. ಅತ್ಯಂತ ಸಹಜವಾಗಿ, ಬಿಚ್ಚು ಮನಸಿನಿಂದ ಅವನು ಮಾತನಾಡು ತ್ತಿದ್ದ. ಸಂದೇಹಕ್ಕೆ ಎಷ್ಟೂ ಆಸ್ಪದವಿರಲಿಲ್ಲ.

ನಿರ್ಮಲನಿಗೆ ಈ ರೀತಿ ತೀರ ಅಕಲ್ಪಿತ. ಅವನು ಒಳಗೊಳಗೆ ವಿಚಲಿತನಾದ. ತಲೆ ಕೆಡುವುದೆಂದರೆ ಇದೇ ಆದರೆ ನಾಚಬೇಕಾದುದಿಲ್ಲ.

ಜೀವಾನಂದನ ಯೋಗ ಕ್ಷೇಮದ ಪ್ರಶ್ನೆಗೆ ನಿರ್ಮಲನು ತಲೆ ಯಿಂದಲೇ ಉತ್ತರವಿತ್ತ. ತಿರುಗಿ ಪ್ರಶ್ನಿಸುವಷ್ಟು ಪ್ರಜ್ಞೆ ಅವನಿಗೆ ಉಳಿದಿರಲಿಲ್ಲ.

ಜೀವಾನಂದನೆಂದ; “ನೀವು ಮಾವನ ಮನೆಗೆ ಬಂದವರು—ಇಡೀ ಊರ ಕಣ್ಣು ನಿಮ್ಮ ಮೇಲೆ—ಆದರೆ ಮುದ್ದಾಮು ಇಲ್ಲಿಗೆ ಬಂದು ದರ್ಶನ ಕೊಟ್ಟಿರಿ —”

ಅಷ್ಟೊತ್ತಿಗೆ ಅವನ ಕಣ್ಣು ಕೆಲಸಗಾರರ ಕಡೆ ಹೋಯಿತು. "ಅಣ್ಣಗಳಿರಾ, ಈವೊತ್ತು ರಾತ್ರಿಯೆಲ್ಲಾ ನೀವು ದುಡಿಯಬೇಕು. ಒಂದು ವಾರವಾಯಿತು, ಮೋಡ ಕವಿಯುತ್ತಿದೆ, ಇಂದು ನಾಳೆ ಮಳೆ ಆರಂಭವಾದೀತು. ಮಳೆ ಬಂದರೆ ಕೆಲಸವೇ ನಿಂತು ಹೋಗುವುದು. ನಮ್ಮ ಮೊಮ್ಮಕ್ಕಳು ಮರಿಮಕ್ಕಳು ಕೂಡ ಸೈ ಎಂದಿರಬೇಕು, ಹಾಗೆ ಕೆಲಸ ಮಾಡಿರಿ. ಈ ಸಂಕ ಕಟ್ಟಿದವರು ಒಳ್ಳೇ ಮನಸು ಕೊಟ್ಟು ಕಟ್ಟಿದ್ದಾರೆ ಎಂದಿರಬೇಕು ಅವರು. ಅದೇ ನಿಮಗೆ ನಿಜವಾದ ಕೂಲಿ."

ಜನರೆಲ್ಲ ವಿಚಲಿತರಾದರು. ಬೀಜಗಾವದ ಭಯಂಕರ ಜಮೀನ್ದಾರನು ತಮ್ಮೊಂದಿಗೆ ವ್ಯವಹರಿಸುತ್ತಿದ್ದಾನೆ. ಅವನ ಮಾತೇ ಇವು?

ಎಲ್ಲರೂ ಒಂದೇ ಉಸುರಿನಿಂದ ಹೇಳಿದರು: "ನಿಮ್ಮ ಇಚ್ಛೆಯೇ ನಮ್ಮಿಚ್ಛೆ. ಚಂದ್ರನನ್ನು ನೋಡ ಮುಚ್ಚದಿದ್ದರೆ ರಾತ್ರಿ ಹತ್ತರವರೆಗೂ ಕೆಲಸ ಮಾಡುತ್ತೇವೆ."

"ನಿಮ್ಮ ಹತ್ತಿರ ಸ್ವಲ್ಪ ಕೆಲಸವಿದೆ" ನಿರ್ಮಲನೆಂದ.

"ಮತ್ತೆ ಯಾವಾಗಲಾದರೂ ಬಂದರಾಗಲಿಕ್ಕಿಲ್ಲವೆ?"

"ಇಲ್ಲ. ಅಷ್ಟು ಅಗತ್ಯದ ಕೆಲಸವಿದೆ."

ಜೀವಾನಂದನು ನಕ್ಕು ನುಡಿದ: "ಅದು ನಿಜ. ವಿಪರೀತ ಕಾರ್ಯದ ಭಾರವನ್ನು ಹೊರುವುದಕ್ಕಾಗಿ ನಿಮ್ಮನ್ನು ಇಷ್ಟು ದೂರ ಎಳೆತಂದವರು ಹಾಯಾಗಿ ಹೋಗಗೊಡುವರೆ?"

ಮಾತಿನ ಕೊಕ್ಕೆ ನಿರ್ಮಲನಿಗೆ ತಿಳಿಯಿತು. ಅವನೆಂದ: "ನೀವು ಹೇಳುವುದು ಸರಿಯೆ. ಆದರೆ ಮನುಷ್ಯ ವಿಪರೀತ ಕಾರ್ಯ ಮಾಡುವನೆಂದೇ ಜಗತ್ತಿನಲ್ಲಿ ಕಾಯುದೆ ಪಂಡಿತರ ಅಗತ್ಯವಿರುವುದು, ಚೌಧರಿಯವರೆ. ಇಲ್ಲದಿದ್ದರೆ ಹೊಲದೊಳಗೆ ಬಂದು ನಾನೇಕೆ ನಿಮಗೆ ತೊಂದರೆ ಕೊಡುತ್ತಿದ್ದೆ?"

ಜೀವಾನಂದನು ಎಷ್ಟೂ ಕೋಪಗೊಳ್ಳಲಿಲ್ಲ. ಅದೇ ಪ್ರಸನ್ನ ಮುದ್ರೆಯಿಂದ ಮಾತನಾಡಿದ. "ನನಗೇನೂ ತೊಂದರೆಯಾಗಲಿಲ್ಲ ನಿರ್ಮಲಬಾಬೂ. ನೀವು ಯಾವ ಕೆಲಸಕ್ಕೆ ಬಂದಿರುವಿರೋ ಅದನ್ನು ನೆರವೇರಿಸುವುದು ನಿಮ್ಮ ಕರ್ತವ್ಯ. ಆ ಬಗ್ಗೆ ನನಗೆ ಕೊಂಚವೂ ಸಂದೇಹವಿಲ್ಲ.

ಇಲ್ಲದಿದ್ದರೆ ಇಷ್ಟು ದೂರ ಏತಕ್ಕೆ ಬರುತ್ತಿದ್ದಿರಿ? ಆದರೆ ಎಲ್ಲರ ಕರ್ತವ್ಯದ ಕಲ್ಪನೆ ಒಂದೇ ಇರುವುದಿಲ್ಲ. ರಾಯಮಹಾಶಯರಿಗೆ ಅಹಿತವಾಗಬೇಕೆಂಬ ಬುದ್ಧಿ ನನಗಿಲ್ಲ. ನೀವು ಬಂದ ಉದ್ದೇಶ ಸಫಲವಾದರೆ ನನಗೆ ನಿಜವಾಗಿಯೂ ಆನಂದ. ಆದರೆ ನನ್ನ ಕರ್ತವ್ಯವನ್ನು ನಾನು ಮುಗಿಸಿಬಿಟ್ಟಿದ್ದೇನೆ. ಅದ ರಲ್ಲಿ ಹೆಚ್ಚು ಕಡಿಮೆಯಾಗುವುದು ಸಾಧ್ಯವಿಲ್ಲ."

ನಿರ್ಮಲನ ಮೋರೆ ಇಳಿಯಿತು. ಸ್ವಲ್ಪ ಯೋಚಿಸಿ ಅವನೆಂದ: "ಅಪ್ರಿಯವಾದ ಪ್ರಸಂಗವನ್ನೆತ್ತುವ ನನ್ನ ಭಾರವನ್ನು ಹಗುರು ಮಾಡಿ ದ್ದಕ್ಕೆ ನಾನು ನಿಮಗೆ ಋಣಿಯಾಗಿದ್ದೇನೆ. ನಾನಿಲ್ಲಿಗೆ ಬಂದಾಗಿನಿಂದ ನಿಮ್ಮ ವಿಷಯದಲ್ಲಿ ಅದೆಷ್ಟೋ ಕೇಳುತ್ತಿದ್ದೇನೆ --"

ಜೀವಾನಂದನು ನಕ್ಕು ನುಡಿದ: "ಅವುಗಳಲ್ಲೊಂದು ನನ್ನ ತಲೆ ಕೆಟ್ಟಿದೆ ಎಂಬುದು. ಹೌದೊ?"

"ವ್ಯವಹಾರದಲ್ಲಿ ಸಾಧಾರಣ ಮನುಷ್ಯನ ವಿಚಾರ ಶಕ್ತಿಯೊಡನೆ ತುಲನೆ ಮಾಡಿದಾಗ, ಯಾವನೊಬ್ಬನ ಕರ್ತವ್ಯ ಕಲ್ಪನೆಯಲ್ಲಿ ಒಮ್ಮೆಲೆ ಹೆಚ್ಚು ಕಡಿಮೆ ಕಂಡುಬಂದರೆ, ಅವನಿಗೆ ಕೆಟ್ಟ ಹೆಸರು ಬರುವುದೇ. ನೀವು ಎಲ್ಲವನ್ನೂ ಒಪ್ಪಿರುವಿರಂತೆ, ನಿಜವೇ?"

"ನಿಜವೇ!"

ಅವನ ಧ್ವನಿಯಲ್ಲಿ ಗಾಂಭೀರ್ಯವಿರಲಿಲ್ಲ: ಕೊನೆತುಟಿಯಲ್ಲಿ ನಗೆಯ ರೇಷೆಯಿತ್ತು. ಆದರೂ ಅದರಲ್ಲಿ ಕಪಟವಿಲ್ಲವೆಂದು ನಿರ್ಮಲನಿಗೆನಿ ಸಿತು. "ನಿಮ್ಮ ಆತ್ಮಸಮ್ಮತಿಯ ಫಲವನ್ನು ನೀವು ಮಾತ್ರ ಅನುಭವಿಸ ಬೇಕು, ಮಿಕ್ಕವರು ಉಳಿದುಕೊಳ್ಳಬೇಕು. ಹಾಗೇನಾದರೂ ನಿಮಗೆ ಮಾಡಲಿಕ್ಕೆ ಆದೀತೇ?" ಎಂದು ಅವನು ಕೇಳಿದ.

"ನಿರ್ಮಲ ಬಾಬೂ, ಶಾಲೆಯ ಹುಡುಗನ ಕತೆ ಹೇಳುತ್ತಾರಲ್ಲ, ಹಾಗಿದೆ ನಿಮ್ಮ ಮಾತು. ಒಬ್ಬ ಹುಡುಗ ಕಳವು ಮಾಡಿದ್ದ. ಅದು ಮಾಸ್ತರರ ಗಮನಕ್ಕೆ ಬಂದಿತು. ಅವನನ್ನು ವಿಚಾರಿಸಿದಾಗ ಅವನು ತನ್ನ ಜೊತೆಗಾರರ ಹೆಸರು ಹೇಳಲಿಲ್ಲ. ಎಲ್ಲರ ಪಾಲಿನ ಏಟುಗಳನ್ನು ತಿಂದ ಹೊರತು ಅವನ ಬೆನ್ನ ತಿಂಡಿ ತೀರಲಿಲ್ಲ!" ಎಂದು ನುಡಿದು ಜೀವಾನಂದನು ನಗತೊಡಗಿದ.

ತನ್ನ ಹುಡುಗಾಟಿಕೆಯ ನಗೆಯಿಂದ ನಿರ್ಮಲನ ಮುಖದಲ್ಲಿ ಸಿಟ್ಟಿನ ಚಿಹ್ನವು ಕಂಡು ಬಂದಿತು. ಅದನ್ನು ಕಳೆಯುವುದಕ್ಕಾಗಿ ಜೀವಾನಂದನು ಹೇಳಿದ. "ನನ್ನನ್ನು ಕ್ಷಮಿಸಿರಿ. ಕನಸಿನಲ್ಲಿ ಕೂಡ ಇಂಥದೇನನ್ನೂ ನಾನು ಇಚ್ಛಿಸುವವನಲ್ಲ. ನನ್ನ ಕೃತಕರ್ಮದ ಫಲ ನಾನು ಸಂತೋಷದಿಂದ ಭೋಗಿಸುತ್ತೇನೆ. ರಾಯಮಹಾಶಯರು ಕುಶಲವಾಗಿ ಉಳಿದುಕೊಳ್ಳಲಿ; ಒಳ್ಳೇ ಭರದಿಂದ ತಮ್ಮ ಸಂಸಾರ ಸಾಗಿಸಲಿ. ನಮ್ಮ ಏಕಕೌಡಿ ನಂದಿ ಎಲ್ಲಿಯಾದರೂ ಕಾರಕೂನಿಕೆ ಮಾಡಿಕೊಂಡು ಉತ್ತರೋತ್ತರ ದೊಡ್ಡ ಮನುಷ್ಯನಾಗಲಿ — ಯಾರ ಮೇಲೂ ನನ್ನ ಆಕ್ಷೇಪವಿಲ್ಲ."

ನಿರ್ಮಲನು ಕಾಯಿದೆ ಪಂಡಿತ. ಹಿಡಿದ ಹಿಡಿತವನ್ನು ಸಹಜವಾಗಿ ಬಿಟ್ಟು ಗೊತ್ತಿಲ್ಲ ಅವನಿಗೆ "ಯಾರಿಗೂ ಯಾವ ಶಿಕ್ಷೆಯೂ ಆಗದ ಹಾಗೆ, ಯಾರ ಮೇಲೂ ನಷ್ಟ ಪರಿಹಾರದ ಭಾರ ಬೀಳದ ಹಾಗೆ ಮಾಡಲಿಕ್ಕೂ ಬರಬಹುದು" ಎಂದು ಅವನೆಂದ.

ಜೀವಾನಂದನು ತಟ್ಟನೆ ಒಪ್ಪಿಕೊಂಡು ನುಡಿದ: "ಸರಿ. ಆಗುತ್ತದ್ದರೆ ಹಾಗೆ ಮಾಡಿರಿ. ನಾನೇನೋ ಬೇಕಾದಷ್ಟು ವಿಚಾರ ಮಾಡಿ ನೋಡಿದೆ. ಹೀಗಾಗುವುದು ಅಸಾಧ್ಯವೇ ಸರಿ. ಒಕ್ಕಲಿಗರು ತಮ್ಮ ಭೂಮಿಗಳನ್ನು ಬಿಡಲು ಒಪ್ಪುವುದಿಲ್ಲ. ಅದು ಅವರ ಹೊಟ್ಟೆ ಬಟ್ಟೆಯ ಪ್ರಶ್ನೆ ಮಾತ್ರವಲ್ಲ. ಕಳೆದ ಏಳು ತಲೆಗಳಿಂದಲೂ ಈ ಭೂಮಿಗಳನ್ನು ಉಪಭೋಗಿಸುವುದು ಅವರ ಹಕ್ಕು — ಅದು ಅವರ ಜೀವಾಳದ ವಿಷಯ. ಅವರವನ್ನು ಅವರಿಗೆ ಕೊಡಲಿಕ್ಕೇ ಬೇಕು —" ಎಂದು ಕ್ಷಣ ಹೊತ್ತು ತಡೆದು, "ವಿರೋಧಿ ಪಕ್ಷ ಅತಿ ಪ್ರಬಲವಾಗಿದೆ. ಅವರ ಮೇಲೆ ಬಲಾತ್ಕಾರ ಅತ್ಯಾಚಾರ ಮಾಡಿದರೆ ನಡೆಯುವುದಿಲ್ಲವೆಂಬುದು ನಿಮಗೂ ಮನವರಿಕೆಯಾದೀತು. ಬಲಾತ್ಕಾರ ನಡೆಯುವುದು ಈ ಒಕ್ಕಲಿಗರ ವಿಷಯದಲ್ಲಿ ಮಾತ್ರ! ಅನಾದಿಕಾಲದಿಂದಲೂ ಅವರ ಮೇಲೆ ಅನ್ಯಾಯ ಅತ್ಯಾಚಾರಗಳು ನಡೆಯುತ್ತಿವೆ. ಇನ್ನು ಮೇಲೆ ನಾನು ಹಾಗೆ ಆಗಗೊಡುವುದಿಲ್ಲ" ಎಂದ.

ಈ ಮಾತಿಗೆ ನಿರ್ಮಲನ ಅಂತರಂಗವು ಹೌದೆಂದಿತು. ಆದರೂ ಅವನೆಂದ: "ನಿಮ್ಮ ಜಮೀನ್ದಾರಿ ಬಲು ದೊಡ್ಡದು. ಅದರೊಳಗೊತ್ತಟ್ಟಿಗೆ ಈ ರೈತರಿಗೆ ವ್ಯವಸ್ಥೆಯಾಗಲಿಕ್ಕಿಲ್ಲವೆ? ಎಲ್ಲಿಯಾದರೂ —"

"ಇಲ್ಲ ಇಲ್ಲ. ಬೇರೆ ಎಲ್ಲಿಯೂ ಆಗುವಂತಿಲ್ಲ. ಈ ಚಂಡೀಗಡ ದಲ್ಲಿಯೇ, ಇದೇ ಸ್ಥಳದಲ್ಲಿಯೇ ನಾನು ಬಲಾತ್ಕಾರದಿಂದ ಅವರಿಂದ ಆರು ಸಾವಿರ ರೂಪಾಯಿ ಎತ್ತಿದ್ದೇನೆ. ಆ ಹಣವನ್ನು ದಕ್ಕಿಸಿಕೊಂಡಿದ್ದಾರೆ ಜನಾರ್ದನರಾಯರು. ಅದು ತಿರುಗಿ ಸಿಕ್ಕಬೇಕು. ಇದೆಲ್ಲ ಅಪ್ರಿಯ ಪ್ರಸಂಗದ ಚರ್ಚೆಯೇತಕ್ಕೆ? ನಿರ್ಮಲ ಬಾಬೂ, ನನ್ನ ನಿಶ್ಚಯ ದೃಢವಾಗಿದೆ."

ಈ ಆರು ಸಾವಿರ ರೂಪಾಯಿಗಳ ಇಂಗಿತ ನಿರ್ಮಲನಿಗೆ ತಿಳಿಯಲಿಲ್ಲ. ತನ್ನ ಮಾವನು ಎಷ್ಟೊಂದು ತೊಡಕಿನ ಉರುಲು ಹಾಕಿಕೊಂಡಿದ್ದಾನೆ, ಆದರಿಂದ ಅವನನ್ನು ಬಿಡಿಸುವುದು ಸುಲಭವಲ್ಲ ಎಂದು ಮಾತ್ರ ಅವನಿಗೆ ಗೊತ್ತಾಯಿತು.

ಕೊನೆಯ ಪ್ರಯತ್ನವೆಂದು ಅವನು ಕೇಳಿದ: "ಆತ್ಮರಕ್ಷಣೆಯ ಅಧಿಕಾರ ಪ್ರತಿಯೊಬ್ಬನಿಗೂ ಇದೆ. ಎಂದರೆ ನಮ್ಮ ಮಾವಂದಿರೂ ತಮ್ಮ ರಕ್ಷಣೆ ಮಾಡಿಕೊಳ್ಳುವುದು ಅವಶ್ಯ. ನೀವು ಜಮೀನದಾರರು. ನಿಮ್ಮೊಡನೆ ದಾವೆ ಮೊಕದ್ದಮೆಗಳ ಚರ್ಚೆ ಮಾಡುವುದು ವ್ಯರ್ಥ. — ಕೊನೆಗೆ ಈ ವಿಷವನ್ನಿಳಿಸುವುದಕ್ಕೆ ವಿಷವನ್ನೇ ಕೊಡಬೇಕಾಗುವುದು."

ತಿರಸ್ಕಾರದಿಂದ ನಕ್ಕು ಜೀವಾನಂದನೆಂದ: "ಹಾಗಾದರೆ ಡಾಕ್ಟರರು ಕೃತ್ರಿಮ ಸಹಿಯ ವಿಷಕ್ಕೆ ರಕ್ತದ ಔಷಧ ಹೇಳುವರೋ?"

ನಿರ್ಮಲನ ಮುಖವು ಕೆಂಪಾಯಿತು. ಅವನು ಹೇಳಿದ: "ನಿಮಗೆ ಗೊತ್ತಿದೆ—ಒಮ್ಮೊಮ್ಮೆ ಔಷಧದ ಹೆಸರು ಹೇಳಿದರೆ ಅದರ ಗುಣ ಹೋಗುತ್ತದಂತೆ. ಅದೇನೇ ಇರಲೊಲ್ಲದೇಕೆ, ನೀವು ಜಮೀನದಾರರು, ಬ್ರಾಹ್ಮಣರು, ಹಿರಿಯರು; ನಿಮ್ಮನ್ನು ತಿರಸ್ಕರಿಸಿ ಮಾತನಾಡುವ ಇಚ್ಛೆ ನನಗಿಲ್ಲ. ನಿಮ್ಮಲ್ಲಿ ಈ ಧರ್ಮಜ್ಞಾನ ಒಮ್ಮೆಲೆ ಏಕೆ ಉದ್ಭವಿಸಿತೆಂಬುದನ್ನು ತಿಳಿದು ಕೊಳ್ಳಲೂ ಬಯಸುವುದಿಲ್ಲ. ನಿಮ್ಮ ಈ ವೃತ್ತಿ ಸ್ವಾಭಾವಿಕವಲ್ಲ, ಎಂದಿಷ್ಟೇ ನಾನು ಹೇಳಬೇಕಾದ್ದು. ಸರಕಾರದವರು ಖಟ್ಲೆ ಹಾಕಿದರೆ, ಸೆರೆಮನೆಗೆ ಹೋದ ಬಳಿಕ ಒಂದಿನ ನಿಮಗೆ ತಿಳಿದೀತು. ನ್ಯಾಯವನ್ನು ಹಗ್ಗವೆಂದು ಭ್ರಮಿಸುತ್ತಿದ್ದೀರಿ ನೀವು."

"ನೀವು ಹೇಳುವುದು ಸತ್ಯ. ಆದರೆ ನನ್ನ ಮಟ್ಟಿಗೆ ಈ ಭ್ರಮೆ ಇರುವವರೆಗೂ ಅದು ಹಗ್ಗವೇ!"

"ಆದರೆ ಆದರಿಂದ ಶಿಕ್ಷೆಯನ್ನು ತಪ್ಪಿಸಿಕೊಳ್ಳಲಿಕ್ಕೆ ಆಗುವುದಿಲ್ಲ. ಇನ್ನೊಂದು ಹಿತದ ಮಾತನ್ನು ಹೇಳುವುದಿದೆ ನನಗೆ. ನಾನು ಇಂಥ ಉಪದ್ವ್ಯಾಪದ ಉದ್ಯೋಗ ಮಾಡುವವನಲ್ಲ. ಆದರಲ್ಲಿಯೂ ನಿಮ್ಮ ಬಗ್ಗೆ ನನಗೆ ತಿರಸ್ಕಾರವಿದೆ. ಒಬ್ಬ ಪಾಪಿಯ ದೆಸೆಯಿಂದ ಇನ್ನೊಬ್ಬ ಪಾಪಿಯನ್ನು ಬೇಡಿಕೊಳ್ಳುವುದಕ್ಕೆ ನನಗೆ ನಾಚಿಕೆಯಾಗುತ್ತದೆ. ಅದು ನಿಮಗೆ ತಿಳಿಯುವುದಿಲ್ಲ. ನಿಮ್ಮ ತಿಳಿವಳಿಕೆಯು ಅಜೀಗಿದೆ ಅದು."

ಜೀವಾನಂದನ ಮುದ್ರೆಯಲ್ಲಿ ಯಾವ ಬಗೆಯ ವ್ಯತ್ಯಾಸವೂ ಆಗಲಿಲ್ಲ. ಅವನು ಸ್ವಲ್ಪವೂ ಚಂಚಲನಾಗಲಿಲ್ಲ. ಅದೇ ಸೌಮ್ಯ ಶಾಂತ ಸ್ವರದಿಂದ ಅವನೆಂದ: "ಆದರೆ ನಿಮ್ಮ ಬಗ್ಗೆ ಮಾತ್ರ ನನಗೆ ತಿರಸ್ಕಾರವೆನಿಸುವುದಿಲ್ಲ ನಿರ್ಮಲ ಬಾಬೂ: ತಿರುಗಿ ಗೌರವವೇ ಎನಿಸುತ್ತದೆ. ನಿಮಗೆ ಈ ಮಾತಿನಲ್ಲಿ ವಿಶ್ವಾಸ ಹುಟ್ಟಲಿಕ್ಕಿಲ್ಲ' —"

ಅವನ ನಿರ್ವಿಕಾರವಾದ ಸರಳತನದಿಂದ ನಿರ್ಮಲನ ಸಿಟ್ಟು ಉರಿಯಿತು. ಉತ್ತರ ರೂಪದಲ್ಲಿ ಚೆನ್ನಾಗಿಯೇ ಅವನ ಸಮಾಚಾರ ತೆಗೆದುಕೊಳ್ಳಬೇಕೆಂದು ಸಿಟ್ಟಿನ ದನಿಯಲ್ಲಿ ಅವನೆಂದ: "ಕಳ್ಳರು ಕಾಕರಲ್ಲಿ ಕೂಡ ಒಂದು ಬಗೆಯ ನಿಯಮಗಳಿರುತ್ತವೆ. ತಮ್ಮ ತಮ್ಮೊಳಗೆ ಅವರು ಅವನ್ನು ಮುರಿಯುವುದಿಲ್ಲ. ವಿಶ್ವಾಸ ಘಾತಕರನ್ನು ಕಂಡರೆ ಅವರಿಗಾಗುವುದಿಲ್ಲ. ಆದರೆ ಇಡೀ ಆಯುಷ್ಯದಲ್ಲಿ ದುರಾಚಾರ ಮಾಡಿಮಾಡಿ ಬುದ್ಧಿಭ್ರಂಶ ಆದವರೊಡನೆ ಮಾತನಾಡಿದರೆ ಪ್ರಯೋಜನವಿಲ್ಲ! ನಾನು ಹೋಗುತ್ತೇನೆ!" ಎಂದು ನುಡಿದು ನೋಡು ನೋಡುವಷ್ಟರಲ್ಲಿ ಹಿಂದಿರುಗಿ ಹೊರಟುಬಿಟ್ಟ.

ಕೈಯೊಳಗಿನ ಕೆಲಸವನ್ನು ಬಿಟ್ಟು ಕೆಲಸಗಾರರು ಆಶ್ಚರ್ಯಚಕಿತರಾಗಿ ನೋಡುತ್ತಲಿದ್ದರು. ಅತ್ಯಂತ ಕಕಲಾತಿಯಿಂದ ಜೀವಾನಂದನು ನಕ್ಕು ಅವರಿಗೆಂದ: "ಅಣ್ಣಗಳಿರಾ, ಪುಕ್ಕಟೆ ಹೊತ್ತುಗಳೆದದ್ದನ್ನು ತುಂಬಿಕೊಡಬೇಕು."

ಈ ಮಾತು ನಿರ್ಮಲನಿಗೆ ಕೇಳಿಸಿತು.

ಮೂರು ನಾಲ್ಕು ದಿನಗಳಲ್ಲಿ ಸಂಕವು ಸಿದ್ಧವಾಯಿತು. ಜನರ ತೊಂದರೆ ದೂರವಾಯಿತು. ಊರೂರಿಂದ ಜನರು ನೋಡಲು ಬರತೊಡಗಿದರು. ಈ ಮಹತ್ಕಾರ್ಯವನ್ನು ಮಾಡಿದ ಜೀವಾನಂದನು

ಮಾತ್ರ ಜಡ್ಡಿನಿಂದ ಹಾಸಿಗೆ ಹಿಡಿದಿದ್ದ. ಈ ಕೆಲಸದಿಂದಾದ ಆಯಾಸವು ಅವನಿಗೆ ತಡೆಯಲಿಲ್ಲ.

ನಾಸಿರ ಕಂತ್ರಾಟಿ ಮಾಡಿ, ಸಾಹೇಬರನ್ನು ಕಂಡು, ನಿರ್ಮಲನು ವಿಚಾರಣೆಯ ಮಿತಿಯನ್ನು ಮುಂದೆ ಹಾಕಿಸಿದ್ದ. ಆ ಮಿತಿಗೆ ಇನ್ನೆರಡು ದಿವಸಗಳಿದ್ದವು.

ಉಳಿದುಕೊಳ್ಳಲು ಒಂದೇ ಒಂದು ಹಾದಿಯಿತ್ತು -- ಆ ಹಾದಿಯನ್ನು ಹಸನ ಮಾಡುವುದಕ್ಕಾಗಿ ಜನಾರ್ದನರಾಯನು ತಾರಾನಾಥನಿಂದ ಚಂಡೀದೇವಿಗೆ ವಿಶೇಷ ಪೂಜೆ ಕಟ್ಟಿಸಿದ. ಮುಂಜಾನೆ ಸಂಜೆ ಗರ್ಭಗುಡಿಯಲ್ಲಿ ಕುಳಿತುಕೊಂಡು ಒಂದೇ ಒಂದು ವರವನ್ನು ಬೇಡುತ್ತಿದ್ದ: 'ಜೀವಾನಂದನು ಈ ಬೇನೆಯಿಂದ ಏಳಬೇಡ: ಸಾಹೇಬರು ವಿಚಾರಣೆಗೆ ಬರುವುದರೊಳಗೆ ಲಟ್ ಎನ್ನಲಿ!'

ಮಗಳನ್ನು ಸಂಗಡ ಕರೆದುಕೊಂಡು ಹೋಗಿ ಸೋದತಿಯ ಕೈಕಾಲು ಕಟ್ಟಿಕೊಳ್ಳಬೇಕೆಂದು ಅವನಿಗೆನಿಸುತ್ತಿತ್ತು. ಒಕ್ಕಲಿಗರನ್ನು ಒಲಿಸುವುದು ಅವಳಿಗೊಬ್ಬಳಿಗೇ ಸಾಧ್ಯ. ಆದರೆ ಅವಳಿರುವುದೆಲ್ಲಿ? ಅವಳನ್ನು ಕಳಿಸಲಿಕ್ಕೆ ಹೋದ ಬಂಡಿಯವನ ಪತ್ತೆಯೂ ಇಲ್ಲ.

ಏಳು ದಿನಗಳ ಅವಧಿ ಸಿಕ್ಕಿದೆ. ಮಗುವನ್ನು ಕರೆದುಕೊಂಡು ಹೋಗಿ ಅತ್ತು ಕರೆದು ಹೇಳಿಕೊಂಡರೆ ಅವಳೇನೂ ಒಲ್ಲೆನ್ನುವುದಿಲ್ಲವೆಂದು ಜ್ಞಾನವತಿಗೂ ಮನಃಪೂರ್ವಕವಾಗಿ ಎನಿಸುತ್ತಿತ್ತು. ಆದರೆ ಆ ಆಸೆಯೂ ವ್ಯರ್ಥವಾಗುತ್ತಲಿದ್ದಿತು.

ಈ ಕೆಲ ದಿನ ನಿರ್ಮಲನು ಬಹುಶಃ ದಿನಾಲು ಕೋರ್ಟಿಗೆ ಹೋಗಬೇಕಾಗುತ್ತಿತ್ತು. ಈ ಉಪದ್ವ್ಯಾಪದ ಮೊಕದ್ದಮೆಯಲ್ಲಿ ಹುಟ್ಟಬಹುದಾದ ಛಿದ್ರಗಳನ್ನೆಲ್ಲ ಮುಚ್ಚುವುದು ಅವಶ್ಯವಾಗಿತ್ತು.

ಆ ದಿನ ಮಧ್ಯಾಹ್ನ ರಿಜಿಸ್ಟರ್ ಕಚೇರಿಯ ವರಾಂಡದಲ್ಲಿ ನಿರ್ಮಲನು ಒಂದು ಬೆಂಚಿನ ಮೇಲೆ ಕುಳಿತು, ಕೆಲವು ಅಗತ್ಯದ ಕಾಗದ ಪತ್ರಗಳನ್ನು ನಕಲು ಮಾಡಿಕೊಂಡು ಓದಿ ನೋಡುತ್ತಿದ್ದ.

"ಅಳಿಯ ದೇವರೇ, ಸಲಾಮು. ನೆಟ್ಟಗಿದ್ದೀರಾ?"

ನಿರ್ಮಲನು ಬೆಚ್ಚಿ ಬಿದ್ದು ನೋಡಿದ. ಫಕೀರ ಸಾಹೇಬನು ನಿಂತಿದ್ದ.

ಅವನ ಕೈಯೊಳಗೆ ಒಂದು ಕಾಗದದ ಕಟ್ಟಿದ್ದಿತು. ನಿರ್ಮಲನು ಗಡಬಡಿಸಿ ಎದ್ದು ಅಭಿವಂದಿಸಿ, ಅವನ ಎರಡೂ ಕೈಗಳನ್ನು ಹಿಡಿದು ತನ್ನ ಹತ್ತಿರ ಕುಳ್ಳಿರಿಸಿಕೊಂಡು ಕುಳಿತ.

"ಕರೆದೊಡನೆ ನೀವು ಇದ್ದಲ್ಲಿಂದ ಬಂದು ಬಿಡುತ್ತೀರೆಂದು ಕೇಳಿದ್ದೆ. ಈಗೆಷ್ಟೋ ದಿನಗಳಿಂದ ನಾನು ನಿಮ್ಮನ್ನು ಮನಃಪೂರ್ವಕವಾಗಿ ಕರೆಯುತ್ತಿದೆ" ಎಂದ ನಿರ್ಮಲ.

"ಅದೇಕೆ?" ಫಕೀರ ಸಾಹೇಬನು ನಗುತ್ತ ಕೇಳಿದ.

"ಷೋಡಶಿಯನ್ನು ಕಾಣಬೇಕಾಗಿದೆ. ಅತ್ಯಂತ ಅಗತ್ಯವಿದೆ. ಆಕೆ ಎಲ್ಲಿದ್ದರೂ ಒಮ್ಮೆ ಕಾಣಲೇಬೇಕು."

ಫಕೀರನಿಗೆ ಆಶ್ಚರ್ಯವೂ ಆಗಲಿಲ್ಲ. ಆನಂದವೂ ಆಗಲಿಲ್ಲ. "ಅವಳನ್ನು ಕಾಣದಿರುವುದೇ ನೆಟ್ಟಗೆ" ಎಂದ.

ನಿರ್ಮಲನು ಅತ್ಯಂತ ಲಜ್ಜಿತನಾದ. ಅವನೆಂದ: "ನೀವು ಸರ್ವಜ್ಞರು. ಇಂದು ಅವಳ ಅಗತ್ಯವೆಷ್ಟಿದೆ ಎಂಬುದು ನಿಮಗೆ ಗೊತ್ತಿರಬಹುದು."

"ಇಲ್ಲಪ್ಪ, ನಾನು ಸರ್ವಜ್ಞನಲ್ಲ. ಆದರೆ ಷೋಡಶಿ ನನ್ನ ಮುಂದೆ ಯಾವ ವಿಷಯವನ್ನೂ ಮುಚ್ಚಿಡುವುದಿಲ್ಲ.—" ಎಂದು ಸ್ವಲ್ಪ ತಡೆದು ಫಕೀರನು ಮತ್ತೆಂದ: "ಭೆಟ್ಟಿಯಾಗುವುದು ಬಿಡುವುದು ಅವಳದು ಅವಳಿಗೇ ಗೊತ್ತು. ನನಗದನ್ನು ಹೇಳಲಿಕ್ಕೆ ಬರುವುದಿಲ್ಲ. ಆದರೆ ಅವಳ ಇಂದಿನ ಸ್ಥಿತಿಯನ್ನು ನಿಮಗೆ ಹೇಳುವುದಕ್ಕೆ ಮಾತ್ರ ಅಭ್ಯಂತರವಿಲ್ಲ. ಏಕೆಂದರೆ, ಎಲ್ಲರೂ ಅವಳ ಸರ್ವನಾಶಮಾಡಲು ಕೈತೊಳೆದುಕೊಂಡು ಬೆನ್ನುಹತ್ತಿದಾಗ ನೀವೊಬ್ಬರೇ ಅವಳ ರಕ್ಷಣೆಗಾಗಿ ಧಾವಿಸಿ ಬಂದಿದ್ದಿರಿ. ಅವಳೇ ಹೇಳಿದಳು ಇದನ್ನು."

"ಇಂದು ಆ ಪ್ರಸಂಗವು ಪೂರಾ ತಿರುವುಮುರುವಾಗಿದೆ, ಫಕೀರ ಸಾಹೇಬ. ಇಂದು ಅದೇ ಜನರಿಗೆ ಯಾರಾದರೂ ರಕ್ಷಕರಿದ್ದರೆ, ಈಕೆಯೊಬ್ಬಳೇ."

ಫಕೀರನ ಮುಖವು ಪ್ರಸನ್ನವಾಯಿತು. ಪ್ರಕರಣವನ್ನು ಸವಿಸ್ತಾರವಾಗಿ ತಿಳಿದುಕೊಳ್ಳುವ ಆತುರವನ್ನು ತೋರಿಸದೆ ಅವನೆಂದ: "ಚಂಡೀ

ಗಡದ ಸುದ್ದಿ ನನಗೆ ಗೊತ್ತಿಲ್ಲ. ಆದರೆ ನಾನು ಹೇಳುವುದು ಇಷ್ಟೇ. ಆ ಜನರ ಕಲ್ಯಾಣದ ಭಾರವನ್ನು ದೇವರಮೇಲೆ ಹಾಕಿಬಿಡಿರಿ ನೀವು. ಪಾಪ, ಅವಳನ್ನು ಇವರೊಳಗೆ ಸಿಲುಕಿಸಬೇಡಿರಿ. ನಿರ್ಮಲ ಬಾಬು."

ಹಿಂದಿನೆಲ್ಲ ಸುಖದುಃಖಗಳ ಕಥೆ ನಿರ್ಮಲನಿಗೆ ನೆನಪಾಯಿತು. ಮುಂದೆ ಮಾತನಾಡುವುದು ಕಠಿನವಾಯಿತು. ಅವನು ಸಂಕೋಚಪಡುತ್ತ "ಈಗ ಆಕೆ ಎಲ್ಲಿದ್ದಾಳೆ?" ಎಂದು ಕೇಳಿದ.

"ಆ ಊರಿಗೆ ಕೈವಾಲದಿಷಿ ಎನ್ನುತ್ತಾರೆ"

"ಅಲ್ಲಿ ಕುಶಲವಾಗಿದ್ದಾಳೆ ತಾನೆ?"

ಫಕೀರ ಸಾಹೇಬನು ನಸುನಕ್ಕು ಹೇಳಿದ: "ಇಲ್ಲಿ ನೋಡಿರಿ. ಹೆಣ್ಣು ಜಾತಿಯ ಕುಶಲವಾರ್ತೆ ದೇವರಿಗೂ ತಿಳಿಯುವುದಿಲ್ಲ. ಅವರಲ್ಲಿಯೂ ನಾನೊಬ್ಬ ಫಕೀರ. ಆದರೆ ಒಂದು ಮಾತು ನಿಜ. ಅವಳು ಹಾಯಾಗಿ ಇದ್ದಾಳೆಂದು ನನಗೆನಿಸುತ್ತದೆ."

ನಿರ್ಮಲನು ಕ್ಷಣ ಹೊತ್ತು ಸುಮ್ಮನಿದ್ದು ಪ್ರಶ್ನಿಸಿದ: "ಈಪೊತ್ತೇಕೆ ನೀವು ಇಲ್ಲಿಗೆ ಬಂದಿದ್ದಿರಿ?"

"ನೀವು ಕೇಳುವುದು ಯಥಾರ್ಥವೇ. ಸಂನ್ಯಾಸಿ ಫಕೀರರಿಗೆ ಈ ಸ್ಥಾನ ನಿಷಿದ್ಧವಾಗಿರುವುದೇ ಯೋಗ್ಯ. ಆದರೆ ಸಂಸಾರದ ಮೋಹ ಮನುಷ್ಯನನ್ನು ಸಹಜವಾಗಿ ಬಿಡುವುದಿಲ್ಲ. ಅದಕ್ಕೇ ಈ ಮುಪ್ಪಿನ ಕಾಲದಲ್ಲಿ ನಾನು ಸಂಸಾರಿಯಾಗಲು ಹೊರಟಿದ್ದೇನೆ. ಇದೊಂದು ನೆಪ್ಪಗೇ ಆಯಿತು -- ವೆಚ್ಚವಿಲ್ಲದೆ ನಿಮ್ಮಂಥ ಕಾಯದೆ ಪಂಡಿತರ ಲಾಭವಾಯಿತು—ನಿಮಗೇ ಹೇಳುವಂಥ ವಿಷಯ ಅದು: ದಯವಿಟ್ಟು ಈ ಕಾಗದಗಳನ್ನೊಮ್ಮೆ ನೋಡಿರಿ."

"ಏತರ ಕಾಗದ ಇವು?" ಕೈ ಚಾಚಿ ನಿರ್ಮಲನು ಕೇಳಿದ.

"ಒಂದು ದಾನಪತ್ರದ ಕಚ್ಚಾ ಕರಡು" ಎಂದು ಫಕೀರ ಸಾಹೇಬನು ಕಾಗದಗಳ ಕಟ್ಟನ್ನು ಅವನ ಕೈಯಲ್ಲಿ ಕೊಟ್ಟ.

ಆಗ ನಿರ್ಮಲನಿಗೆ ಎರಡನೆಯವರ ಕೆಲಸದೊಳಗೆ ತಲೆ ಹಾಕುವುದಕ್ಕೆ ಮನಸಿರಲಿಲ್ಲ. ಸಮಯವೂ ಇರಲಿಲ್ಲ. ಅತ್ಯಂತ ನಿಃಸ್ಪೃಹತೆಯಿಂದ ಅದನ್ನು ಇಸಿದುಕೊಂಡು, ನಿದಾನವಾಗಿ ಪುಟಗಳನ್ನು ಮುಗುಚತೊಡಗಿದ.

ನಾಲ್ಕೈದು ಪುಟಗಳನ್ನು ತೆಗೆದುಹಾಕುವುದರೊಳಗೆ ಅವನ ದೃಷ್ಟಿ ಚವಲಾಯಿತು. ಮುದ್ರೆ ಗಂಭೀರವಾಯಿತು. ಹಣೆಯ ಮೇಲೆ ನೀರಿಂಗಿ ಜಿದ್ದವು. ದಾನ ಪತ್ರದಲ್ಲಿ ಉಲ್ಲೇಖಿಸಿದ ಸಂಪತ್ತಿ ಕ್ಷುದ್ರವಲ್ಲ. ಅದರ ವಿವರಣೆಗಾಗಿಯೇ ಬಹಳ ಪುಟಗಳು ವೆಚ್ಚವಾಗಿದ್ದವು. ಅವುಗಳನ್ನು ಶೀಘ್ರ ಗತಿಯಿಂದ ನೋಡಿ ಕೊನೆಯ ಪುಟಕ್ಕೆ ಬಂದ. ಆಗ ಜೀವಾನಂದನ ಪತ್ರವು ಅವನ ನೋಟವನ್ನು ಸೆಳೆಯಿತು. ಆ ಎಂಟು ಹತ್ತು ಸಾಲುಗಳನ್ನು ಅವನು ಒಂದುಸಾರಿಗೆ ಓದಿಕೊಂಡ

ನಿರ್ಮಲನು ಒಮ್ಮೆಲೆ ತಣ್ಣಗಾದ

ಅವನ ಮುದ್ರೆಯನ್ನು ಪರಿಕಿಸಿ ಫಕೀರ ಸಾಹೇಬನೆಂದ: "ಈ ಜಗತ್ತಿನೊಳಗೆ ಒಂದೊಂದು ಅದ್ಭುತ ನಡೆಯುವುದುಂಟು!"

ನಿರ್ಮಲನ ಹೃದಯದಿಂದ ಒಂದು ನಿಡಿದಾದ ಬಿಸಿಯ ಹೊಗೆ ಬಿಟ್ಟಿತು. ಅವನು ತಲೆಯಲ್ಲಾಡಿಸಿ 'ಹಂ' ಎಂದು ಮಾತ್ರ ನುಡಿದ.

"ಕರಡು ಸರಿಯಾಗಿದೆಯಲ್ಲವೆ?"

"ಸರಿಯಾಗಿದೆ. ಆದರೆ ಇವೆಲ್ಲವೂ ಸತ್ಯವೆಂಬುವಕ್ಕೆ ಪ್ರಮಾಣ ವೇನು?"

"ಹಾಗಿಲ್ಲದಿದ್ದರೆ ಮೋಡಲೆ ಸ್ವೀಕರಿಸುತ್ತಿರಲಿಲ್ಲ. ಇದಕ್ಕಿಂತ ಹೆಚ್ಚಿನ ಪ್ರಮಾಣ ಮತ್ತೇನು ಬೇಕು, ನಿರ್ಮಲಬಾಬೂ?" ಎಂದು ಫಕೀರ ಸಾಹೇಬನು ಉತ್ಸುಕತೆಯಿಂದ ಅವನ ಕಡೆ ನೋಡತೊಡಗಿದ.

ಆದರೆ ನಿರ್ಮಲನಿಂದ ಉತ್ತರ ಸಿಕ್ಕಲಿಲ್ಲ. ಅವನ ಕಣ್ಣಿಗೆ ಮಂಜು ಕವಿದಂತಾಗಿತ್ತು, ಹಣೆ ನೀರಿಗೆಗಟ್ಟಿತ್ತು. ಅವನ ಮನಸು ಎಲ್ಲಿ ಅಲೆಯುತ್ತಿತ್ತೋ ಫಕೀರ ಸಾಹೇಬನಿಗೆ ಗೊತ್ತಾಗಿರಲಿಕ್ಕಿಲ್ಲ.

## ೨೮

ಒಮ್ಮಿಂದೊಮ್ಮೆಲೆ ಮಳೆ ಬಂದಿತು. ಕೆಲ ದಿನ ತೆರಪಿಲ್ಲದ ಸುರಿಯುತ್ತಿತ್ತು. ಎಲ್ಲ ಕೆಲಸಗಳು ಅಲ್ಲಿಂದಲ್ಲಿಯೇ ಉಳಿದಿದ್ದವು. ಯಾವಾಗಲೂ ತಿರುಗುತ್ತಲಿದ್ದ ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ಕೂಡ ಬರಲಿಕ್ಕಾಗಲಿಲ್ಲ.

ಚಂಡೀಗಡದಲ್ಲಿ ಕೆಲಸವು ಆರಂಭವಾಗುವುದೆಂಬ ಅವನ ಅಪ್ಪಣೆ ಮಳೆ ಹೊರಪಾದ ಮೇಲೆ ಬಂದಿತು. ಆ ದಿವಸ ಇಂದು.

ಬಾರುಈ ನದಿಯ ಗಡದಲ್ಲಿ ಅವನ ಗೂಡಾರ ಹೊಯ್ದಿತ್ತು. ಕೋಳಿ, ತತ್ತಿ, ಹಾಲು, ತುಪ್ಪ ಮೊದಲಾದವನ್ನು ಒಪವಿಸುವುದರಲ್ಲಿ ಏಕಕೌಡಿ ವ್ಯಸ್ತನಾಗಿದ್ದ. ಇಂದು ಮಧ್ಯಾಹ್ನ ಸಾಹೇಬನ ಕುದುರೆಯ ಖುರಪುಟದ ಧೂಳು ಚಂಡೀಗಡದಲ್ಲಿ ಬೀಳುವುದೆಂದೂ ಎಣಿಸಲಾಗಿತ್ತು.

ಕಳೆದ ರಾತ್ರಿಯಿಂದ ಮಳೆ ನಿಂತಿದ್ದರೂ ಆಕಾಶದ ಮುದ್ರೆಯಿನ್ನೂ ಬದಲಾಗಿರಲಿಲ್ಲ. ಮಳೆ ನಿಂತ ಹಾಗಾಯಿತೆಂದು ಖಂಡಿತವಾಗಿ ಹೇಳಲು ಬರುವಂತಿರಲಿಲ್ಲ. ಮತ್ತೆ ಯಾವಾಗ ಮಳೆ ಹತ್ತುವುದೋ ಎಂದು ಯಾವಾಗಲೂ ಎನಿಸುತ್ತಿತ್ತು.

ಮನೆ ಸುಟ್ಟುಹೋದ ಬಳಿಕ. ನದಿಯ ಕಡೆಗಿದ್ದ ಸಣ್ಣ ಅಟ್ಟದ ಮನೆಯಲ್ಲಿ ಜೀವಾನಂದನು ಇರುತ್ತಿದ್ದ. ಆ ಮನೆಯ ಕಟ್ಟೆಯ ಮೇಲೆ ಮಡಿಚುವ ಮಂಚವನ್ನು ಹಾಕಿಕೊಂಡು, ಅವನು ಬೆಳಗಿನಿಂದಲೂ ನದಿಯ ಕಡೆಗೇ ನೋಡುತ್ತ ಕುಳಿತುಕೊಂಡಿದ್ದ.

ಈಗ ನದಿಯು ಒಡಲು ಸೊರಗಿರಲಿಲ್ಲ. ಎರಡೂ ದಂಡೆಗಳನ್ನು ಒತ್ತಿಕೊಂಡು ನೀರು ವೇಗವಾಗಿ ಹರಿಯುತ್ತಿತ್ತು. ಘೋ ಘೋ ಎಂದು ಧ್ವನಿಗೈಯುತ್ತಿತ್ತು.

ಜೀವಾನಂದನು ಏನು ವಿಚಾರ ಮಾಡುತ್ತಿದ್ದನೋ ಅವನಿಗೇ ತಿಳಿಯದು. ಜ್ವರದಿಂದ ಅವನಿಗೆ ಬೇಜಾರು ಬಂದಿತ್ತು. ಜೀವನದ ಜೊತೆಗಾತಿಯಾದ ಹೊಟ್ಟೆಶೂಲೆ ಕಡಿಮೆಯಾಗಿತ್ತು, ಪೂರಾ ಹೋಗಿರಲಿಲ್ಲ.

ಅವನಿನ್ನೂ ಹಾಸಿಗೆಯನ್ನು ಬಿಟ್ಟಿರಲಿಲ್ಲ. ಅವನಿಗೆ ಅಡ್ಡಾಡಲು ತ್ರಾಣವಿರಲಿಲ್ಲ. ಮ್ಯಾಜಿಸ್ಟ್ರೇಟನು ಬಂದರೆ ಪಲ್ಲಕ್ಕಿಯಲ್ಲಿ ಅವನ ದರ್ಶನಕ್ಕೆ ಹೋಗಬೇಕೆಂದು ನಿಶ್ಚಯಿಸಿದ್ದ. ಸುಳ್ಳು ಹೇಳಬಾರದೆಂದು ಅವನು ಪ್ರತಿಜ್ಞೆ ಮಾಡಿದ್ದ. ಮದ್ಯವನ್ನು ಬಿಟ್ಟ ಸಂಕಲ್ಪದಷ್ಟೇ ಇದೂ ದೃಢವಾಗಿತ್ತು. ಇನ್ನು ಮೇಲೆ ಸಾಯುವ ತನಕ ಯಾರಿಗೂ ತೊಂದರೆ ಕೊಡಬಾರದೆಂದೂ ಅವನು ನಿರ್ಧರಿಸಿದ್ದ.

ಈಗ ನಿಜಕ್ಕೂ ಯಾರ ಮೇಲೂ ಅವನ ದ್ವೇಷವಿಲ್ಲ, ಯಾರ ಬಗ್ಗೆಯೂ ಯಾವ ಆಕ್ಷೇಪವೂ ಇಲ್ಲ.

'ಮನುಷ್ಯನಿಂದ ತಪ್ಪುಗಳು ಆಗುವವೇ – ತಪ್ಪುವುದು ಮನುಷ್ಯನ ಸ್ವಭಾವವೇ' ಎಂದು ಅವನು ಮನಸಿನೊಳಗೆ ಎಂದುಕೊಳ್ಳುತ್ತಲಿದ್ದ. ತನ್ನ ಹೇಳಿಕೆಯಿಂದ ತನ್ನೊಡನೆ ಇತರರೂ ಶಿಕ್ಷೆಗೆ ಗುರಿಯಾಗಬೇಕಾಗುವುದಲ್ಲ, ಎಂಬ ಕಲ್ಪನೆಯಿಂದ ಅವನ ಮನಸಿಗೆ ನೋವಾಗುತ್ತಲಿತ್ತು. ಯಾವ ರೀತಿ ಹೇಳಿದರೆ ಇತರರಿಗೆ ಪೆಟ್ಟು ತಗುಲಲಾರದೆಂಬುದನ್ನು ಅವನು ಎಷ್ಟೋ ಯೋಚಿಸಿ ನೋಡಿದ. ಆದರೆ ಕೊನೆಯ ತನಕ ಸರಳವಾಗಿ ವಿಚಾರಮಾಡಿ ನಿರ್ಧಾರಕ್ಕೆ ತಲಪುವ ಸ್ಥಿತಿಯಲ್ಲಿ ಅವನ ಮನಸಿರಲಿಲ್ಲ.

ಪುನಃ ಪುನಃ ಅದೇ ಪ್ರಶ್ನೆ ಅವನೆದುರಿಗೆ ನಿಲ್ಲುತ್ತಿತ್ತು. ಪುನಃ ಪುನಃ ಆ ಸಮಸ್ಯೆಯನ್ನು ಬಿಡಿಸುವ ವಿಚಾರದಲ್ಲಿಯೇ ಅವನ ಮನಸು ತೊಡಗುತ್ತಿತ್ತು. ಆದರೂ ಯಾವ ಫಲಿತಾಂಶವೂ ಹೊರಡದಿರುವುದನ್ನು ಕಂಡು ಅವನು ಅತ್ಯಂತ ಹತಾಶನಾಗುತ್ತಿದ್ದ.

ಈ ವಿಚಾರದ ಚಕ್ರತೀರ್ಥದಲ್ಲಿ ಸುತ್ತುತ್ತಿದ್ದಾಗ ಅಕಸ್ಮಾತ್ ಅವನ ಮನಸು ಮತ್ತು ದೃಷ್ಟಿ ಒಂದು ಕಡೆ ಸ್ಥಿರವಾದವು.

ನದಿಯ ಅನುಕೂಲ ಪ್ರವಾಹದೊಡನೆ ಸಣ್ಣದೊಂದು ನಾವು ವೇಗವಾಗಿ ಬರುತ್ತಲಿತ್ತು. ಅದು ಮನೆಯ ಎದುರಿಗೆ ಬರುತ್ತಲೇ ಅಂಬಿಗನು ನಾವನ್ನು ದಂಡೆಗೆ ಹಚ್ಚಿ ತರುಬಿದ.

ತನ್ನ ಮನೆಯ ಮುಂದೆಯೇ ದೋಣಿ ನಿಂತುದನ್ನು ಕಂಡು ಜೀವಾನಂದನು ತಕ್ಕೆಯ ಮೇಲೆ ಭಾರಹಾಕಿ ಎದ್ದು ಕುಳಿತು ನೋಡತೊಡಗಿದ. ಇಬ್ಬರು ಗಂಡುಸರು, ಮೂವರು ಹೆಂಗುಸರು ದೋಣಿಯಿಂದಿಳಿದು ಬರುತ್ತಲಿದ್ದರು. ದಟ್ಟವಾದ ಮರಗಳ ನಡುವೆ ಬರುತ್ತಿದ್ದುದರಿಂದ ಅವರು ಯಾರೆಂಬುದು ಸ್ಪಷ್ಟವಾಗಿ ತಿಳಿಯಲಿಲ್ಲ.

ಅವರಲ್ಲಿ ಒಬ್ಬನನ್ನು ಮಾತ್ರ ಸರಿಯಾಗಿ ಗುರುತಿಸಿದ. ಅವನು ಜನಾರ್ದನರಾಯ. ಪ್ರೌಢಸ್ತ್ರೀ ಅವನ ಹೆಂಡತಿಯೇನೋ, ಇನ್ನೊಬ್ಬಳು ಮಗಳಾಗಿರಬೇಕು, ಬಹುಶಃ ಅವನು ಎಲ್ಲಿಗೋ ಹೋಗಿರಬೇಕು, ಮ್ಯಾಜಿಸ್ಟ್ರೇಟನು ಬರುವನೆಂದು ತಿಳಿದು ಅವಸರವಸರದಿಂದ ತಿರುಗಿ ಬಂದಿರಬೇಕು.

ಒಂದು ಸಂಗತಿ ಮಾತ್ರ ಅವನನ್ನು ಅಚ್ಚರಿಗೊಳಿಸಿತು. ರಾಯನ ಮನೆಯ ಹತ್ತಿರದ ಘಾಟನ್ನು ಬಿಟ್ಟು ಇಷ್ಟು ದೂರ ದೋಣಿಯನ್ನು ತರುಬಿದ ಉದ್ದೇಶವು ಏನಿರಬಹುದು? – ಆ ಘಾಟನಲ್ಲಿ ಅನುಕೂಲವಿರ ಲಿಕ್ಕಿಲ್ಲ, ಅಥವಾ ತಪ್ಪಿ ಇಲ್ಲಿ ನಿಂತಿರಬಹುದು. ಇಲ್ಲವೆ ಮ್ಯಾಜಿಸ್ಟ್ರೇಟನ ಕಣ್ಣು ತಪ್ಪಿಸುವುದಕ್ಕಾಗಿ ಇಲ್ಲಿ ಇಳಿದಿರಬಹುದು!

ಏನಾದರೂ ಇದ್ದುಕೊಳ್ಳಲಿ. ಬಂದವರು ರಾಯಮಹಾಶಯ. ಅವನ ಹೆಂಡತಿ, ಅವನ ಮಗಳು ಎಂದು ಖಂಡಿತವಾದುದರಿಂದ ಸುಮ್ಮನೆ ಕುಳಿತುಕೊಂಡು ಆಯಾಸ ಮಾಡಿಕೊಳ್ಳುವುದೇಕೆಂದು ಜೀವಾನಂದನು ಪುನಃ ಹಾಸಿಗೆಯ ಮೇಲೆ ಅಡ್ಡಾದ.

ಕಣ್ಣುಮುಚ್ಚಿ ಮನಸಿನೊಳಗೇ ಅವನೆಂದ: "ತಪ್ಪಿಗಾಗಿ ದಂಡಿಸುವ ಒಡೆಯ ಬರೀ ಸರಕಾರೀ ಕೋರ್ಟುಗಳಲ್ಲಿಯೇ ಇರುತ್ತಾನೋ? ಒಂದು ಸಮಯ, ಈ ಮನುಷ್ಯನನ್ನು ಮ್ಯಾಜಿಸ್ಟ್ರೇಟನು ಈ ಮೊದಲು ನೋಡಿರ ಲಿಕ್ಕೂ ಇಲ್ಲ. ನೋಡಿದ್ದರೂ ಗುರುತಿಸುತ್ತಿದ್ದಿಲ್ಲ. ಆದರೂ ಸಂದೇಹ ದಿಂದ ಅವನೇಕೆ ಎಚ್ಚರಪಡುತ್ತಿದ್ದಾನೆ? ಹೆಂಡತಿಯ ಮತ್ತು ಮಗಳ ಎದುರಿಗೆ ಹೇಡಿತನವನ್ನು ಪ್ರದರ್ಶಿಸುವುದಕ್ಕಿಂತ ಹೆಚ್ಚಿನ ಬೇರೆ ಶಿಕ್ಷೆಯೂ ಉಂಟೆ? ಈ ಶಿಕ್ಷೆಯೇನು ಕಡಮೆಯೆ?"

ಅಕಸ್ಮಾತ್ತಾಗಿ ಯಾರೋ ಬಂದು ತಲೆದಿಂಬಿನ ಹತ್ತಿರ ಕುಳಿತುದ ರಿಂದ ಮಂಚವು ಅದಿರಿತು. ಬೆಚ್ಚಿಬಿದ್ದು ಕಣ್ಣುತೆರೆದು ಜೀವಾನಂದನು ಪ್ರಶ್ನಿಸಿದ: "ಯಾರು?"

"ನಾನು." ಬಂದು ಕುಳಿತ ವ್ಯಕ್ತಿ ಅವನ ಹಣೆಯಮೇಲೆ ಕೈಯಿಟ್ಟು ಹೇಳಿತು.

ತನ್ನ ದುರ್ಬಲವಾದ ಹಸ್ತದಿಂದ ಆ ಕೈಯನ್ನು ಗಟ್ಟಿಯಾಗಿ ಹಿಡಿದು, ಜೀವಾನಂದನು ಎಷ್ಟೋ ಹೊತ್ತು ಹಾಗೇ ಸ್ತಬ್ಧವಾಗಿದ್ದ.

"ಇದೇ ದೋಣಿಯಲ್ಲಿ ಬಂದೆಯಾ?" ಕೆಲಹೊತ್ತಿನ ಮೇಲೆ ಮೆಲ್ಲನೆ ಅವನು ಕೇಳಿದ.

"ಹೌದು."

“ ತಿಳಿಯಿತು. ಆದರೆ ರೈತರು ಹೇಗೆ ಮೊಕದ್ದಮೆ ತಿರುಗಿ ತಕ್ಕೊಳ್ಳು ವರು ? ಸಾಗರ ಹೇಗೆ ಒಪ್ಪಿಯಾನು ? ”

“ ಅವರು ನನ್ನ ಮುಂದೆ ಒಪ್ಪಿದ್ದಾರೆ.”

“ ಒಪ್ಪಿದರೇ ? ಆಶ್ಚರ್ಯ ! ”

“ ಅಲ್ಲ, ಆಶ್ಚರ್ಯವಲ್ಲ. ಅವರು ನನ್ನನ್ನು ‘ ಅವ್ವ ’ ಎಂದು ಕರೆಯುತ್ತಾರೆ ! ”

“ ಅದು ನನಗೆ ಗೊತ್ತಿದೆ. ”

ಜೀವಾನಂದನ ಮುಷ್ಟಿ ಸಡಿಲುತ್ತ ಬಂದಿತು. ಕೆಲ ಹೊತ್ತು ಹಾಗೇ ಸ್ವಸ್ಥವಾಗಿ ಬಿದ್ದುಕೊಂಡಿದ್ದು ಬಳಿಕ ಮೆಲ್ಲನೆಂದ : “ ಚೆಲೋ ಆಯಿತು ! ಇಂದು ಬೆಳಗಿನಿಂದಲೂ ವಿಚಾರ ಮಾಡುತ್ತಿದ್ದೆ ಅಲಕಾ, ಈ ಭಯಂಕರ ಕಠಿನ ಕೆಲಸ ನನ್ನಿಂದ ಹೇಗೆ ನೀಗೀತೆಂದು. ಈಗ ನಾನು ಉಳಿದು ಕೊಂಡೆ. ಇನ್ನು ನಾನು ಮಾಡುವುದು ಏನೂ ಇಲ್ಲ. ನೀನೇ ಎಲ್ಲವನ್ನೂ ಬಿಡಿಸಿಬಿಟ್ಟೆ ! ”

ಅದನ್ನೊಪ್ಪಿಕೊಂಡು ಷೋಡಶಿ ನುಡಿದಳು : “ ನಿಮ್ಮ ಕೆಲಸ ತೀರಿರ ಬಹುದು. ನನ್ನ ಕೆಲಸ ಮಾತ್ರ ಇನ್ನೂ ಇದೆ— ” ಎಂದು ಜಾರಿ ಹಾಸಿಗೆಯ ಮೇಲೆ ಬಿದ್ದಿದ್ದ ಜೀವಾನಂದನ ಕೈಯನ್ನು ತನ್ನ ಕೈಯೊಳಗೆ ತೆಗೆದುಕೊಂಡು ಅವನ ಕಿವಿಯ ಹತ್ತಿರ ಬಾಯನ್ನೊಯ್ದು ಹೇಳಿದಳು : “ ದೋಣಿ ಅಣಿಯಾಗಿದೆ. ಹೇಗಾದರೂ ಮಾಡಿ ನಿಮ್ಮನ್ನು ಇಲ್ಲಿಂದ ಕರೆದುಕೊಂಡು ಹೊರಟುಹೋದರೆ, ನನ್ನ ದೊಡ್ಡದೊಂದು ಕೆಲಸ ಆದಂತಾ ಯಿತು. ನಡೆಯಿರಿ ” ಎಂದು ಅವಳು ಬಾಗಿ ಜೀವಾನಂದನ ಎದೆಯ ಮೇಲೆ ತಲೆಯನ್ನಿಟ್ಟಳು.

ಎಷ್ಟೋ ಹೊತ್ತು ಯಾರೂ ಏನೂ ಮಾತನಾಡಲಿಲ್ಲ. ಅವನೆದೆಯ ದಡದಡಿಕೆ ಮಾತ್ರ ಅವಳಿಗೆ ಸ್ಪಷ್ಟವಾಗಿ ಕೇಳುತ್ತಿತ್ತು.

“ ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತೀ ? ”

“ ದಾರಿ ಸಿಕ್ಕ ಕಡೆ.”

“ ಹೊರಡುವುದು ಯಾವಾಗ ? ”

“ ಈಗಲೇ. ಸಾಹೇಬರು ಬರುವುದರೊಳಗೇ.“

"ರಾಯಮಹಾಶಯರು ಎಳೆದುಕೊಂಡು ಬಂದರೇನು, ತಮ್ಮನ್ನು ಉಳಿಸಿಕೊಳ್ಳಲಿಕ್ಕೆ ?"

"ಹೌದು. ಆದರೆ ರಕ್ಷಿಸುವುದು ಹೈಮಳ ತಂದೆಯನ್ನು, ಜನಾರ್ದನ ರಾಯರನ್ನಲ್ಲ."

ಜೀವಾನಂದನು ಅವಳ ಮುಖವನ್ನು ನೋಡುತ್ತ ಕೇಳಿದ: "ಆದರೆ ನನ್ನ ರೈತರು? ಅಜ್ಜ ಮುತ್ತಜ್ಜಂದಿರ ಕಾಲದಿಂದಲೂ ಕೂಡಿಬಿದ್ದ ಅವರ ಋಣವನ್ನು ಹೇಗೆ ತೀರಿಸುವುದು ?"

ಅವನ ದೃಷ್ಟಿಯಿಂದ ತಪ್ಪಿಸಿಕೊಂಡು ಷೋಡಶಿ ಹೇಳಿದಳು: "ಅಜ್ಜ ಮುತ್ತಜ್ಜಂದಿರಿಂದ ಕೂಡಿಬಿದ್ದ ಋಣವನ್ನು ಮಕ್ಕಳು ಮೊಮ್ಮಕ್ಕಳು ತೀರಿಸಿಯಾರು!"

ಜೀವಾನಂದನು ಆನಂದಿತನಾದ. "ಹೌದು ನಿಜ, ಅಲಕಾ. ಇನ್ನು ತಡಮಾಡಿ ಪ್ರಯೋಜನವಿಲ್ಲ. ಇನ್ನು ನಾವಿಬ್ಬರೂ ಈ ಭಾರವನ್ನು ವಹಿಸಬೇಕು" ಎಂದ.

ಷೋಡಶಿ ಕೈಜೋಡಿಸಿ "ಧನಿಯರಲ್ಲಿ ದಾಸಿಯದು ಒಂದೇ ಬೇಡಿಕೆ —ಪ್ರಜೆಗಳ ಭಾರವನ್ನು ಹೊರುವುದರೊಳಗೆ ಧನಿಯರು ನುಚ್ಚುನುರಿ ಆಗ ಬಾರದು. ಹುಟ್ಟಿದಂದಿನಿಂದ ಎಷ್ಟೋ ಭಾರ ಹೊತ್ತಿದ್ದೀರಿ. ಈಗ ಪ್ರಕೃತಿ ಕೆಟ್ಟಿರುವಾಗ ಯಾರೂ ಹೆಸರಿಡುವುದಿಲ್ಲ. ಇನ್ನು ಕೆ ಸಾಹೇಬರು ಯಾವಾಗ ಬಂದಾರೋ ನಿಯಮವಿದ್ದಲ್ಲ. ನಡೆಯಿರಿ!"

ಜೀವಾನಂದನು ಬರೀ ನಗೆಯಿಂದ ಉತ್ತರವಿತ್ತ. ಅವಳ ಕೈ ಹಿಡಿದು ಕೊಂಡು ಎದ್ದುನಿಂತ. ಹೀಗೆ ನನ್ನ ಎಲ್ಲ ಶಕ್ತಿಯನ್ನೂ ಹರಣಮಾಡ ಬೇಡ ಅಲಕಾ! ನಾನು ದುಃಖಿಗಳ ಸೇವೆ ಮಾಡುತ್ತಿರುವುದನ್ನು ಕಂಡರೆ ನಿನಗೆ ಖಂಡಿತ ಸಮಾಧಾನವಾಗುವುದು" ಎಂದು ಅವನೆಂದ.

ಅವನ ಮಾತನ್ನು ಕೇಳಿ ಷೋಡಶಿಯ ಕಣ್ಣುಗಳೆರಡೂ ನೀರಿನಿಂದ ತುಂಬಿದವು. ಇಷ್ಟು ದೊಡ್ಡ ಆತ್ಮತ್ಯಾಗ ಮಾಡಿ ಯಾವನನ್ನು ಸಂಪೂರ್ಣ ವಾಗಿ ಗೆದ್ದಿದ್ದಳೋ ಅವನ ಮುಖವನ್ನು ನೋಡುತ್ತಿದ್ದಾಗ, ಕಾಲಡಿಯ ನೆಲವು ಅದಿರುತ್ತಿರುವಂತೆ ಅವಳಿಗೆ ಭಾಸವಾಯಿತು.

ಅವಳು ತನ್ನ ಮನವನ್ನು ಸಾವರಿಸಿಕೊಂಡಳು. ಅವನ ಕೈಯನ್ನು ಅದುಮಿ ಅವಳೆಂದಳು : "ಒಳ್ಳೇದು. ನಡೆಯಿರಿನ್ನು ಹಾಗಾದರೆ. ದೋಣಿಯಲ್ಲಿ ಕೂತುಕೊಂಡೇ ಸುಖ ಸಮಾಧಾನಗಳಿಂದ ಮಾತನಾಡುವ. ನಿಮಗೆ ಯಾವ ಕೆಲಸಮಾಡುವ ಶಕ್ತಿಯಿದೆ, ಸಿಮಗೆ ಯಾವ ಕೆಲಸ ಒಪ್ಪಿಸಬೇಕು, ಯಾವ ಕೆಲಸ ಮಾಡಗೊಡಬಾರದು ಎಂಬುದನ್ನು ಅಲ್ಲಿಯೇ ಸಿರ್ಧರಿಸುವ."

"ಭಲೆ, ಚೆನ್ನಾಗಿದೆ!"

ಎಂದು ಜೀವಾನಂದನು ಷೋಡಶಿಯ ಕೈಯನ್ನು ಹಿಡಿದುಕೊಂಡು ಸಾಗಿದ.



# ಕನ್ನಡದಲ್ಲಿ ಗಾಂಧೀ ಸಾಹಿತ್ಯ

## ಗಾಂಧೀ ವಿಚಾರದೋಹನ

ಗಾಂಧೀತತ್ತ್ವ ತಳಹದಿಯನ್ನು ಸೂತ್ರರೂಪವಾಗಿ, ಆದರೆ ವಿವರವಾಗಿ, ತಿಳಿಸುವ
ಒಂದೇ ಒಂದು ಗ್ರಂಥ.

ಬರೆದವರು:—ಶ್ರೀ ಕಿಶೋರಿಲಾಲ ಮಶ್ರುವಾಲಾ

ಸಂಪಾದಕರು:—ಶ್ರೀ ದಿವಾಕರ ರಂಗರಾಯರು

ಬೆಲೆ ೨—೮—೦

## ನನ್ನ ಆರಂಭಜೀವನ

ವಿದ್ಯಾರ್ಥಿಗಳಿಗಾಗಿ ಮತ್ತು ಜನಸಾಮಾನ್ಯರಿಗಾಗಿ ಪ್ರಕಟವಾದ
ಗಾಂಧೀಜಿಯ ಆತ್ಮಕಥೆಯ ಕಿರಿಯ ಆವೃತ್ತಿ.

ಸಂಪಾದಕರು:—ದಿವಂಗತ ಮಹಾದೇವ ದೇಸಾಯಿ

ಬೆಲೆ ೨—೦—೦

## ಸ್ತ್ರೀಯರ ಸಮಸ್ಯೆಗಳು

ಭಾರತೀಯ ಸ್ತ್ರೀಯರ ಸಮಸ್ಯೆಗಳನ್ನು ಗಾಂಧೀಜಿಯವರು ತಮ್ಮದೇ ಆದ
ವಿಶಿಷ್ಟ ದೃಷ್ಟಿಕೋನದಿಂದ ಚರ್ಚಿಸಿದ ಲೇಖನಗಳ ಸಂಗ್ರಹ.

ಬೆಲೆ ೧—೪—೦

## ಮಂಗಲ ಪ್ರಭಾತ

ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ವಾದ ಮುಂತಾದ ಹದಿಮೂರು ವ್ರತಗಳನ್ನು
ಕುರಿತು ಗಾಂಧೀಜಿಯವರು ಯರವಡಾ ಸೆರೆಮನೆಯಿಂದ ಸಾಬರಮತಿ
ಆಶ್ರಮವಾಸಿಗಳಿಗೆ ಬರೆದು ಕಳಿಸಿದ ಪ್ರವಚನಗಳು

ಬೆಲೆ ೦—೮—೦

## ಮಕ್ಕಳ ಮಹಾತ್ಮಾ ಗಾಂಧಿ

ಚಿಕ್ಕ ಮಕ್ಕಳಿಗಾಗಿ ಬರೆದ ಗಾಂಧೀಜಿಯ ಸಚಿತ್ರ ಜೀವನ ಚರಿತ್ರೆ.
ದೊಡ್ಡಕ್ಷರಗಳಿಂದ ಸುಂದರ ಮುದ್ರಣ.

ಬೆಲೆ ೦—೬—೦

ಅಚ್ಚಿನಲ್ಲಿದೆ

## ಅಸ್ಪೃಶ್ಯತೆಯ ಕಲಂಕ

ಅಸ್ಪೃಶ್ಯತೆಯನ್ನು ಕುರಿತು ಗಾಂಧೀಜಿಯವರ ಲೇಖನ.

ಸಂಪಾದಕರು:—ಶ್ರೀ ಪಾಟೀಲ ಕಲ್ಲನಗೌಡರು, ಬಿ. ಎ.